# ಕರ್ನಾಟಕ ಲೋಚನ

ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೯ ಸಂಚಿಕೆ : ೧ ಜನವರಿ-ಜೂನ್ ೨೦೧೫




ಸಂಪಾದಕರು

**ಪ್ರೊ॥ ಬಿ. ಅಬ್ದುಲ್ ಬಷೀರ್**

ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ ಕಲಾಭವನ (ರಿ.)
೪ನೇ ಮುಖ್ಯ ರಸ್ತೆ, ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯, ದೂರವಾಣಿ : ೨೬೬೧ ೫೮೭೭



ಕರ್ನಾಟಕ

# ಲೋಚನ

## ಷಾಣ್ಮಾಸಿಕ ವಿದ್ವತ್ ಪತ್ರಿಕೆ

ಸಂಪುಟ : ೨೯ ಸಂಚಿಕೆ : ೦೧ ಜನವರಿ-ಜೂನ್ ೨೦೧೫

ಸಂಪಾದಕರು

**ಪ್ರೊ॥ ಜಿ. ಅಬ್ದುಲ್ ಬಷೀರ್**



ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ (ರಿ)
೩ನೆಯ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು - ೫೬೦ ೦೧೯.
ದೂರವಾಣಿ : ೨೬೬೧೫೮೭೭, ೨೬೬೭೬೭೭೩

ಇ-ಮೇಲ್ : bmsritrust@gmail.com

KARNATAKA LOCHANA - (Half yearly Research Journal)
Editor : Prof. **G. Abdul Basheer**. Published by **B.M.Sri. Smaraka Prathistana, M.V.Si. P.G. Research Center, B.M.Sri. Kalabhavan(R),** 3rd Main Road, Narasimharaja Colony, Bangalore - 560 019. Ph.No. 080-26615877, 26676773 Pages: vi + 138

Year : January-June 2015 (Vol. 29 , No. 1),

| | |
|---|---|
| Yearly Subscription | : **Rs. 100/-** (for Libraries) |
| For Individual | : **Rs. 50/-** |

| | |
|---|---|
| ವಾರ್ಷಿಕ ಚಂದಾ | : ರೂ. ೧೦೦/- (ಗ್ರಂಥಾಲಯಗಳಿಗೆ) |
| ವ್ಯಕ್ತಿಗಳಿಗೆ | : ರೂ. ೫೦/- |
| ಕರ್ನಾಟಕ ಲೋಚನದ ಆಜೀವ ಚಂದಾ | : ರೂ. ೫೦೦/- |
| ಪ್ರತಿಷ್ಠಾನದ ಆಜೀವ ಸದಸ್ಯತ್ವ | : ರೂ. ೧೦೦೦/- |




ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಮುಂಮಾತು

ಇಪ್ಪತ್ತೈದು ವರ್ಷಗಳಿಂದ ಪ್ರಕಟವಾಗುತ್ತಿರುವ 'ಕರ್ನಾಟಕ ಲೋಚನ' ಬಿ.ಎಂಶ್ರೀ. ಸ್ಮಾರಕ ಪ್ರತಿಷ್ಠಾನದ ಸ್ಥಾಪಕ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಕನಸಿನ ಕೂಸು. ಪ್ರತಿಷ್ಠಾನವು ಸಂಶೋಧನ ಕೇಂದ್ರವಾಗಬೇಕೆಂದು ಕನಸು ಕಂಡಿದ್ದ ಅವರು, ಆ ಕನಸು ನಿಧಾನವಾಗಿ ನನಸಾಗುತ್ತಿದ್ದುದನ್ನು ಗಮನಿಸಿ, ನಾಡಿನ ವಿವಿಧೆಡೆಯಲ್ಲಿ ಕನ್ನಡ ಸಂಸ್ಕೃತಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನ ಲೇಖನಗಳಿಗೆ ವೇದಿಕೆಯಾಗಬೇಕೆಂಬ ಉದ್ದೇಶದಿಂದ ಈ ಅರ್ಧವಾರ್ಷಿಕ ಪತ್ರಿಕೆಯನ್ನು ಪ್ರಾರಂಭಿಸಿದರು. ಅವರ ಆಶಯಕ್ಕೆ ಅನುಗುಣವಾಗಿ ಉನ್ನತ ಗುಣಮಟ್ಟದ ಸಂಶೋಧನ ಲೇಖನಗಳನ್ನು ಹೊತ್ತು ಪತ್ರಿಕೆಯು ಪ್ರಕಟವಾಗುತ್ತಿದೆ. ಕನ್ನಡ ನಾಡಿನ ಅನೇಕ ವಿಶ್ವವಿದ್ಯಾನಿಲಯಗಳಂತಹ ಉನ್ನತ ಅಧ್ಯಯನ ಕೇಂದ್ರಗಳು ನಡೆಸಿಕೊಂಡು ಬರುತ್ತಿದ್ದ ಸಂಶೋಧನೆಗೆ ಮೀಸಲಾದ ನಿಯತಕಾಲಿಕೆಗಳಲ್ಲಿ ಅನೇಕವು ಈಗಾಗಲೇ ನಿಂತುಹೋಗಿವೆ. ಹಾಗಾಗದೆ ಇದನ್ನು ಆದಷ್ಟೂ ನಿಗದಿತ ವೇಳೆಗೆ ಹೊರತರುವ ಉದ್ದೇಶ ಪ್ರತಿಷ್ಠಾನದ್ದು. ಆದರೆ ದಿನೇ ದಿನೇ ಗುಣಮಟ್ಟದ ಲೇಖನಗಳ ಕೊರತೆ ಎದ್ದು ಕಾಣುತ್ತಿದೆ; ಹೀಗಾಗಿ ಮೈದುಂಬಿಕೊಂಡು ಪತ್ರಿಕೆ ಬರಲು ಅಡ್ಡಿಯೇ ಎನ್ನಬಹುದು. ಪತ್ರಿಕೆಯ ಮುದ್ರಣವ್ಯವಸ್ಥೆಗೆ ವಿಳಂಬವೇನಾಗದು, ಆದರೆ ಕೆಲವು ವೇಳೆ ಸಾಕಷ್ಟು ಲೇಖನಗಳು ಕೈಸೇರದೆ ಪತ್ರಿಕೆ ತಡವಾಗಿ ಹೊರಬರುವುದು ಅನಿವಾರ್ಯವಾಗಿಬಿಡುತ್ತದೆ. ಅನೇಕ ಸಂದರ್ಭಗಳಲ್ಲಿ ಲೇಖಕರನ್ನು ಕೇಳಿಕೊಂಡು ಲೇಖನಗಳನ್ನು ಬರೆಯಿಸುವ ಶ್ರಮವನ್ನೂ ಪತ್ರಿಕೆಯ ಸಂಪಾದಕರು ವಹಿಸಿಕೊಳ್ಳಬೇಕಾಗುತ್ತದೆ. ಇದನ್ನು ಯಶಸ್ವಿಯಾಗಿ ಮಾಡಿಕೊಂಡು ಬರುತ್ತಿರುವ **'ಕರ್ನಾಟಕ ಲೋಚನ'**ದ ಸಂಪಾದಕರಾದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ವಹಿಸುವ ಶ್ರದ್ಧೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಪ್ರತಿಷ್ಠಾನದ ಕಾರ್ಯದರ್ಶಿಗಳಲ್ಲೊಬ್ಬರಾದ ಅವರು ಆಯೋಜಿಸುವ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ವಿದ್ವಾಂಸರ ದುಂಬಾಲುಬಿದ್ದು ಆದಷ್ಟೂ ಕಾಲಕ್ಕೆ ಸರಿಯಾಗಿ ಪತ್ರಿಕೆ ಹೊರಬರುವಂತೆ ಅವರು ನೋಡಿಕೊಳ್ಳುತ್ತಿದ್ದಾರೆ. ಇದಕ್ಕಾಗಿ ಅವರ ಬಗ್ಗೆ ಪ್ರತಿಷ್ಠಾನಕ್ಕೆ ವಿಶೇಷ ಮೆಚ್ಚಿಕೆ. ಆಸಕ್ತರು ಈ ಸಂಚಿಕೆಯನ್ನು ಪ್ರೀತಿಯಿಂದ ಬರಮಾಡಿಕೊಳ್ಳುವರೆಂಬುದು ನನ್ನ ನಂಬಿಕೆ.

**–ಡಾ॥ ಪಿ. ವಿ. ನಾರಾಯಣ**
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

# ಸಂಪಾದಕೀಯ

'ಕರ್ನಾಟಕ ಲೋಚನ'–ಸಂಪುಟ ೨೯, ಸಂಚಿಕೆ ೦೧, ಜನವರಿ–ಜೂನ್ ೨೦೧೫ ಸಹೃದಯರ ಕೈಗೆ ಸಕಾಲದಲ್ಲಿ ತಲುಪುತ್ತಿದೆ ಎಂದು ಭಾವಿಸಿದ್ದೇನೆ. ಲೇಖಕ ಮಿತ್ರರು ವಿವಿಧ ವಿಷಯಗಳಿಗೆ ಸಂಬಂಧಿಸಿದ ಸಂಶೋಧನ ಲೇಖನಗಳನ್ನು ಕಳುಹಿಸಿಕೊಡುವ ಕೃಪೆ ಮಾಡಬೇಕೆಂದು ಕೋರುತ್ತೇನೆ. ಈ ಸಂಚಿಕೆಯಲ್ಲಿ ಪ್ರಕಟವಾಗುತ್ತಿರುವ ಲೇಖನಗಳು ವೈವಿಧ್ಯಮಯವೂ ವೈಶಿಷ್ಟ್ಯಪೂರ್ಣವೂ ಆಗಿವೆ; ಮೌಲಿಕ ವಿಚಾರಗಳನ್ನೊಳಗೊಂಡಿವೆ. ಭಾಷೆ, ಸಂಸ್ಕೃತಿ, ಸಂಶೋಧನೆ, ವಿಮರ್ಶೆ, ತೌಲನಿಕ ವಿಚಾರಗಳನ್ನೊಳಗೊಂಡ ಲೇಖನಗಳಲ್ಲಿ ನವೀನ ಆಲೋಚನೆಗಳಿವೆ; ಚರ್ಚೆಗೆ ಕಾರಣವಾಗಬಹುದಾದ ಅನೇಕ ವಿಚಾರಗಳಿವೆ. ಉದಾ : ಡಾ. ಪಿ.ವಿ.ನಾರಾಯಣ ಅವರ 'ಕರ್ನಾಟಕ ಕಾದಂಬರಿ', ಡಾ. ಪ್ರಮೀಳಾ ಮಾಧವ್ ಅವರ 'ಹರಿಹರನ ಗಿರಿಜಾಕಲ್ಯಾಣ: ಕೆಲವು ನೋಟಗಳು', ಡಾ.ಜಿ. ಕೃಷ್ಣಪ್ಪನವರ 'ಬೇಂದ್ರೆ ವ್ಯಕ್ತಿತ್ವ ಮತ್ತು ನವೋದಯ ಕಾವ್ಯ', ಡಾ. ವಿಜಯಾ ಸುಬ್ಬರಾಜ್ ಅವರ 'ಭಕ್ತಿಚಳುವಳಿ ಮತ್ತು ಮಹಿಳೆ', ಪ್ರೊ. ಬಸವರಾಜ ಕೋಡಗುಂಟಿ ಮತ್ತು ಶ್ರೀ ಆಜಪ್ಪಬಾಬು ಅವರ 'ಯಾದಗಿರಿ ಪರಿಸರದ ಕನ್ನಡ ನಾಮಪದಗಳ ಧ್ವನ್ಯಾತ್ಮಕರಚನೆ' ಎಂಬಿವೇ ಮುಂತಾದ ಲೇಖನಗಳನ್ನು ಗಮನಿಸಬಹುದು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಿಚಾರಗೋಷ್ಠಿಗಳಲ್ಲಿ, ದತ್ತಿ ಕಾರ್ಯಕ್ರಮಗಳಲ್ಲಿ, ಉಪನ್ಯಾಸ ಲೇಖನ ಮಾಲೆಗಳಲ್ಲಿ ಸಾಹಿತಿಮಿತ್ರರು ಮಂಡಿಸಿದ ಪ್ರಬಂಧಗಳಲ್ಲಿ, ನೀಡಿದ ಉಪನ್ಯಾಸಗಳಲ್ಲಿ ಕೆಲವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಈ ಲೇಖಕಮಿತ್ರರಿಗೆ ಹಾಗೂ ಉಳಿದ ಲೇಖನಗಳನ್ನು ಕಳುಹಿಸಿದ ಲೇಖಕ ಮಿತ್ರರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

೨೦೧೪ನೆಯ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಗೌರವ ಪ್ರಶಸ್ತಿ' ಹಾಗೂ 'ನಾಡೋಜ' ಪ್ರಶಸ್ತಿಗಳಿಗೆ ಭಾಜನರಾದ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷರೂ ಹೆಸರಾಂತವಿಮರ್ಶಕರೂ ಆದ ಪ್ರೊ. ಎಂ.ಎಚ್. ಕೃಷ್ಣಯ್ಯನವರಿಗೆ

'ಕರ್ನಾಟಕ ಲೋಚನ' ಅಭಿನಂದನೆಗಳನ್ನು ಸಲ್ಲಿಸುತ್ತದೆ. ೨೦೧೪ನೆಯ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ 'ಗೌರವ ಪ್ರಶಸ್ತಿ'ಗೆ ಭಾಜನರಾದ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಸಂಶೋಧನ ವಿಭಾಗದ ಸಂಯೋಜನಕರೂ ಹೆಸರಾಂತ ಸಾಹಿತಿಗಳೂ ಆದ ಡಾ. ವಿಜಯಾಸುಬ್ಬರಾಜ್ ಅವರಿಗೆ 'ಕರ್ನಾಟಕ ಲೋಚನ' ಅಭಿನಂದನೆಗಳನ್ನು ಸಲ್ಲಿಸುತ್ತದೆ. ೨೦೧೪ನೆಯ ಸಾಲಿನ ಶಾ.ಬಾಲೂರಾವ್ ಯುವ ಬರಹಗಾರ ಪ್ರಶಸ್ತಿಯನ್ನು ತಮ್ಮ ಮೊದಲ ಕೃತಿಗೆ (ಶಾಲ್ಮಲೆಯ ಹೊನಲಿನಲ್ಲಿ) ಪಡೆದ ಶ್ರೀಮತಿ ಅಲಕ ಕಟ್ಟೆಮನೆಯವರಿಗೂ ಶಾ.ಬಾಲೂರಾವ್ ಅನುವಾದ ಪ್ರಶಸ್ತಿಯನ್ನು (ಸಂರಚನಾವಾದ, ಸಂರಚನೋತ್ತರವಾದ ಹಾಗೂ ಪ್ರಾಚ್ಯಕಾವ್ಯಮೀಮಾಂಸೆಕೃತಿಗೆ) ಪಡೆದ ಹೆಸರಾಂತ ಸಾಹಿತಿಗಳಾದ ಡಾ. ತಿಪ್ಪೇಸ್ವಾಮಿಯವರಿಗೂ 'ಕರ್ನಾಟಕ ಲೋಚನ' ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಆಜೀವ ಸದಸ್ಯರೂ ಬೆಂಗಳೂರು ಸರ್ಕಾರಿ ಕಾಲೇಜಿನ ನಿವೃತ್ತ ಪ್ರಾಂಶುಪಾಲರೂ ಕರ್ನಾಟಕ ಲೇಖಕಿಯರ ಸಂಘ ಮತ್ತು ಕನ್ನಡಸಂಘರ್ಷ ಸಮಿತಿಗಳ ಉಪಾಧ್ಯಕ್ಷರೂ ನಾರಾಯಣಮ್ಮ ಪ್ರತಿಷ್ಠಾನದ ಸಂಸ್ಥಾಪಕರೂ ಹಿರಿಯ ಸಾಹಿತಿಗಳೂ ಆಗಿದ್ದ ಪ್ರೊ. ಬಿ.ನಾರಾಯಣಮ್ಮ ಅವರು ದಿನಾಂಕ : ೧೯.೦೩.೨೦೧೫ ರಂದು ನಿಧನರಾದರು. 'ಕನ್ಯಾಕುಮಾರಿ', 'ಶ್ರೀ ರಂಗನಾಥನ ಶ್ರೀ ಸಾನಿಧ್ಯದಲ್ಲಿ' ಎಂಬ ಕವನ ಸಂಕಲನಗಳನ್ನೂ 'ಮೇನಕಾ', 'ತನ್ಮಯಿ' ಎಂಬ ಕಾದಂಬರಿಗಳನ್ನೂ 'ಬಿ.ಎಸ್. ಚಂದ್ರಕಲಾ ಮತ್ತು ಕೆ.ಆರ್. ಪದ್ಮಜೆ' ಎಂಬ ಜೀವನ ಚರಿತ್ರಗಳನ್ನೂ 'ಕರ್ನಾಟಕದ ಜನಸಂಖ್ಯೆ', 'ಕರ್ನಾಟಕದ ಇತಿಹಾಸ', 'ಜನಪ್ರಳಯ' ಎಂಬ ಸಂಶೋಧನ ಗ್ರಂಥಗಳನ್ನೂ ಅವರು ರಚಿಸಿ ಖ್ಯಾತನಾಮರಾಗಿದ್ದರು. ಹಿರಿಯ ಲೇಖಕಿ ಬೆಳಗೆರೆ ಮಹಾಲಕ್ಷ್ಮಮ್ಮನವರು ೨೫.೦೩.೨೦೧೫ ರಂದು ನಿಧನರಾದರು. ಮೂರು ಕವನ ಸಂಕಲನಗಳನ್ನು ಹೊರತಂದಿದ್ದ ಮಹಾಲಕ್ಷ್ಮಮ್ಮನವರು ಇನ್ನೂರಕ್ಕೂ ಹೆಚ್ಚು ಭಾವಗೀತೆ, ಭಕ್ತಿ ಗೀತೆಗಳನ್ನು ರಚಿಸಿದ್ದಾರೆ. 'ಕರ್ನಾಟಕ ಲೋಚನ' ಇಬ್ಬರಿಗೂ ಭಾವ ಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

'ಕರ್ನಾಟಕ ಲೋಚನ'ದ ಪ್ರಕಟಣೆಗೆ ಸಹಕರಿಸುತ್ತಿರುವ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವಾಧ್ಯಕ್ಷರಾದ ಪ್ರೊ॥ ಎಂ. ಎಚ್. ಕೃಷ್ಣಯ್ಯನವರಿಗೂ ಅಧ್ಯಕ್ಷರಾದ ಡಾ॥ ಪಿ. ವಿ. ನಾರಾಯಣ ಅವರಿಗೂ ಮತ್ತೋರ್ವ ಗೌ॥ ಕಾರ್ಯದರ್ಶಿಗಳಾದ ಶ್ರೀ ಬಿ. ಆರ್. ರವೀಂದ್ರನಾಥ್ ಅವರಿಗೂ ಗೌ॥ ಕೋಶಾಧಿಕಾರಿಗಳಾದ ಶ್ರೀ ಎಂ. ಎಸ್. ರಾಮಪ್ರಸಾದ್ ಅವರಿಗೂ ಕಛೇರಿಯ ಅಧೀಕ್ಷಕರಾದ ಶ್ರೀ ಜಯದೇವ್ ಅವರಿಗೂ ಕಛೇರಿಯ ಇತರ ಸಿಬ್ಬಂದಿ ವರ್ಗದವರಿಗೂ ನಾನು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**–ಪ್ರೊ॥ ಜಿ. ಅಬ್ದುಲ್ ಬಷೀರ್**
ಸಂಪಾದಕರು

## ಪರಿವಿಡಿ

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೧. ಮಸ್ಕಿಯ ಪ್ರಾಚ್ಯಾವಶೇಷಗಳು

-ಡಾ. ಬಿ. ಚನ್ನಬಸಪ್ಪ*

**ಹಿನ್ನೆಲೆ :**

ಸುಮಾರು ಮೂರು-ಸಾವಿರ ವರ್ಷಗಳಿಗಿಂತಲೂ ಹಿಂದೆ ಅಗ್ರ ಪಂಕ್ತಿಯಲ್ಲಿದ್ದ ಇಂದಿನ ಮಸ್ಕಿ ಪಟ್ಟಣವು ಎಡದೊರೆ- ೨೦೦೦ ನಾಡಿನ ರಾಜಧಾನಿಯಾಗಿತ್ತೆಂಬುದು ಕ್ರಿ.ಶ.೯ರಿಂದ ೧೨ನೇ ಶತಮಾನದವರೆಗಿನ ಶಾಸನಗಳಿಂದ ತಿಳಿದು ಬರುತ್ತದೆ. ಅಂದಿನಿಂದ ಇಂದಿನ ದಿನಗಳವರೆಗೂ ಮಸ್ಕಿಯ ಬೆರಗುಗಳ ಭರಾಟೆಯಲ್ಲಿ ತನ್ನ ಅನೇಕ ಕುರುಹುಗಳನ್ನು ಕಳೆದುಕೊಳ್ಳುತ್ತಿರುವ ಇದು ಜಿಲ್ಲಾ ಕೇಂದ್ರವಾದ ರಾಯಚೂರು ನಗರದಿಂದ ನೈರುತ್ಯ ದಿಕ್ಕಿಗೆ ೮೩ಕಿ.ಮೀ. ಹಾಗೂ ತಾಲ್ಲೂಕು ಕೇಂದ್ರವಾದ ಲಿಂಗಸೂಗೂರಿನಿಂದ ಆಗ್ನೇಯ ದಿಕ್ಕಿಗೆ ೨೭ ಕಿ.ಮೀ. ದೂರದಲ್ಲಿ ಬೀದರ್-ಬೆಂಗಳೂರು ರಾಜ್ಯಹೆದ್ದಾರಿಯಲ್ಲಿರುವ ಮಸ್ಕಿ ಪಟ್ಟಣವು ಮಸ್ಕಿ ನದಿಯ (ಹಿರೇಹಳ್ಳ) ಬಲ ದಂಡೆಯ ಮೇಲೆ ಇದೆ. ಈ ಪ್ರಾಚೀನ ಪಟ್ಟಣವು ಅನೇಕ ಪ್ರಾಚ್ಯಾವಶೇಷಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡು ಪ್ರಸಿದ್ಧಿಪಡೆದಿದೆ.

**ಪ್ರಾಗೈತಿಹಾಸ ಕಾಲದ ನೆಲೆ:**

ಮಸ್ಕಿ ಪ್ರಾಗೈತಿಹಾಸಿಕ ನೆಲೆ ಸಣ್ಣ ಗುಡ್ಡಗಳ ವರ್ತುಲದ ಮಧ್ಯೆ ಆಯಕಟ್ಟಿನ ಸ್ಥಳದಲ್ಲಿದೆ. ಕ್ರಿ.ಶ.೧೮೮೮ರ ಸುಮಾರಿನಲ್ಲಿ ರಾಬರ್ಟ್‌ಬ್ರೂಸ್‌ಪೂಟ್ ಅವರು ಈ ನೆಲೆಯನ್ನು ಸಂದರ್ಶಿಸಿ ನವ ಶಿಲಾಯುಗ ಮತ್ತು ಆನಂತರ ಕಾಲದ ಅನೇಕ ವಸ್ತುಗಳನ್ನು ಸಂಗ್ರಹಿಸಿದ್ದ ಅವು ಈಗ ಮದ್ರಾಸಿನ ಪ್ರಾಚ್ಯವಸ್ತುಸಂಗ್ರಹಾಲಯದಲ್ಲಿವೆ. ನಂತರ ಜಿ.ಯಸ್ದಾನಿಯವರು ಈ ಊರಿಗೆ ಬಂದು ಮತ್ತಷ್ಟು ಪ್ರಾಚ್ಯವಸ್ತುಗಳನ್ನು ಸಂಗ್ರಹಿಸಿದರು. ಕ್ರಿ.ಶ. ೧೯೨೮-೨೯ರಲ್ಲಿ ಲಿಯೋನಾರ್ಡ್ ಮನ್ ಸಾಹೇಬನು ರಾಯಚೂರು ಜಿಲ್ಲೆಯ ಪ್ರಾಚೀನ ವಸ್ತುಗಳನ್ನು ಕುರಿತು ಬರೆಯುತ್ತಾ ಮಸ್ಕಿಯಲ್ಲಿ ದೊರೆತ ಕುರುಹುಗಳಿಗೆ

* ಸಹಾಯಕ ಇತಿಹಾಸದ ಪ್ರಾಧ್ಯಾಪಕರು, ದೇವನಾಂಪ್ರಿಯ ಅಶೋಕ ಗು.ವಿ.ವಿ. ಸ್ನಾತಕೋತ್ತರ ಕೇಂದ್ರ, ಮಸ್ಕಿ, ರಾಯಚೂರು ಜಿಲ್ಲೆ - ೫೮೪೧೨೪

ವಿಶೇಷ ಮನ್ನಣೆಯನ್ನು ನೀಡಿದ್ದಾನೆ. ಕ್ರಿ.ಶ. ೧೯೩೫-೩೭ರಲ್ಲಿ ಆಗಿನ ಹೈದರಬಾದ ಸರಕಾರ ಇಲ್ಲಿ ಬೃಹತ್ ಪ್ರಮಾಣದಲ್ಲಿ ಉತ್ಖನನವನ್ನು ನಡೆಸಿತು. ಹಾಗೆಯೇ ಇವರು ಮುಂದುವರೆದು ಕ್ರಿ.ಶ. ೧೯೪೦ರಲ್ಲಿ ಕಟ್ಟಿದ ಮತ್ತು ಗವಿ ವರ್ಣದ ಚಿತ್ರಗಳನ್ನು ಶೋಧಿಸಿದರು. ಕ್ರಿ.ಶ. ೧೯೫೪ರಲ್ಲಿ ಕೇಂದ್ರ ಸರಕಾರದ ಪುರಾತತ್ವ ಇಲಾಖೆಯ ವತಿಯಿಂದ ಬಿ.ಕೆ.ಥಾಪರ್ ಅವರು ನಡೆಸಿದ ಉತ್ಖನನದಲ್ಲಿ ನಾನಾ ರೀತಿಯ ಕಲ್ಲಿನ ಚಕ್ಕೆಗಳು, ಮಣಿಗಳು, ಸಾದಾ ಬಿಳಿಯ ಮಣ್ಣಿನ ಪಾತ್ರೆಗಳು, ಗುಲಾಬಿ ಬಣ್ಣದ ಪಾತ್ರೆಗಳು, ಕಟ್ಟಿಗೆಯ ಕಂಬಗಳನ್ನು ನೆಟ್ಟ ತೂತುಗಳು ಇತ್ಯಾದಿಗಳು ದೊರೆತಿವೆ. ಈ ಕಾಲದ ಜನರು ಚೆನ್ನಾಗಿ ಬೇಟೆಯಾಡುತ್ತಿದ್ದರೆಂದು (ಕ್ರಿ.ಪೂ. ೧೦೦೦-ಕ್ರಿ.ಪೂ ೪೦೦) ಅವರು ತಿಳಿಸಿರುತ್ತಾರೆ.

**ನವಶಿಲಾಯುಗಕಾಲದ ಬೂದಿ ದಿಬ್ಬ:**

ಇದು ಮಸ್ಕಿಯ ಸರಕಾರಿ ಪ್ರಥಮ ದರ್ಜೆ ಕಾಲೇಜು ಮೈದಾನದ ಹಿಂಬದಿಯಲ್ಲಿದ್ದು ಬೃಹತ್ ಪ್ರಮಾಣದ ಬೂದಿ ದಿನ್ನೆ ಕಂಡುಬರುತ್ತದೆ. ಇಲ್ಲಿಯೇ ಗುಂಡುಕಲ್ಲುಗಳು, ಬೀಸುವ ಕಲ್ಲುಗಳು, ಕಬ್ಬಿಣದ ಕಿಟ್ಟ, ಮೊದಲಾದ ವಸ್ತುಗಳು ಕಾಣಬರುತ್ತವೆ. (ಛಾ.ಚಿ.ನಂ-೧).

**ಶಿಲಾತಾಮ್ರಯುಗ :** ಈ ಅವಧಿಯಲ್ಲಿನ ಧಾರ್ಮಿಕ ಕಟ್ಟಳೆಯ ಕತ್ತಿಯನ್ನು ಹಿಡಿದುಕೊಂಡ ಮನುಷ್ಯ ಹಾಗೂ ನವಿಲು ಕತ್ತಿಗಳು (ಕ್ರಿ.ಪೂ.ಸು. ೧೭೦೦-೧೦೦೦) ದೊರಕಿವೆ.

ಹಾಗೆಯೇ ಮಸ್ಕಿ ಪಟ್ಟಣದ ದುರ್ಗದ ಬೆಟ್ಟ, ಗಿಡ್ಡದಮ್ಮನ ಕೆರೆಯ ಭಾಗ, ಹಿರೇಬೆಟ್ಟ, ಮಜ್ಜಿಗೆಗುಂಡು ಮೊದಲಾದ ಭಾಗಗಳ ಬಂಡೆಗಲ್ಲುಗಳಲ್ಲಿ ಸಾರಂಗ, ಗೂಳಿ, ಹುಲಿ, ಮಾನವರಿಗೆ ಸಂಬಂಧಿಸಿದ ಕುಟ್ಟಿದ ಹಾಗೂ ಗೀರಿದ ಚಿತ್ರಗಳು ಕಾಣಬರುತ್ತವೆ.

**ಬೃಹತ್ ಶಿಲಾಯುಗ :** ಮಸ್ಕಿಯ ದುರ್ಗದ ಬೆಟ್ಟದ ದಕ್ಷಿಣ ದಿಕ್ಕಿನಲ್ಲಿ ಕ್ರಿ.ಶ. ೧೯೫೪ರಲ್ಲಿ ಕೇಂದ್ರ ಸರಕಾರವು ಬಿ.ಕೆ. ಥಾಪರ್ ಅವರ ನೇತೃತ್ವದಲ್ಲಿ ಬೃಹತ್ ಪ್ರಮಾಣದ ಉತ್ಖನನ ಮಾಡಿ ಪುಸ್ತಕ ಪ್ರಕಟಿಸಿದೆ. ಈ ಉತ್ಖನನ ಸಂದರ್ಭದಲ್ಲಿ ಕ್ರಿ.ಪೂ. ೨೦೦-೫೦ರಕಾಲದ ೧೫ರಿಂದ ೨೦ಮಡಿಕೆಗಳಲ್ಲಿ ಹೂತಿಟ್ಟ ಅಸ್ಥಿ ಪಂಜರಗಳು ದೊರಕಿದ್ದು, ಅವು ೬ರಿಂದ ೭ ಅಡಿಗಳಷ್ಟು ದೊಡ್ಡದಾಗಿವೆ. ಇವು ಕೆಂಪು, ಕಪ್ಪು ಹಾಗೂ ಬೂದುಬಣ್ಣದವುಗಳಾಗಿವೆ.

**ಅಶೋಕನ ಶಾಸನ :** ಮಸ್ಕಿ ಪಟ್ಟಣದ ಒಂದು ಕಿ.ಮೀ. ದೂರದಲ್ಲಿ ಮುದಗಲ್ ರಸ್ತೆಯಲ್ಲಿರುವ ಹಿರೇಬೆಟ್ಟದ ದಕ್ಷಿಣ ದಂಡೆಗೆ ಬೃಹತ್ ಬಂಡೆಯ ಕೆಳಗಡೆ ಚಿಕ್ಕದಾದ ಬಂಡೆಗಲ್ಲಿಗೆ ಅಶೋಕನ ಶಾಸನ ಕೆತ್ತಲಾಗಿದೆ. ಇದನ್ನು ಕ್ರಿ.ಶ. ೧೯೧೫ರಲ್ಲಿ ಗಣಿ ಇಂಜಿನಿಯರಾದ ಸಿ.ಬಿಡನ್ ಅವರು ಕಂಡು ಹಿಡಿದಿದ್ದಾರೆ. ಭಾರತದಲ್ಲಿ ದೊರೆತ

ಅಶೋಕನ ಶಾಸನಗಳಲ್ಲಿ ಪ್ರಮುಖವಾದ ಶಾಸನವು ಇದಾಗಿದ್ದು 'ದೇವನಾಂಪಿಯಸ ಅಶೋಕಸ' ಎಂದು ಉಲ್ಲೇಖಿಸುತ್ತದೆ. ಈ ಶಾಸನದ ಭಾಷೆ ಪ್ರಾಚೀನ ಪಾಕೃತ ಹಾಗೂ ಬ್ರಾಹ್ಮಿ ಲಿಪಿಯಲ್ಲಿದ್ದು ಇದರ ಕಾಲ ಕ್ರಿ.ಪೂ. ೨೫೬. ಇದು ದೇವರಿಗೆ ಪ್ರಿಯನಾದ ಅಶೋಕರಾಜನ ಘೋಷಣೆ. ನಾನು ಈಗ ಎರಡೂವರೆ ಸಂವತ್ಸರಗಳ ಆಚೆಯ ಕಾಲದಿಂದ ಬುದ್ಧ ದೇವನ ಅನುಯಾಯಿಯಾಗಿದ್ದೇನೆ. ಈಗ ಒಂದು ಸಂವತ್ಸರಕ್ಕೆ ಅಧಿಕ ಕಾಲದಿಂದ ನಾನು ಬುದ್ಧ ಸಂಘದಲ್ಲಿ ಆಸಕ್ತಿಯುಳ್ಳವನಾಗಿ ಶ್ರದ್ಧೆಯಿಂದ ಶ್ರಮಿಸುತಲಿದ್ದೇನೆ. ಇದರ ಫಲವಾಗಿ ಈ ಜಂಬು ದ್ವೀಪದಲ್ಲಿ ಹಿಂದೆ ದೇವರುಗಳು ಮಾನವರೊಡನೆ ಮಿಳಿತರಾಗಿರಲಿಲ್ಲ, ಈಗ ಮಿಳಿತರಾಗಿದ್ದಾರೆ. ನಾನು ಸಾಧಿಸಿದ ಈ ಕಾರ್ಯವನ್ನು ಬಡವನಾದವನು ಸಾಧಿಸಬಹುದು. ಆದರೆ ಆತನಿಗೆ ಧರ್ಮದಲ್ಲಿ ಶ್ರದ್ಧೆ ಮಾತ್ರ ಅವಶ್ಯಕ. ಈ ಕಾರ್ಯ ಬಲ್ಲಿದರಿಗೆ ಮಾತ್ರ ಸಾಧ್ಯವೆಂದು ಯಾರೂ ತಿಳಿಯಲಾಗದು. ಬಡವರಾಗಲಿ, ಬಲ್ಲಿದರಾಗಲಿ ಈ ಮಾತನ್ನು ನೆನೆಯಬೇಕಾದದ್ದು, ನೀವು ಮಾರ್ಗವನ್ನು ಅನುಸರಿಸುವಿರಾದರೆ, ಈ ಘನಸಾಧನೆ ಬಹುಕಾಲ ಬಾಳೀತು, ಒಂದೂವರೆಯಷ್ಟು ಅಭಿವೃದ್ಧಿಯಾದೀತು.

ಮಸ್ಕಿಯಲ್ಲಿ ಬುದ್ಧನ ಅವಶೇಷಗಳು ಕಂಡುಬಂದಿದ್ದು ಹರಳಿನಲ್ಲಿ ಕೆತ್ತಿದ ಬುದ್ಧನ ತಲೆಯ ಸೂಕ್ಷ್ಮ ಪ್ರತಿ ರೂಪದ ಚಿಕ್ಕ ವಿಗ್ರಹ ಪತ್ತೆಯಾಗಿದ್ದು, ಇದರ ಕಾಲ ಕ್ರಿ.ಪೂ. ೩೦೦ರಿಂದ ೨೦೦ ಎಂದು ಸಂಶೋಧಕರು ನಿರ್ಧರಿಸಿರುತ್ತಾರೆ. ಶಾತವಾಹನರ ಕಾಲದ ಬಣ್ಣ ಬಳೆದ ಪಾತ್ರೆಗಳು, ಶಂಕದ ಬಳೆಗಳು, ಮೈಉಜ್ಜಿಕೊಳ್ಳುವ ಇಟ್ಟಿಗೆ ಕಲ್ಲುಗಳು, ಕಪ್ಪೆ ಆಕಾರದ ಮಣಿ, 'ಸಮಹರಠಿಪುತಸ' ಎಂಬ ಕ್ರಿ.ಶ. ೨ನೇ ಶತಮಾನದ ಅಕ್ಷರವುಳ್ಳ ಮುದ್ರೆ, ಮನುಷ್ಯನು ಆನೆಯನ್ನು ಸಾಗಿಸಿಕೊಂಡು ಹೋಗುವ ದೃಶ್ಯವುಳ್ಳ ಮುದ್ರೆ ಮೊದಲಾದವುಗಳು ದೊರೆತಿವೆ.

ಹಾಗೆಯೇ ಇವರ ನಂತರ ರಾಯಚೂರು ಜಿಲ್ಲೆಯ ಮಸ್ಕಿಯ ಪರಿಸರ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿಗಳು, ಸೇವುಣರು, ವಿಜಯನಗರ ಸಾಮ್ರಾಟರು, ಬಹಮನಿಸುಲ್ತಾನರು ಮೊದಲಾದವರುಗಳ ಆಡಳಿಕ್ಕೆ ಒಳಪಟ್ಟಿತ್ತು. ಈ ಮೇಲೆ ಹೇಳಿದ ರಾಜಮನೆತನಗಳಲ್ಲಿ ಕೆಲವೇ ಅರಸರ ಶಾಸನಗಳು ದೊರಕಿದ್ದು, ಉಳಿದವರ ಕಾಲದ ಶಾಸನಗಳು ದೊರಕಿರುವುದಿಲ್ಲ. ಕಾಲಗರ್ಭದಲ್ಲಿ ಹುದುಗಿ ಅನೇಕ ಅವಶೇಷಗಳು ಮುಂದಿನ ದಿನಮಾನಗಳಲ್ಲಿ ದೊರಕುವ ಸಾಧ್ಯತೆ ಇದೆ.

**ಸ್ಥಳನಾಮ :** ಇಂದಿನ ಮಸ್ಕಿ ಪಟ್ಟಣದಲ್ಲಿ ಪ್ರಾಕೃತಿಕ ವೈಶಿಷ್ಟಗಳಿಂದ ಕೂಡಿದ ದೊಡ್ಡದಾದ ಬೆಟ್ಟವಿದೆ. ಇಲ್ಲಿನ ಬೆಟ್ಟವು ಎತ್ತರವಾಗಿದ್ದು ಹಲವು ಜನರನ್ನು ಆಕರ್ಷಿಸುತ್ತದೆ. ಈ ಲಕ್ಷಣದ ಆಧಾರದಿಂದ ಈ ಊರಿಗೆ 'ಮಹಾಶೃಂಗಿ' (ಇದರ ತದ್ಭವರೂಪ 'ಮಾಸಂಗಿ) ಎಂಬ ಹೆಸರು ಬಂದಿರಬೇಕು. ನಂತರ ಮಧ್ಯಯುಗೀನ ಕಾಲದಲ್ಲಿ ಇದು ರಾಜಧಾನಿ ಪಿರಿಯ ಮೊಸಂಗಿ (ಕ್ರಿ.ಶ. ೧೦೧೦-೧೦೭೧), ಮೊಸಗೆ (ಕ್ರಿ.ಶ.

೧೫೩೦-೩೭) ಮಸಗೆ > ಮಸಿಗಿ > ಮಸ್ಕಿ ಎಂಬುದಾಗಿ ರೂಪಾಂತರಗೊಂಡಿರಬೇಕು. ಇಂದು ಸರಕಾರಿ ದಾಖಲೆಗಳಲ್ಲಿ ಈ ಊರನ್ನು 'ಮಸ್ಕಿ' ಎಂದು ಕರೆಯುತ್ತಿದ್ದು, ಜನಸಾಮಾನ್ಯರು ಕರೆಯುವುದು ಮಾತ್ರ ಮಸ್ಗಿ (ಮಸಿಗಿ) ಎಂಬುದಾಗಿದೆ.

**ಇದು ಸ್ಥೂಪವೇ ? : (ಛಾ.ಚಿ.ನಂ-೨)**

ಹಿಂದೂಗಳಿಗೆ ವಿಗ್ರಹವು ಯಾವರೀತಿ ಆರಾಧನೆಯ ವಸ್ತುವಾಗಿದೆಯೋ ಅದೇ ರೀತಿ ಸ್ಥೂಪವೂಕೂಡ ಬೌದ್ಧರಿಗೆ ಆರಾಧನೆಯ ವಸ್ತು. ಇದರಲ್ಲಿ ಸಾಮಾನ್ಯವಾಗಿ ಬುದ್ಧನು ಕುಳಿತುಕೊಳ್ಳುತ್ತಿದ್ದ ಆಸನ, ಆತನ ಪಾದುಕೆಗಳು, ಬುದ್ಧನ ಕೂದಲು. ಹಲ್ಲು ಮುಂತಾದವುಗಳನ್ನು ಒಂದು ಚಿಕ್ಕ ಪೆಟ್ಟಿಗೆಯಲ್ಲಿಟ್ಟು, ನಂತರ ಅದನ್ನು ಮುಚ್ಚಿ ಅದರ ಮೇಲೆ ಇಟ್ಟಿಗೆಯಲ್ಲಿ ಅಥವಾ ಕಲ್ಲಿನಲ್ಲಿ ಸ್ಥೂಪವನ್ನು ಕಟ್ಟುತ್ತಿದ್ದರು ಅಥವಾ ಬುದ್ಧನ ಯಾವುದಾದರೊಂದು ಅವಶೇಷದ ಮೇಲೆ ನಿರ್ಮಾಣವಾದ ವೃತ್ತಾಕಾರದ ನಿರ್ಮಾಣವನ್ನು 'ಸ್ಥೂಪ' ಎಂದು ಕರೆಯಲಾಗುತ್ತದೆ.

ಮಸ್ಥಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಹಿಂದುಗಡೆ (North) ದಿನ್ನೆಯ ಮಾದರಿಯಲ್ಲಿ ಕಾಣಬರುತ್ತಿರುವ ಅವಶೇಷದಲ್ಲಿ ಏನು ಇದೆ, ಏನು ಇಲ್ಲ ಎಂಬುದು ತಿಳಿಯಲಾಗುತ್ತಿಲ್ಲ. ಇದು ವೃತ್ತಾಕಾರವಾಗಿ ಕಲ್ಲುಗಳಿಂದ ಹೊರಭಾಗವನ್ನು ಭದ್ರಪಡಿಸಲಾಗಿದೆ. ಮೇಲ್ಭಾಗದಲ್ಲಿ ಎರಡು ಕಡೆಗೆ ಸುರಳಿಯಾಕಾರದ ಮೆಟ್ಟಿಲುಗಳಿದ್ದು ಕಾಣಬರುವುದರೊಂದಿಗೆ ಅವುಗಳನ್ನು ಇಟ್ಟಿಗೆಗಳಿಂದ ಮುಚ್ಚಲಾಗಿದೆ. ಹಿಂದೆ ಇಲ್ಲಿರುವ ದಿಬ್ಬದ ಮೇಲ್ಗಡೆಯಿಂದ ಸುರಳಿಯಾಕಾರವಾಗಿ, ಮೆಟ್ಟಿಲುಗಳನ್ನು ಇಳಿದು ಹೋಗುತ್ತಿದ್ದರೆಂದು ಮಸ್ಕಿಯ ಬಹುಪಾಲು ನಾಗರಿಕರು ಹೇಳುವುದುರೊಂದಿಗೆ, ಇದಕ್ಕೆ ಸ್ಥಳೀಯರು 'ಸುಳಿದಿಬ್ಬ' ಅಥವಾ 'ಸುಳೆದಿಬ್ಬ' ಎಂತಲೂ ಕರೆಯುತ್ತಾರೆ. ಇತ್ತೀಚೆಗೆ ಕೇಂದ್ರ ಪ್ರಾಚ್ಯವಸ್ತು ಇಲಾಖೆಯವರು 'ಸಂರಕ್ಷಿತ' ಪ್ರದೇಶವೆಂದು ಇಲ್ಲಿ ಬೋರ್ಡು ಹಾಕಿದ್ದಾರೆಯೇ ಹೊರತು ಉತ್ಖನನವನ್ನು ನಡೆಸಿರುವುದಿಲ್ಲ.

**ಚೋಳರ ಒಂದನೇ ರಾಜೇಂದ್ರ ವರ್ಮನ ಶಾಸನ (ಕ್ರಿಶ. ೧೧ನೇ ಶತಮಾನ): (ಛಾ.ಚಿ.ನಂ-೩)**

ಇದು ಸುಳಿದಿಬ್ಬದ ದೊಡ್ಡದಾದ ಕಣಶಿಲೆಯ (Granite) ಬಂಡೆಗಲ್ಲಿಗೆ ಹಾಕಿಸಲ್ಪಟ್ಟಿದೆ. ಈ ಬಂಡೆಗಲ್ಲಿನ ಎಡಬದಿಯಲ್ಲಿ ಎರಡು ಮೀನುಗಳು. ಹುಲಿ. ಛತ್ರಿ, ಚಾಮರ. ನಂದಿ. ಬೀಸಣಿಗೆ. ದೀಪ ಮೊದಲಾದ ಶಿಲ್ಪಗಳಿವೆ; ಬಲಬದಿಯಲ್ಲಿ ಏಳು ಸಾಲಿನ ತಮಿಳು ಗ್ರಂಥಲಿಪಿ, ಸಂಸ್ಕೃತ ಭಾಷೆಯಲ್ಲಿರುವ ಶಾಸನವಿದೆ.

**೧. ರಾಜಶ್ರೀ ರಾ**

**೨. ಜನ್ಮಮಕುಟ ಶ್ರೇಣಿ**

**೩. ರತ್ನೇಷು ಶಾಸ**

**೪. ನಂ ಏತತ್ ರಾ**

**೫. ಜೇಂದ್ರ ಚೋಳ**

೬. ಸ್ಯ ಪರಕೇಸ
೭. ರಿವರ್ಮನ :

ಇದು ಉತ್ತರಕರ್ನಾಟಕದಲ್ಲಿಯೇ ಪ್ರಪ್ರಥಮವಾಗಿ ಶೋಧಗೊಂಡ ಚೋಳ ಅಸರ ಶಾಸನವಾಗಿದೆ. ಇಲ್ಲಿಯವರೆಗೆ ಚರಿತ್ರೆಯಲ್ಲಿ ಕಲ್ಯಾಣ ಚಾಳುಕ್ಯರನ್ನು ತಂಜಾವೂರಿನ ಚೋಳ ಅರಸನಾದ ಒಂದನೇ ರಾಜೇಂದ್ರವರ್ಮನು ಮೊಸಗೆ (ಮೊಸಂಗಿ, ಮಸಗಿ) ಯುದ್ಧದಲ್ಲಿ ಕ್ರಿ.ಶ. ೧೦೧೯-೧೦೨೧ರ ಅವಧಿಯಲ್ಲಿ ಸೋಲಿಸಿದನೆಂದು ತಿಳಿದು ಬರುತ್ತಿತ್ತು. ಈ ಶಾಸನದಿಂದ ಅಧಿಕೃತವಾಗಿ ಕಲ್ಯಾಣಚಾಳುಕ್ಯ ಅರಸ ಇಮ್ಮಡಿ ಜಯಸಿಂಹ ಮೊಸಗೆ ಯುದ್ಧದಲ್ಲಿ ಪರಾಭವ ಹೊಂದಿದ್ದಾನೆ ಎಂಬುದೇ ಜಿಜ್ಞಾಸೆಯಾಗುತ್ತದೆ. ಏಕೆಂದರೆ ಶಾಸನದಲ್ಲಿ ಕಲ್ಯಾಣಚಾಳುಕ್ಯರನ್ನು ಸೋಲಿಸಿದ ಯಾವುದೇ ಸುಳಿವು ನೀಡದೆ, ಕೇವಲ ಚೋಳ ಅರಸ ೧ನೇ ರಾಜೇಂದ್ರ ವರ್ಮ ಅವನ ಬಿರುದು ಮಾತ್ರ ಉಲ್ಲೇಖಿಗೊಂಡಿರುತ್ತದೆ.

**ಕಲ್ಯಾಣ ಚಾಳುಕ್ಯ ಅರಸ ಇಮ್ಮಡಿಜಯಸಿಂಹ (ಕ್ರಿ.ಶ. ೧೦೧೫-೧೦೪೩) X ಚೋಳರ ೧ನೇ ರಾಜೇಂದ್ರವರ್ಮ (ಕ್ರಿ.ಶ.೧೦೧೪-೧೦೪೪)**

**ವೆಂಗಿಯ ವಿಜಯಾದಿತ್ಯ**

**ಕಳಚೂರಿ ಗಾಂಗೇಯದೇವ**

**ಪಾರಮಾರರಭೋಜ (ರಾಜಧಾನಿ ಧಾರಾನಗರ)**

**ಅಪ್ರಕಟಿತ ಜಿನಶಾಸನ : (ಕ್ರಿ.ಶ.-೧೧-೧೨ನೇ ಶತಮಾನ)**

ಇದರ ಭಾಷೆ ಮತ್ತು ಲಿಪಿಯೂ ಕೂಡ ಕನ್ನಡವಾಗಿರುತ್ತದೆ. ಇದರಲ್ಲಿ ೧೫ ಸಾಲುಗಳಿದ್ದು, ಇದು ಕಪ್ಪು ಶಿಲೆಯಿಂದ ಕೂಡಿದೆ. ಈ ಶಾಸನ ಸ್ತಂಭದ ಎತ್ತರ -೪೭ ಇಂಚು, ಅಗಲ-೯.೭ ಇಂಚು ಇದೆ, ಶಾಸನ ಸ್ತಂಭದ ನಾಲ್ಕುಬದಿಗಳಲ್ಲಿ ಪದ್ಮಾಸನದಲ್ಲಿ ಕುಳಿತ ಜಿನ ವಿಗ್ರಹಗಳಿದ್ದು ಮೇಲ್ಗಡೆ ಮುಕ್ಕೊಡೆಯಿದೆ (ಭಾ.ಚಿ.ನಂ.-೪).

**ವೆಂಕಟ್ಟೇಶ್ವರ ದೇವಾಲಯ : (ಕ್ರಿ.ಶ. ೧೧-೧೨ನೇ ಶತಮಾನ)**

ಇದು ಕಲ್ಯಾಣ ಚಾಳುಕ್ಯರ ಕಾಲದ ದೇವಾಲಯವಾಗಿದ್ದು ಗರ್ಭಗೃಹ ಮಾತ್ರ ಮೂಲದ್ದಾಗಿದ್ದು, ಅಂತರಾಳ ಮತ್ತು ನವರಂಗ ಭಾಗಗಳನ್ನು ಕೆಡವಿ ಹೊಸದಾಗಿ ಜೀರ್ಣೋದ್ಧಾರಗೊಳಿಸಲಾಗಿದೆ. ಇಲ್ಲಿಯ ಸ್ತಂಭಗಳನ್ನು ದೇವಾಲಯದ ಆವರಣದಲ್ಲಿಡಲಾಗಿದೆ. ಹಾಗೆಯೇ ಗರ್ಭಗೃಹದ ಹಳೆಯ ವಿಗ್ರಹ ಭಿನ್ನವಾಗಿದ್ದ ಕಾರಣ ಅದನ್ನು ಕೃಷ್ಣಾನದಿಯಲ್ಲಿ ಎಸೆದು ಹೊಸದಾಗಿ ಕಪ್ಪುಶಿಲೆಯ ವೆಂಕಟೇಶ್ವರ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. (ಭಾ.ಚಿ.ನಂ-೫)

**ಬಸವೇಶ್ವರ ದೇವಾಯಲ : (ಕ್ರಿ.ಶ. ೧೧-೧೨ನೇ ಶತಮಾನ)**

ಇದೂ ಕೂಡ ಕಲ್ಯಾಣಚಾಳುಕ್ಯರ ಕಾಲದ್ದಾಗಿದ್ದು, ಗರ್ಭಗೃಹದಲ್ಲಿ ನಂದಿ ವಿಗ್ರಹವಿದ್ದು, ನವರಂಗದಲ್ಲಿ ಕಲ್ಯಾಣ ಚಾಳುಕ್ಯರ ಕಾಲದ ಸ್ತಂಭಗಳಿವೆ (ಭಾ.ಚಿ.ನಂ-೧೦).

**ಮುದಿ ಮಲ್ಲಿಕಾರ್ಜುನ ದೇವಾಲಯ :**

ಇದು ಮುದಗಲ್ ರಸ್ತೆಯ ಚಿಕ್ಕ ಬೆಟ್ಟದಲ್ಲಿದೆ. ಈ ಮಲ್ಲಿಕಾರ್ಜುನನನ್ನು ಬೆಲ್ಲದ ಮರಡಿಯ ದೇಸಾಯಿ ಮನೆತನದ ಒಬ್ಬ ಶಿವಭಕ್ತೆ ಶ್ರೀಶೈಲದಿಂದ ಕರೆದುಕೊಂಡು ಬಂದಳೆಂದು ಸ್ಥಳ ಪುರಾಣ ಹೇಳುತ್ತದೆ. ಈಗಲೂ ಈ ಮನೆತನ ಬೆಲ್ಲದ ಮರಡಿಯ ಗ್ರಾಮದಲ್ಲಿದ್ದು ಅವರು ಮಲ್ಲಿಕಾರ್ಜುನನ ಭಕ್ತರಾಗಿದ್ದಾರೆ.

**ಬೆಟ್ಟದ ಮಲ್ಲಿಕಾರ್ಜುನ ದೇವಾಲಯ** (ಕ್ರಿ.ಶ.ಸು೧೩ನೇ ಶತಮಾನ) : (ಛಾ.ಚಿ.ನಂ.೧೧)

ಇದರ ಮೂರು ದಿಕ್ಕಿನ ಕಡೆಗೆ ದ್ವಾರಬಾಗಿಲುಗಳಿವೆ. ಶೇಷಶಯನ, ರತಿ ದಂಪತಿಗಳು, ಲಜ್ಜಾಗೌರಿ, ಆನೆ ಮರಿ ಹಾಕುವ ಶಿಲ್ಪ, ಯುದ್ಧಕ್ಕೆ ಹೊರಟ ಅರಸನನ್ನು ಪಲ್ಲಕ್ಕಿಯಲ್ಲಿ ಹೊತ್ತುಕೊಂಡು ಸಾಗಿರುವ ಶಿಲ್ಪ, ಹಸು-ಆನೆ ಶಿಲ್ಪ, (ಛಾ.ಚಿ.ನಂ-೧೩) ಮೂರು ಮುಖದ ಹಂಸ ಶಿಲ್ಪ (ಛಾ.ಚಿ.ನಂ-೬, ರಾಷ್ಟ್ರೀಯ ಶಿಕ್ಷಣ, ಸಂಶೋಧನೆ, ತರಬೇತಿ ಅನುಸಂಧಾನ ಚಿಹ್ನೆಯಾಗಿ ದೆಹಲಿ N.C.E.R.T ಯವರು ಬಳಸಿಕೊಂಡಿದ್ದಾರೆ.) ಮೊದಲಾದವುಗಳು ಗಮನಾರ್ಹವಾಗಿವೆ.

ವೀರಭದ್ರೇಶ್ವರ, ಈಶ್ವರ, ಹಳೆಯ ಮತ್ತು ಹೊಸ ಮೋನಪಯ್ಯ, ಗುರಪ್ಪ ತಾತನ ಮಂದಿರ, ಜಡೆಯಶಂಕರ, ಕಣಿವೆ ಆಂಜನೇಯ ಮೊದಲಾದ ದೇವಾಲಯಗಳಿವೆ.

**ಮಸೀದೆ :** ಕಲ್ಯಾಣ ಚಾಲುಕ್ಯರ ಶೈಲಿ.

**ಕಲ್ಲುಗುಡಿ ಚೌಡೇಶ್ವರಿ ದೇವಾಲಯ :** ಇದು ಮೂಲತಃ ಜೈನರಬಸದಿ ಎಂದು ಇಲ್ಲಿನ ಗ್ರಾಮಸ್ಥರು ಹೇಳುತ್ತಾರೆ. ಆದರೆ ಇದನ್ನು ಗ್ರಾಮಸ್ಥರು ಹೊಸದಾಗಿ ಜೀರ್ಣೋದ್ಧಾರ ಮಾಡಿದ್ದರಿಂದ ಹಳೆಯ ಅವಶೇಷಗಳು ಕಾಣದಾಗಿವೆ.

**ನೀಲಕಂಠೇಶ್ವರ ದೇವಾಲಯ :** ಇದು ಕ್ರಿ.ಶ. ೧೯೬೩-೧೯೭೩ರ ಅವಧಿಯಲ್ಲಿ ಮಸ್ಕಿಯ ಸಕಲ ಭಕ್ತಾದಿಗಳಿಂದ ನಿರ್ಮಾಣವಾಗಿದೆ. ಕುರಹಿನ ಶೆಟ್ಟಿ ಸಮಾಜದವರಿಗೆ ಈ ದೇಗುಲದ ದೈವವು ಆರಾಧ್ಯ ದೈವವಾಗಿದೆ.

**ದೇಸಾಯಿ ಬಾವಿ :** ಹಳೆಯದು, ಅರ್ಧಭಾಗ ಶಿಥಿಲವಾಗಿದೆ. (ಛಾ.ಚಿ.ನಂ-೯)

**ಕಲ್ಲು ಬಾವಿ :** ಇದರ ಕೆಲಭಾಗ ಶಿಥಿಲವಾಗಿದ್ದು ಮುಕ್ಕಾಲು ಭಾಗ ಜೀರ್ಣಾವಸ್ಥೆಯಲ್ಲಿದೆ. ಆದರೆ ಇದರ ನೀರು ಮಲಿನವಾಗಿದೆ. (ಛಾ.ಚಿ.ನಂ-೮).

**ಅಗಸೆ ಹತ್ತಿರದ ವೀರಗಲ್ಲುಗಳು :** (ಕ್ರಿ.ಶ.೧೭-೧೮ನೇ ಶತಮಾನ)

**ನಾಯಕವಾಡಿ ಶಾಲೆಯ ಆವರಣದಲ್ಲಿರುವ ವೀರಗಲ್ಲು, ಕಣಿವೆ ಆಂಜನೇಯ ದೇವಾಯಲದ ಹತ್ತಿರ ದೊಡ್ಡ ಬಂಡೆಗಲ್ಲಿಗೆ ವೀರಗಲ್ಲುಗಳಿವೆ.**

**ನಿರೀಕ್ಷಣ ಮಂದಿರ (I.B.):** ಇಲ್ಲಿ ಹಲವು ಶಾಸನ ಶಿಲ್ಪಗಳು, ಸಪ್ತ ಮಾತೃಕೆಯರ

ಶಿಲ್ಪ, ಇಮ್ಮಡಿ ಜಯಸಿಂಹನ ಶಾಸನ (ಛಾ.ಚಿ.ನಂ-೭), ಸಕಲೇಶ ಮಾದರಸ ಮಗನನ್ನು ಉಲ್ಲೇಖಿಸುವ ಶಾಸನ, ಕಲ್ಯಾಣ ಚಾಲುಕ್ಯ ದೇವಾಲಯದ ಬಿಡಿ ಸ್ಥಂಭಗಳು, ವೀರಗಲ್ಲುಗಳು ಮೊದಲಾದವುಗಳನ್ನು ಹಳೆಯ ಮಸ್ಕಿ ಗ್ರಾಮದಿಂದ ತಂದು ಇಲ್ಲಿ ಬಿಸಾಡಿದ್ದಾರೆ.

**ರೊಟ್ಟಿ ಮಠ (ರಟ್ಟಯ್ಯ ಶಿಲಾ ಶಾಸನ ಮಂದಿರ)** : ಇದು ಮೂಲತಃ ರೊಟ್ಟಿ ಮಠವಾಗಿದ್ದು ಹಿಂದಿನ ದಿನಗಳಲ್ಲಿ ಮಸ್ಕಿಯ ಸ್ವಾಮೀಜಿಗಳು ಊರಲ್ಲಿ ದಾನ ಪಡೆದುಕೊಂಡು ಬಂದ ರೊಟ್ಟಿಗಳನ್ನು ಇಲ್ಲಿನ ಕಂಬಗಳಿಗೆ ನೇತು ಹಾಕುತ್ತಿದ್ದರಂತೆ. ಮಸ್ಕಿ ನದಿ (ಹಿರೇಹಳ್ಳಿ) ತುಂಬಿ ಬಂದಾಗ ಉತ್ತರ ದಿಕ್ಕಿನ ಕಡೆಯಿಂದ ಬೇರೆ ಊರಿನ ಗ್ರಾಮಸ್ಥರು ಮಸ್ಕಿ ಗ್ರಾಮಕ್ಕೆ ತಲುಪಲು ಸಾಧ್ಯವಾಗದೆ ಈ ಹಳ್ಳದ ದಂಡೆಯಲ್ಲಿರುವ ಮಂದಿರದಲ್ಲಿ ಆಶ್ರಯ ಪಡೆದುಕೊಂಡು ಇಲ್ಲಿಯೇ ಊಟ ಮಾಡುತ್ತಿದ್ದರಂತೆ. ಅದಕ್ಕೆ ಈ ಮಂದಿರವನ್ನು 'ರೊಟ್ಟಮಠ' ಎಂಬ ಕರೆಯುತ್ತಾರೆ. ಇತ್ತೀಚೆಗೆ ಈ ಮಂದಿರಕ್ಕೆ ಹೆಸರು ಬರೆಯುವಾಗ ರಟ್ಟಯ್ಯ ಶಿಲಾಶಾಸನ ಮಂದಿರ ಎಂದು ತಪ್ಪಾಗಿ ಬರೆಸಲಾಗಿದೆ.

**ಜಿನಶಿಲ್ಪ ಮತ್ತು ಜಿನನ ಎರಡು ಪಾದಗಳು** : ಹಿರೇಬೆಟ್ಟದ ದೊಡ್ಡದಾದ ಬಂಡೆಗಲ್ಲಿಗೆ ಎರಡು ಪಾದಗಳು ಮತ್ತು ಹಳೆಯ ಬಸದಿಯ ಅವಶೇಷಗಳು ಕಾಣಬರುತ್ತವೆ (ಛಾ.ಚಿ.ನಂ.೧೨).

**ಮಹಿಶ ಮರ್ದಿನಿ ಶಿಲ್ಪ** : (ಭ್ರಮರಾಂಭ ಮಲ್ಲಿಕಾರ್ಜುನ ದೇವಾಲಯದ ಆವರಣ) ಕ್ರಿ.ಶ. ೧೧-೧೨ನೇ ಶತಮಾನ.

**ಮಲ್ಲಿಕಾರ್ಜುನ ದೇವರ ಮರದ ರಥ** : ಬೆಟ್ಟದಲ್ಲಿರುವ ಮಲ್ಲಿಕಾರ್ಜುನ ದೇವರನ್ನು ಕಾಣಲು ವಯೋವೃದ್ಧರಿಗೆ, ಮಕ್ಕಳಿಗೆ, ತೊಂದರೆಯಾಗುತ್ತದೆ ಎಂಬ ಉದ್ದೇಶದಿಂದ ಕ್ರಿ.ಶ. ೧೯೭೦-೭೧ರಲ್ಲಿ ಭಕ್ತರು ಪಟ್ಟಣದ ತೇರಬಜಾರಿನಲ್ಲಿ ಶ್ರೀ ಶೈಲ ಜಗದ್ಗುರುಗಳ ಸಾನ್ನಿಧ್ಯದಲ್ಲಿ ನೂತನ ಮಲ್ಲಿಕಾರ್ಜುನ ದೇವಸ್ಥಾನವನ್ನು ಕಟ್ಟಿಸಿ ಅಲ್ಲಿ ದೇವರ ಮೂರ್ತಿ ಪ್ರತಿಷ್ಠಾಪನೆ ಕಾರ್ಯ ಮಾಡಿದ್ದಾರೆ. ಅಂತೆಯೇ ಇಲ್ಲಿಯ ಮರದ ರಥವು ಶತಮಾನದಷ್ಟು ಹಳೆಯದಾಗಿದ್ದು, ಕ್ರಿ.ಶ. ೨೦೦೭ರಲ್ಲಿ ನಾಲ್ಕು ಹೊಸ ಚಕ್ರಗಳನ್ನು ಜೋಡಿಸಿದ್ದಾರೆ. ಇದು ಪ್ರತಿವರ್ಷ ಭಾರತ ಹುಣ್ಣಿಮೆಯಂದು ರಥೋತ್ಸವ ಜರುಗುತ್ತದೆ.

ಇದೇ ಮಲ್ಲಿಕಾರ್ಜುನ ದೇವರ ಮಂದಿರದ ಕುದುರೆ ಶಿಲ್ಪ, ಬನ್ನಿ ಮಹಾಂಕಾಳಿ ಕಟ್ಟೆಯಲ್ಲಿ ಶಕ್ತಿ ಮತ್ತು ತ್ರೈಪುರಷ ಮೊದಲಾದ ವಿಗ್ರಹಗಳು ಮಸ್ಕಿಯಲ್ಲಿ ಕಾಣಬರುತ್ತವೆ.

**(ಕರ್ನಾಟಕ ಇತಿಹಾಸ ಅಕಾದೆಮಿ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ, ನಾಗರಾಜಪ್ಪ ಎಸ್, ದೇವನಾಂಪ್ರಿಯ ಅಶೋಕ ಸರಕಾರಿ ಪ್ರಥಮ ದರ್ಜೆ ಕಾಲೇಜು ಪ್ರಾಂಶುಪಾಲರಾದ ಶ್ರೀ ದಾವಲಸಾಬ್ ನಧಾಫ್, ಚನ್ನಬಸವ ಪಾಮನಕಲ್ಲೂರು ಹಾಗೂ ಇದೇ ಕಾಲೇಜಿನ ಬೋಧಕ ಬೋಧಕೇತರರಿಗೂ ಕೃತಜ್ಞತೆಗಳು).**

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೨. ಕರ್ನಾಟಕ ಕಾದಂಬರಿ

–ಡಾ. ಪಿ.ವಿ. ನಾರಾಯಣ*

ಕನ್ನಡದ ಚಂಪೂ ಕಾವ್ಯಧಾರೆ ಮೂರು ಮುಖ್ಯ ಟಿಸಿಲುಗಳಲ್ಲಿ ಹರಿದಿದೆ: ಜೈನ, ಬ್ರಾಹ್ಮಣ ಮತ್ತು ವೀರಶೈವ. ಜೈನರು ಕನ್ನಡದಲ್ಲಿ ಕಾವ್ಯರಚನೆ ಮಾಡಿದವರಲ್ಲಿ ಮೊತ್ತ ಮೊದಲಿಗರೆಂಬುದು ಸರ್ವವಿದಿತವಾದ ವಿಷಯ. ಅದಕ್ಕೆ ಕಾರಣ ಪ್ರಾಯಶಃ ಅವರು ತಮ್ಮ ಮತಧರ್ಮದ ಬಗ್ಗೆ ಸಾಮಾನ್ಯರಲ್ಲಿ ಅರಿವು ಮೂಡಿಸಬೇಕೆಂಬ ತುಡಿತ. ಜೈನವು ಆರಂಭಗೊಂಡದ್ದೇ ಪ್ರಾಕೃತದಂತಹ ಜನಭಾಷೆಯ ಮೂಲಕ. ಒಂದು ಹಂತದಲ್ಲಿ ಅದು ಸಂಸ್ಕೃತಕ್ಕೆ ತಿರುಗಿದರೂ, ಕನ್ನಡದಂತಹ ಜನಭಾಷೆಗಳ ಮೂಲಕ ಮತ್ತೆ ಅದು ಜನಮುಖಿಯಾಯಿತು. ಜೈನ ಚಂಪೂ ಕವಿಗಳು ಹಳೆಯ ವಸ್ತುವಿಷಯಗಳನ್ನು ಆರಿಸಿಕೊಂಡು ಕಾವ್ಯರಚನೆ ಮಾಡಿದರೂ ಅದರಲ್ಲಿ ಹೊಸತನ ಮತ್ತು ಬದುಕಿನ ಅದೃಶ್ಯ ಶಕ್ತಿಗಳ ಬಗ್ಗೆ ಚಿಂತನೆ ನಡೆಸಿದರು. ಅನಂತರ ಬಂದವರು ಬ್ರಾಹ್ಮಣ ಕವಿಗಳು; ಅವರಿಗೆ ತಮ್ಮ ವೈದಿಕ ಮತವನ್ನು ಜನಸಾಮಾನ್ಯರಲ್ಲಿ ಪ್ರಚುರಗೊಳಿಸುವ ಉದ್ದೇಶವಿರಲಿಕ್ಕೆ ಸಾಧ್ಯವಿರಲಿಲ್ಲ. ಏಕೆಂದರೆ ವೈದಿಕ ಸಂಸ್ಕೃತನಿಷ್ಠವಾದದ್ದು, ಜನಸಾಮಾನ್ಯದೂರವಾದದ್ದು; ತನ್ನನ್ನು ಇಡೀ ಜನಸಮೂಹದಿಂದ ಬೇರ್ಪಡಿಸಿಕೊಂಡು ಅವರೆಲ್ಲರಿಗಿಂತ ತಾನು ಮಿಗಿಲೆಂಬ ಹಮ್ಮು ಬೆಳೆಸಿಕೊಳ್ಳುವುದಲ್ಲದೆ ಅವರ ಮೇಲೆ ಹಿಡಿತವನ್ನು ಸಾಧಿಸಿಕೊಂಡಿತ್ತು. ಹೀಗಾಗಿ ಕನ್ನಡದಲ್ಲಿ ಮೊದಲ ಬಾರಿಗೆ ಕಾವ್ಯರಚನೆ ಮಾಡಿದ ಬ್ರಾಹ್ಮಣ ಕವಿಗಳು ಜನರನ್ನು ತಲುಪಬೇಕೆಂಬ ತುರ್ತಿನಿಂದ ಪ್ರೇರಿತರಾದವರಲ್ಲ. ಆದರೆ ತಮ್ಮ ತಾಯಿನುಡಿಯಾದ ಕನ್ನಡದ ಬಗೆಗಿನ ಪ್ರೇಮ ಅವರನ್ನು ಈ ಕಾರ್ಯಕ್ಕೆ ತೊಡಗಿಸಿರಬೇಕು. ಅಲ್ಲದೆ, ಸಂಸ್ಕೃತದಲ್ಲಿ ಬರೆದರೆ ಎಷ್ಟು ಜನರನ್ನು ತಲುಪಬಹುದು ಎಂಬ ಅನುಮಾನವೂ ಅವರನ್ನು ಕಾಡಿರಬಹುದು; ಜೊತೆಗೆ ಇದಾಗಲೇ ಕನ್ನಡ ವಾತಾವರಣ ನಾಡಿನುದ್ದಕ್ಕೂ ಹರಡಿತ್ತು. ಹೀಗಾಗಿ ಬ್ರಾಹ್ಮಣ ಕವಿಗಳು ಕನ್ನಡದಲ್ಲಿ ಬರೆಯಲು ಅನಿವಾರ್ಯವಾಗಿಯೇ ತೊಡಗಿರಬಹುದು. ಆದರೆ ಅವರು

* 'ತಂಗಾಳಿ', ನಂ. ೩೦, ಆರ್.ಬಿ.ಐ. ಕಾಲೋನಿ, ಜಯನಗರ ಮೂರನೇ ಬ್ಲಾಕ್ ಪೂರ್ವ, ಬೆಂಗಳೂರು – ೫೬೦ ೦೧೧, ಮೊ: ೯೯೦೦೧ ೯೬೫೧೭

ಆರಂಭಮಾಡಿದ್ದು ಧಾರ್ಮಿಕ ಬರವಣಿಗೆಯಿಂದಲ್ಲ, ಧರ್ಮೇತರ ವಸ್ತುವಿನೊಡನೆ. ನಮಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿ ಕಾವ್ಯರಚನೆ ಮಾಡಿದ ಮೊದಮೊದಲ ಬ್ರಾಹ್ಮಣ ಕವಿಗಳು ನಾಲ್ವರು: ಮೊದಲನೆಯ ನಾಗವರ್ಮ, ದುರ್ಗಸಿಂಹ, ರುದ್ರಭಟ್ಟ ಮತ್ತು ದೇವಕವಿ; ಅವರ ಕಾವ್ಯಗಳು ಅನುಕ್ರಮವಾಗಿ 'ಕರ್ಣಾಟಕ ಕಾದಂಬರಿ', 'ಪಂಚತಂತ್ರ', 'ಜನ್ನಾಥವಿಜಯ' ಮತ್ತು 'ಕುಸುಮಾವಳಿ'. ಅವುಗಳಲ್ಲಿ 'ಜನ್ನಾಥವಿಜಯ'ವು ಧಾರ್ಮಿಕತೆಯನ್ನು ಮೀರಿದ ಭಕ್ತಿಕಾವ್ಯ. ಇನ್ನುಳಿದವು ಲೌಕಿಕ ವಸ್ತುವನ್ನೊಳಗೊಂಡವು. ಮೊದಲೆರಡು ಸಂಸ್ಕೃತದಿಂದ ಬರಮಾಡಿಕೊಂಡ ಅನುವಾದ ಕೃತಿಗಳಾದರೆ, ಕೊನೆಯೆರಡು ಸ್ವತಂತ್ರ ಕಲ್ಪನೆಗಳು.

ಈ ಹಿನ್ನೆಲೆಯಲ್ಲಿ ನೋಡಿದರೆ ಮೊದಲನೆಯ ನಾಗವರ್ಮನು ಕನ್ನಡದ ಮೊತ್ತ ಮೊದಲ ಬ್ರಾಹ್ಮಣ ಕವಿ ಎಂಬುದು ತಿಳಿಯುತ್ತದೆ. (ನಾಗವರ್ಮ ಎಂಬ ಹೆಸರಿನ ಕವಿಗಳು ಕನ್ನಡದಲ್ಲಿ ಎಷ್ಟು ಮಂದಿಯಿದ್ದಾರೆ ಎಂಬುದೂ ವಿದ್ವಾಂಸರಲ್ಲಿ ಚರ್ಚೆಯ ವಿಷಯವಾಗಿದೆ: ಇಬ್ಬರೋ, ಮೂವರೋ, ನಾಲ್ವರೋ? 'ವತ್ಸರಾಜಚರಿತ'ದ ನಾಗವರ್ಮ, 'ಛಂದೋಂಬುಧಿ'ಯ ನಾಗವರ್ಮ, 'ಕಾವ್ಯಾವಲೋಕನ', 'ವರ್ಧಮಾನಪುರಾಣ' ಮೊದಲಾದ ಕೃತಿಗಳ ನಾಗವರ್ಮ, 'ಚಂದ್ರಚೂಡಾಮಣಿಶತಕ'ದ ನಾಗವರ್ಮ, 'ಅಭಿಧಾನ ರತ್ನಮಾಲಾ' ಟೀಕೆಯ ನಾಗವರ್ಮ ಹೀಗೆ ಹಲವರು). ಅವನಲ್ಲಿ ನಮಗೆ ಪ್ರಸ್ತುತನಾದವನು ಮೊದಲನೆಯ ನಾಗವರ್ಮ. ಆದರೆ ಅವನ ಕಾಲವಾವುದೋ ಖಚಿತವಿಲ್ಲ; ಕಾವ್ಯದಲ್ಲೆಲ್ಲೂ ತನ್ನ ಕಾಲ ಮತ್ತು ಹಿನ್ನೆಲೆಗಳ ಬಗ್ಗೆ ಅವನು ಹೇಳಿಕೊಂಡಿಲ್ಲ. ಕ್ರಿ.ಶ. ಹತ್ತನೆಯ ಶತಮಾನದ ಕೊನೆಯ ಹಾಗೂ ಹನ್ನೊಂದರ ಮೊದಲ ಭಾಗದಲ್ಲಿ ಅವನು ಜೀವಿಸಿದ್ದನೆಂಬ ಅಭಿಪ್ರಾಯ ಮಾನ್ಯವಾಗಿದೆ. ಅವನ ಕೃತಿ ಸೃಜನಶೀಲ ಕಾವ್ಯವಾದ 'ಕರ್ಣಾಟಕ ಕಾದಂಬರಿ', 'ಕರ್ಣಾಟಕ ಕಾದಂಬರಿ'ಯ ಮೊದಲ ಪದ್ಯದಲ್ಲಿ ಚಂದ್ರನನ್ನು ಸುತ್ತಿಸಿರುವುದಲ್ಲದೆ, ಮತ್ತೊಂದರಲ್ಲಿ ತನ್ನ 'ಕೃತಿಪತಿ' ಚಂದ್ರನೆಂದು ಹೇಳಿಕೊಳ್ಳುತ್ತಾನೆ.

ತನ್ನ ಆಶ್ರಯದಾತನಾದ ಚಂದ್ರನೆಂಬ ರಾಜನನ್ನು ಚಂದ್ರಾಪೀಡನ ಜೊತೆಯಲ್ಲಿ ಸಮೀಕರಿಸಿರಬಹುದಾದ ಸಾಧ್ಯತೆಯನ್ನು ಕೆಲವರು ಮಂಡಿಸುತ್ತಾರೆ (ಕಾವ್ಯದ ಕೊನೆಯಲ್ಲಿ "ಕಾದಂಬರಿ ಪಸರಿಸಿ ರಾಜೇಂದ್ರಚಂದ್ರಾಂಕನೊಳ್ ಸಂಗತಿವೆತ್ತಾದಂ ತ್ರಿಲೋಕೀ ಸಹಚರಿಯೆನೆ ತಾಂ ಸಂದುದಾಚಂದ್ರತಾರಂಬರಂ" ಎಂಬ ಸಾಲಿನ ಆಧಾರದ ಮೇಲೆ). ತನ್ನ ಕವಿತೆಯನ್ನು ಮೆಚ್ಚಿ ಭೋಜರಾಜನು ಶಾಸನಪೂರ್ವಕವಾಗಿ ಕಳಿಂಗ, ಕಾಂಭೋಜದ ಕುದುರೆಗಳನ್ನು ತನಗೆ ಬಳುವಳಿ ನೀಡಿದನೆಂದು ಕವಿ ಹೇಳಿಕೊಳ್ಳುವುದರಿಂದ ಭೋಜನೆಂಬ ರಾಜನೂ ಇವನಿಗೆ ಪ್ರೋತ್ಸಾಹವಿತ್ತಿರಬೇಕು. ಕಾವ್ಯದಲ್ಲಿ ಅಲ್ಲಲ್ಲಿ 'ತ್ರಿಭುವನ' 'ತ್ರೈಲೋಕ್ಯ' 'ಜಗದೇಕ' ವಿಕ್ರಮಾಂಕ' ಎಂಬ ಶಬ್ದಗಳು ಹೆಚ್ಚಾಗಿ ಬಳಕೆಯಲ್ಲಿರುವುದರಿಂದ ಇವನ ಆಶ್ರಯದಾತನಾಗಿದ್ದವನು ಚಾಲುಕ್ಯಚಕ್ರವರ್ತಿಗಳ ಸಾಮಂತನಾಗಿದ್ದ ಕೊಲ್ಲಾಪುರ-ಕರ್ಹಾಡ ಪ್ರಾಂತ್ಯದಲ್ಲಿ ಆಳುತ್ತಿದ್ದ ಚಂದ್ರನೆಂಬುವನು; ಇವನ ಕಾವ್ಯವನ್ನು ಪ್ರೋತ್ಸಾಹಿಸಿ ಕುದುರೆಗಳನ್ನಿತ್ತವನು ಧಾರಾಪುರದಲ್ಲಿ ಆಳುತ್ತಿದ್ದ ಭೋಜರಾಜ ಎಂಬುವವನು -

ಎಂದು ಹಲವರು ತೀರ್ಮಾನಿಸುತ್ತಾರೆ. ನಾಗವರ್ಮ ತನ್ನನ್ನು 'ಬುಧಾಬ್ಜವನ ಕಳಹಂಸ' ಎಂದು ಕರೆದುಕೊಳ್ಳುತ್ತಾನೆ. ಪ್ರಾಯಶಃ ಇದು ಇವನ ಬಿರುದು; ಜೊತೆಗೆ 'ಕವಿರಾಜಹಂಸ' ಎಂಬುದೂ ಅವನ ಬಿರುದಾಗಿದ್ದಂತೆ ಕಾಣುತ್ತದೆ. 'ಛಂದೋಂಬುಧಿ' ಎಂಬ ಛಂದಶ್ಶಾಸ್ತ್ರ ಕುರಿತ ಗ್ರಂಥವೂ ಅವನದೇ ಎಂಬ ಅಭಿಪ್ರಾಯವಿದೆ. ಆದರೆ ಆ ಬಗ್ಗೆ ಖಚಿತಾಭಿಪ್ರಾಯವಿಲ್ಲ; ಅದು ಬೇರೆಯ ನಾಗವರ್ಮನದೇ ಇರಬಹುದು. ಏಕೆಂದರೆ 'ಛಂದೋಂಬುಧಿ'ಯಲ್ಲಿ ಮೊದಲಿಗೆ ತನ್ನ ಸ್ವವಿವರಗಳನ್ನೆಲ್ಲ ಕೃತಿಕರ್ತೃ ನೀಡುತ್ತಾನೆ. ಆ ಪ್ರಕಾರ ಈ ನಾಗವರ್ಮನು ವೆಂಗಿನಾಡುವಿನ ಏಳು ವಿಶೇಷ ಗ್ರಾಮಗಳಲ್ಲಿ ಒಂದಾದ ವೆಂಗುಪಟು ಎಂಬ ಊರಿನವನು. ಅಲ್ಲಿನ ಮಹಾ ಪಂಡಿತ ವೆಣ್ಣಮಯ್ಯ, ಅವನ ಮಗ ದಾಮಮಯ್ಯ, ಅವನ ಮಗ ವೆಣ್ಣಮಯ್ಯ, ಅವನ ಮಗನೇ ನಾಗವರ್ಮ. ಅವನ ಅರಸ ರಕ್ಕಸಗಂಗ, ಪ್ರಸಿದ್ಧರಾದ ಅಜಿತಸೇನರು ಗುರುಗಳು, ಸಲಹಿದವನು ಚಾವುಂಡರಾಯ ಇತ್ಯಾದಿ. ಈ ವಿವರಗಳೂ 'ಕಾದಂಬರಿ'ಕಾರನ ವಿವರಗಳೂ ಭಿನ್ನವಾಗಿರುವುದು ಸ್ಪಷ್ಟವಾಗಿದೆ. ಆದರೆ ಈ ಎರಡೂ ಕೃತಿಗಳನ್ನು ಬರೆದವನು ಒಬ್ಬನೇ, ಆ ನಾಗವರ್ಮನು ಮೊದಲು ಚಾವುಂಡರಾಯನ ಆಸ್ಥಾನದಲ್ಲಿದ್ದು, ಆನಂತರ ಕೊಲ್ಲಾಪುರ-ಕರ್ಹಾಡನ ಚಂದ್ರಭೂಪಾಲನ ಆಶ್ರಯಕ್ಕೆ ಬಂದನೆಂದೂ, ಆನಂತರ ಭೋಜನಿಂದಲೂ ಗೌರವಿಸಲ್ಪಟ್ಟನೆಂದೂ ಕೆಲವರು ಹೇಳುತ್ತಾರೆ.

'ಕರ್ಣಾಟಕ ಕಾದಂಬರಿ' ಸ್ವತಂತ್ರ ಕಾವ್ಯವಲ್ಲ ಎಂಬುದನ್ನಾಗಲೇ ಗಮನಿಸಿದ್ದೇವೆ; ಅದು ಬಾಣಭಟ್ಟ (ಮತ್ತು ಅವನ ಮಗ ಭೂಷಣಭಟ್ಟ)ನ ಸಂಸ್ಕೃತ ಗದ್ಯಕಾವ್ಯದ ವಿವೇಚನಾಯುತವಾಗಿ ಸಂಗ್ರಹಗೊಂಡ ಚಂಪೂರೂಪದ ಅನುವಾದ. ಮೂಲ ಸಂಸ್ಕೃತವು ಗದ್ಯಕಾವ್ಯ, ಅದನ್ನು ಬರೆದವನು ಬಾಣ. ಇವನು ಕ್ರಿ.ಶ. ೬೦೬ ರಿಂದ ೬೪೭ ರವರೆಗೆ ಆಳಿದ ಶ್ರೀಹರ್ಷ ಅಥವಾ ಎರಡನೇ ಶಿಲಾದಿತ್ಯನ ಕಾಲದಲ್ಲಿದ್ದವನು. ಬ್ರಾಹ್ಮಣನಾದ ಈ ಕವಿ ಎರಡು ಕೃತಿಗಳ ಕರ್ತೃ: 'ಹರ್ಷಚರಿತೆ' ಮತ್ತು 'ಕಾದಂಬರಿ'; ಎರಡೂ ಗದ್ಯಕೃತಿಗಳೇ. ಇವಲ್ಲದೆ ಬಾಣನು ಇನ್ನೂ ಕೆಲವು ಕೃತಿಗಳನ್ನು ರಚಿಸಿದನೆಂದು ಹೇಳುವವರಾದರೂ ಅದರ ಬಗ್ಗೆ ಒಮ್ಮತವಿಲ್ಲ. ಹೀಗಾಗಿ ಖಚಿತವಾಗಿ ಅವನದೆಂದು ಹೇಳಬಹುದಾದುದು ಈ ಎರಡನ್ನು ಮಾತ್ರ. ಮೊದಲನೆಯದು 'ಹರ್ಷಚರಿತೆ', ಎಂಟು ಆಶ್ವಾಸಗಳಿಂದ ಕೂಡಿದ ಹರ್ಷನ ಬಗೆಗಿನ ಕೃತಿ (ಆದರೂ ಕತೆ ಅಪೂರ್ಣವಾಗಿದೆ). ಎರಡನೆಯದೇ 'ಕಾದಂಬರಿ'. ಇದರಲ್ಲಿ ಎರಡು ಭಾಗಗಳಿವೆ: 'ಪೂರ್ವಭಾಗ' ಮತ್ತು 'ಉತ್ತರಭಾಗ'; ಮೊದಲ ಭಾಗವನ್ನು ಬಾಣನೇ ಬರೆದು ತೀರಿಕೊಂಡ; ಹಾಗಾಗಿ ಉತ್ತರ ಭಾಗವನ್ನು ಅವನ ಮಗ ಭೂಷಣ ಅಥವಾ ಪುಲಿಂದ ಎಂಬುವವನು ಬರೆದನಂತೆ. ಆದರೆ ಎರಡನೆಯ ಭಾಗವು ಮೊದಲ ಭಾಗದಷ್ಟು ಉಜ್ವಲವಾದ ರಚನೆಯಾಗಿಲ್ಲ ಎಂಬುದು ಸಂಸ್ಕೃತ ಕಾವ್ಯಪ್ರೇಮಿಗಳ ಮಾತು. 'ಕಾದಂಬರಿ'ಯ ಕತೆಯು ಸ್ವಂತ ಸೃಷ್ಟಿಯೇನಲ್ಲ. ಅದರ ಮೂಲ ಗುಣಾಢ್ಯನ 'ಬೃಹತ್ಕಥಾ' ಇರಬಹುದು ಎಂದು ಹೇಳುತ್ತಾರೆ; ಆದರೆ 'ಬೃಹತ್ಕಥಾ' ಸಿಕ್ಕಿಲ್ಲ. ಅದು ಪೈಶಾಚೀ ಭಾಷೆಯಲ್ಲಿದ್ದಿತೆಂದು (ಪ್ರಾಕೃತದ ಒಂದು ಪ್ರಭೇದ) ತಿಳಿದುಬರುತ್ತದೆ. ಕತೆಯನ್ನು 'ಕಥಾಸರಿತ್ಸಾಗರ'ದಿಂದ

ತೆಗೆದುಕೊಂಡಿರಬೇಕೆಂದೂ ಅಭಿಪ್ರಾಯವಿದೆ. ಬಾಣ ಮುಖ್ಯವಾಗಿ ಹೆಸರಾಗಿರುವುದು ಅವನ ಗದ್ಯಶೈಲಿಯಿಂದ; ಅವನ 'ಬರವಣಿಗೆಯೂ ಅಷ್ಟೇನೂ ತಿಳಿಯಾಗಿರದೆ ಪಂಡಿತರಿಗೂ ಅನೇಕವೇಳೆ ಕ್ಲಿಷ್ಟವೇ ಆಗುತ್ತದೆ' ಎಂದು ಕೆಲವರ ಅಭಿಪ್ರಾಯವಾದರೂ, ಅವನ ಬರವಣಿಗೆಯಲ್ಲಿ "ಒಂದೇ ತೂಕದ ಪದವೃಂದಗಳು, ಕಾಣದಂತೆ ಕಿವಿಗಿಂಪಾಗಿರುವ ಪ್ರಾಸದ ಸಮಾನಶ್ರುತಿ ಅವನ ಗದ್ಯದ ವಿಶೇಷಗ"ಳೆಂದೂ ಕೆಲವರು ಬಣ್ಣಿಸುತ್ತಾರೆ. "ಬಾಣನ ಶಬ್ದಭಂಡಾರದ ಸಂಗ್ರಹ ಅಮೇಯ ಶಬ್ದಪುನರುಕ್ತಿಯಿಲ್ಲದೆ ಅವನು ಒಂದೇ. ಅರ್ಥವನ್ನು ಇಪ್ಪತ್ತು ವಾಕ್ಯಗಳಲ್ಲಿ ಹೊಸಹೊಸವೆನಿಸುವಂತೆ ಹೇಳಬಲ್ಲನು." ತನ್ನೆರಡೂ ಕೃತಿಗಳನ್ನು ಸಂಸ್ಕೃತ ಗದ್ಯದಲ್ಲಿ ಬರೆಯುವ ಮೂಲಕ ಅವನು ಒಂದು ಹೆದ್ದಾರಿಯನ್ನು ನಿರ್ಮಿಸಿದ: 'ಗದ್ಯಂ ಕವೀನಾಂ ನಿಕಷಂ ವದಂತಿ' (ಗದ್ಯವು ಕವಿಯ ಯೋಗ್ಯತೆಯ ಒರೆಗಲ್ಲು) ಮತ್ತು 'ಬಾಣೋಚ್ಛಿಷ್ಟಂ ಜಗತ್ ಸರ್ವಂ' (ಜಗತ್ತಿನ ಬರವಣಿಗೆಯೆಲ್ಲವೂ ಬಾಣನ ಎಂಜಲು) ಎಂಬಂತಹ ಮಾತುಗಳಿಗೆ ಅವನು ಕಾರಣನಾದವನು.

ಕಾದಂಬರಿಯನ್ನು ಇಡಿಯಾಗಿ ತೆಗೆದುಕೊಂಡು ಅದನ್ನು ಪರಿಶೀಲಿಸಬೇಕು. ಏಕೆಂದರೆ ಕನ್ನಡದ ನಾಗವರ್ಮನು ಎರಡನ್ನೂ ತನಗೆ ಸೂಕ್ತ ಕಂಡಂತೆ ಕನ್ನಡದಲ್ಲಿ ಚಂಪೂರೂಪವಾಗಿ ತಂದಿದ್ದಾನೆ. ಹೀಗಾಗಿ ಇದರ ಶೈಲಿಯಲ್ಲಿ ಏಕರೂಪತೆಯಿದೆ. ನಮ್ಮ ಕವಿ ಮೂಲದಂತೆ ಇದನ್ನು ಗದ್ಯರೂಪದಲ್ಲಿ ಏಕೆ ಬರೆಯಲಿಲ್ಲವೋ ತಿಳಿಯದು. ಹಾಗೇನಾದರೂ ಬರೆದಿದ್ದರೆ ಕನ್ನಡದಲ್ಲಿ ಇದಕ್ಕೆ ಮತ್ತಷ್ಟು ಮಹತ್ವವುಂಟಾಗುತ್ತಿತ್ತು. ಆ ಕಾಲದಲ್ಲಿ ಕನ್ನಡ ಕವಿಗಳು ಅನುಸರಿಸುತ್ತಿದ್ದುದು ಚಂಪೂಮಾರ್ಗವನ್ನು; ಹಾಗಾಗಿ ಕನ್ನಡ ಕಾವ್ಯವನ್ನು ಬರೆಯಹೊರಟ ನಾಗವರ್ಮನೂ ಚಂಪೂವಿನಲ್ಲೇ 'ಕಾದಂಬರಿ'ಯನ್ನು ಕನ್ನಡಿಸಿರಬೇಕು. 'ಕರ್ಣಾಟಕ ಕಾದಂಬರಿ'ಯಲ್ಲಿ ಕಥಾವತರಣಂ, ಚಂದ್ರಾಪೀಡನ ಜನನ ಮತ್ತು ಬಾಲ್ಯ, ಚಂದ್ರಾಪೀಡನ ಜೈತ್ರಯಾತ್ರೆ, ಮಹಾಶ್ವೇತೆಯ ಸಂದರ್ಶನ, ಮಹಾಶ್ವೇತೆಯ ವೃತ್ತಾಂತ, ಕಾದಂಬರಿಯ ಪ್ರಥಮ ಸಂದರ್ಶನ, ಕಾದಂಬರಿಯ ದ್ವಿತೀಯ ಸಂದರ್ಶನ, ಚಂದ್ರಾಪೀಡನ ಪುನರಾಗಮನ, ಚಂದ್ರಾಪೀಡನ ಪ್ರಾಣವಿಯೋಗ ಮತ್ತು ಚಂದ್ರಾಪೀಡ–ಕಾದಂಬರಿಯರ ಪುನಸ್ಸಮಾಗಮ ಎಂಬ ಹತ್ತು ಆಶ್ವಾಸಗಳಿವೆ: ಮಧ್ಯೆ ಮಧ್ಯೆ ಗದ್ಯಭಾಗಗಳನ್ನೊಳಗೊಂಡಂತೆ ಒಟ್ಟು ೧೪೩೧ ಪದ್ಯಗಳಿವೆ. "ಅವನ ಶೈಲಿ ಪಡೆಸಾದುದಲ್ಲ, ಚಂಪೂ ರೂಪವನ್ನು ಗಮನಿಸಿದಾಗ ನಾಗವರ್ಮನು ಸಾಧ್ಯವಾದಮಟ್ಟಿಗೂ ಸರಳವಾದ ಕನ್ನಡದಲ್ಲಿಯೇ ಗ್ರಂಥರಚನೆ ಮಾಡಿದ್ದಾನೆ. ಕಥೆ ಹೇಳುವಾಗ ಅವನ ಶೈಲಿ ತುಂಬಾ ತಿಳಿಯಾಗಿರುತ್ತದೆ. ವರ್ಣನೆಗಳು ಬಂದಾಗ ಸಂಸ್ಕೃತವನ್ನು ತುಂಬಿ ಸಮಾಸಗಳನ್ನು ಹೆಣೆಯುವುದು ಕಂಡುಬರುತ್ತದೆ. ಇದು ಹೆಚ್ಚಾಗಿ ಕಂಡುಬರುವುದು ಗದ್ಯದಲ್ಲಿ". ಅವನು ತನ್ನ ಕಥನದಲ್ಲಿ ಕೆಲವು ವೇಳೆ ಮೂಲದಲ್ಲಿರುವುದನ್ನು ಬಿಡುತ್ತಾನೆ; ಮತ್ತೆ ಕೆಲವೆಡೆ ಮೂಲದಲ್ಲಿಲ್ಲದ್ದನ್ನು ಸೇರಿಸಿಯೂ ಬಿಡುತ್ತಾನೆ. "ಒಟ್ಟಿನಲ್ಲಿ ಹೇಳುವುದಾದರೆ, ನಾಗವರ್ಮನು ಮೂಲಗ್ರಂಥವನ್ನು ಹೆಜ್ಜೆಹೆಜ್ಜೆಗೂ ಅನುಸರಿಸಿದ್ದಾನೆ. ಆದರೂ ಅವನದು 'ಮಕ್ಕೀಕಾ ಮಕ್ಕಿ' ಪರಿವರ್ತನವಲ್ಲ". ಇಷ್ಟು

ಕವಿಕಾವ್ಯ ವಿಚಾರದ ಹಿನ್ನೆಲೆಯಲ್ಲಿ ಈಗ 'ಕರ್ಣಾಟಕ ಕಾದಂಬರಿ'ಯನ್ನು ಸ್ವಲ್ಪ ವಿಶದವಾಗಿ ಪರಿಶೀಲಿಸಬಹುದು.

'ಕಾದಂಬರಿ'ಯದು ತುಂಬ ಹೃದ್ಯವಾದ ಕಥಾನಕ; ರಮ್ಯ ವಸ್ತು, ಎಲ್ಲರಿಗೂ ಪ್ರಿಯವಾಗುವಂಥದು. "ಈ ಕಲ್ಪನಾರಾಜ್ಯದಲ್ಲಿ ಹರ್ಷಚರಿತೆಯಂತೆ ಲೌಕಿಕವಾದ ವೀರಕರುಣಾದಿಗಳಿಗೆ ಎಡೆಯಿಲ್ಲ. ಇಲ್ಲಿ ಶೃಂಗಾರಕ್ಕೇ ಪ್ರಧಾನ ಪಟ್ಟ; ಉಳಿದುದೆಲ್ಲವೂ ಅದರ ಅಧೀನ. ಈ ಶೃಂಗಾರದಲ್ಲಿ ಕೂಡ ಪ್ರಾಪಂಚಿಕವಾದ ಕ್ಷುದ್ರಸಂಗತಿಗಳಿಗೆ ಸ್ಥಾನವಿಲ್ಲ. ಇಲ್ಲಿಯ ನಾಯಕರು ಪ್ರಥಮಾನುರಾಗದ ಬೇಗೆಯನ್ನು ಪ್ರೇಯಸಿಯ ಆಗಮನದವರೆಗೆ ಕೂಡ ತಡೆಯಲಾರದೆ ಪ್ರಾಣವನ್ನೇ ಬಿಟ್ಟುಬಿಡುವಂತಹ ಮೃಣಾಲಕೋಮಲಹೃದಯರು. ಪ್ರೇಯಸಿಯರಾದರೂ ಪ್ರೇಮಕ್ಕಾಗಿ ಸರ್ವಸ್ವವನ್ನೂ ತ್ಯಾಗಮಾಡುವಂತಹ ದೇವಿಯರು." ರಮ್ಯವಾಗಿರುವುದರ ಜೊತೆಗೆ ಈ ಕಾವ್ಯದ ಕಥನವು ಗೋಜಲಿನಿಂದ ಕೂಡಿ ಬುದ್ಧಿ ಚುರುಕುಗೊಳ್ಳುವಂತೆಯೂ ಮಾಡುತ್ತದೆ; ಜೊತೆಗೆ ಕೌತುಕವನ್ನು ಹುಟ್ಟಿಸುವಂತಹದೂ ಆಗಿದೆ; ಹೊಸ ಬಗೆಯ ನಿರೂಪಣೆಯಿಂದ ಓದುಗರ ಮನಸ್ಸನ್ನು ತಣಿಸುವಂಥದೂ ಆಗಿದೆ.

ಕಾವ್ಯದ ನಿರೂಪಣೆಯ ವಿಧಾನವನ್ನು ಅನುಸರಿಯೇ ಈ ಸ್ವಾರಸ್ಯಕರ ಕತೆಯನ್ನು ಹೀಗೆ ಸಂಗ್ರಹಿಸಬಹುದು: ಮಾಳವದೇಶದ ರಾಜಧಾನಿ ವಿದಿಶೆ, ಅದರ ರಾಜ ಶೂದ್ರಕ. ಒಂದು ದಿನ ಬೆಳಗ್ಗೆ ರಾಜ ಒಡ್ಡೋಲಗದಲ್ಲಿದ್ದಾಗ ಒಬ್ಬ ಸುಂದರ ಚಂಡಾಲ ಕನ್ಯೆ ರಾಜನ ಅನುಮತಿಯೊಂದಿಗೆ ಓಲಗಕ್ಕೆ ಬರುತ್ತಾಳೆ. ತಾನು ಅಮೂಲ್ಯರತ್ನವೆಂದು ಭಾವಿಸಿದ್ದ ಗಿಳಿಯೊಂದು ಅವಳು ತಂದಿದ್ದ ಚಿನ್ನದ ಪಂಜರದಲ್ಲಿರುತ್ತದೆ. ಪಂಜರವನ್ನು ಅವಳು ರಾಜನ ಮುಂದಿಟ್ಟಾಗ ಅದು 'ಆರ್ಯೆ' ಎಂಬ ಪದ್ಯಜಾತಿಯಲ್ಲಿ ಪದ್ಯವೊಂದನ್ನು ಕಟ್ಟಿ ರಾಜನನ್ನು ಹೊಗಳುತ್ತದೆ. ಇದರಿಂದ ರಾಜ ಮತ್ತು ಅಲ್ಲಿದ್ದವರಿಗೆಲ್ಲ ಪರಮಾಶ್ಚರ್ಯ! ಕುತೂಹಲದಿಂದ ಅದರ ಕತೆಯೇನೆಂದು ರಾಜ ವಿಚಾರಿಸುತ್ತಾನೆ. ಆಗಲೇ ವೇಳೆಯಾದ್ದರಿಂದ ಸ್ನಾನ ಊಟಗಳನ್ನು ಮುಗಿಸಿ, ಗಿಳಿಗೂ ಅದರ ವ್ಯವಸ್ಥೆ ಮಾಡಿ. ಎಲ್ಲ ಮುಗಿದ ಮೇಲೆ ರಾಜ ಮತ್ತೆ ಸಭೆಗೆ ಬಂದಾಗ ಗಿಳಿ ತನ್ನ ಕತೆಯನ್ನು ಹೇಳಲು ತೊಡಗುತ್ತದೆ.

ಗಿಳಿ ಹೇಳಿದ ಕತೆ: ವಿಂಧ್ಯಾಟವಿಯಲ್ಲಿನ ದಂಡಕಾರಣ್ಯದಲ್ಲಿ ಆಗಸ್ತ್ಯಾಶ್ರಮವಿದೆ; ಅದರ ಹತ್ತಿರವೇ ಪಂಪಾಸರೋವರ; ಅದರ ದಡದಲ್ಲಿ ದೊಡ್ಡ ಬೂರುಗದ ಮರವೊಂದಿದೆ. ತುಂಬ ಎತ್ತರವಾಗಿ, ರೆಂಬೆಕೊಂಬೆಗಳಿಂದ ವಿಸ್ತಾರವಾಗಿದ್ದುದಲ್ಲದೆ ತನ್ನ ಅಸಂಖ್ಯ ಪೊಟರೆಗಳಿಂದಾಗಿ ಗಿಳಿಗಳ ಆವಾಸಸ್ಥಾನವೂ ಆಗಿತ್ತು ಆ ಮರ. ಅಂತಹ ಒಂದು ಪೊಟರೆಯಲ್ಲಿ ತನ್ನ ತಂದೆ ತನ್ನೊಡನೆ ವಾಸವಾಗಿದ್ದ; ತನ್ನ ಪ್ರಸವಕಾಲದಲ್ಲೇ ತಾಯಿ ತೀರಿಕೊಂಡಿದ್ದಳು. ತನ್ನ ರೆಕ್ಕೆಗಳಿನ್ನೂ ಬಲಿತಿರಲಿಲ್ಲ. ಹಾರುವ ಚೈತನ್ಯವಿರಲಿಲ್ಲ. ಹೀಗಾಗಿ ಮರಿಯನ್ನು ತಂದೆಯೇ ಮಮತೆಯಿಂದ ಸಲಹುತ್ತಿದ್ದ. ಒಂದು ದಿನ ಬೇಡರ ಗುಂಪೊಂದು ಮಹಾ ಶಬ್ದದಿಂದ ಆ ಪ್ರದೇಶವನ್ನು ಹೊಕ್ಕಿತು.

ಯುವಕರು ಅನೇಕ ಪ್ರಾಣಿಗಳನ್ನು ಬೇಟೆಯಾಡಿ ಅಲ್ಲಿಂದ ಮುಂದೆ ಸಾಗಿದರು; ಆದರೆ ಅವರಲ್ಲೊಬ್ಬ ತೀರ ಮುದಿಯಾಗಿದ್ದ ಬೇಡನಿಗೆ ಏನೂ ಸಿಗದೆ ಹೋಗಿತ್ತು. ಹೀಗಾಗಿ ಅಲ್ಲಿಯೇ ಉಳಿದು ನಿಧಾನವಾಗಿ ಮರ ಹತ್ತಿ ಪೊಟರೆಗಳಲ್ಲಿ ಎಲೆಗಳ ಕಾಯಿಗಳ ನಡುವೆ ಹುದುಗಿದ್ದ ಗಿಳಿಗಳನ್ನು ಹೊರತೆಗೆದು ಅವುಗಳ ಕತ್ತು ಹಿಚುಕಿ ಕೆಳಕ್ಕೆ ಬಿಸಾಡಿ, ತನ್ನ ಕೆಲಸ ಮುಗಿಯಿತೆನಿಸಿದಾಗ ಕೆಳಗಿಳಿದು ಅಲ್ಲಿ ಬಿದ್ದಿದ್ದ ಗಿಳಿಗಳನ್ನೆಲ್ಲ ಬಾಚಿಕೊಂಡು ಚೀಲದಲ್ಲಿ ತುಂಬಿಕೊಂಡು ಹೋದ. ಅವನು ತಾವಿದ್ದ ಪೊಟರೆಗೂ ಕೈಹಾಕಿದ್ದ, ತಂದೆಯ ಕತ್ತನ್ನು ತಿರುಚಿ ಕೆಳಗೆ ಬಿಸಾಡಿದ್ದ ತಾನು ತಂದೆಯ ರೆಕ್ಕೆಗಳಲ್ಲಿ ಮರೆಯಾಗಿ ಹುದುಗಿದ್ದ ಕಾರಣ ಮುದಿ ಬೇಡನಿಗೆ ತನ್ನ ಇರವು ತಿಳಿಯಲಿಲ್ಲ. ಹೀಗಾಗಿ ತಂದೆಯ ದೇಹದೊಡನೆ ತನ್ನನ್ನೂ ಕೆಳಕ್ಕೆ ಎಸೆದಾಗ ಬೀಳುವ ರಭಸಕ್ಕೆ ತಾನು ತಂದೆಯಿಂದ ಬೇರ್ಪಟ್ಟು ದೂರದಲ್ಲಿ ಬೀಳಬೇಕಾಯಿತು. ತೆವಳಿ ತೆವಳಿ ತಾನು ಮತ್ತಷ್ಟು ದೂರ ಹೋಗಿ ಬೇಡನಿಂದ ಪಾರಾದೆ. ಬಾಯಾರಿಕೆಯಿಂದ ತಲ್ಲಣಿಸುತ್ತಿದ್ದಾಗ ಮಧ್ಯಾಹ್ನದ ಹೊತ್ತಿಗೆ ಒಬ್ಬ ಮುನಿಕುಮಾರ (ಹಾರೀತ) ತನ್ನನ್ನು ಕಂಡು ಕರುಣೆಯಿಂದ ನೀರ್ದಾಣಕ್ಕೆ ಕರೆದೊಯ್ದು ಮೈತೊಳೆದು ನೀರು ಕುಡಿಸಿದಾಗ ತನಗೆ ಹೊಸಚೈತನ್ಯವುಂಟಾಯಿತು. ಅನಂತರ ತನ್ನನ್ನು ಆತ ತಮ್ಮ ತಂದೆಯಾದ ಜಾಬಾಲಿಯಿದ್ದ ಆಶ್ರಮಕ್ಕೆ ಕರೆದೊಯ್ದ. ತನ್ನನ್ನು ನೋಡಿದ ಕ್ಷಣವೇ ಜಾಬಾಲಿಯು ಗಂಭೀರವಾದ ಧ್ವನಿಯಿಂದ "ಇವನು ಹಿಂದಿನ ಪಾಪಫಲವನ್ನು ಅನುಭವಿಸುತ್ತಿದ್ದಾನೆ. ಮೋಹಕ್ಕೆ ಸಿಲುಕಿ ಈ ಕೆಳಜಾತಿಯಲ್ಲಿ ಹುಟ್ಟಿದ್ದಾನೆ" ಎಂದು ಹೇಳಿದಾಗ ಅಲ್ಲಿದ್ದವರೆಲ್ಲ ಗಿಳಿಯ ಕತೆ ಏನೆಂದು ಕುತೂಹಲಗೊಂಡರು. ಜಾಬಾಲಿ ಹೇಳತೊಡಗಿದ.

ಜಾಬಾಲಿ ಹೇಳಿದ ಕತೆ: ಅವಂತಿ ಎಂಬುದು ದೇಶ, ಉಜ್ಜಯಿನಿ ಅದರ ರಾಜಧಾನಿ, ತಾರಾಪೀಡನೆಂಬ ರಾಜ ಅದನ್ನಾಳುತ್ತಿದ್ದರೆ, ಶುಕನಾಸನೆಂಬ ಮಂತ್ರಿ ಅವನಿಗೆ ಆಪ್ತಸಚಿವನಾಗಿದ್ದ. ತಾರಾಪೀಡನ ಹೆಂಡತಿ ವಿಲಾಸವತಿಯಾದರೆ ಶುಕನಾಸನ ಪತ್ನಿ ಮನೋರಮೆ. ಅವರಿಬ್ಬರಿಗೂ ಕ್ರಮವಾಗಿ ಚಂದ್ರಾಪೀಡ ಮತ್ತು ವೈಶಂಪಾಯನ ಎಂಬ ಮಕ್ಕಳಾದರು, ಜೊತೆಗೆ ಬೆಳೆಬೆಳೆಯುತ್ತ ಇಬ್ಬರೂ ಒಟ್ಟಿಗೇ ವಿದ್ಯೆ ಕಲಿತರು, ಗಾಢಸ್ನೇಹಿತರಾದರು. ಇಬ್ಬರಿಗೂ ಹದಿನಾರು ತುಂಬಿತು. ಚಂದ್ರಾಪೀಡನಿಗೆ ರಾಜ ಯೌವರಾಜ್ಯಾಭಿಷೇಕವನ್ನು ಮಾಡಿ ಇಂದ್ರಾಯುಧ ಎಂಬ ದಿವ್ಯಾಶ್ವವನ್ನು ರಾಜನೂ, ಪತ್ರಲೇಖೆ ಎಂಬ ಸೇವಕಿಯನ್ನು ರಾಣಿಯೂ ಬಳುವಳಿಯಾಗಿ ಕೊಟ್ಟರು. ಅವಳು ರಾಜಕುಮಾರನ ತಾಂಬೂಲಕರಂಕವಾಹಿನಿಯಾದಳು. ಯುವರಾಜ ದಿಗ್ವಿಜಯ ಯಾತ್ರೆ ಕೈಗೊಂಡ. ಆಪ್ತ ಗೆಳೆಯ ವೈಶಂಪಾಯನ ಅವನ ಜೊತೆಗೆ ಹೊರಟ.

ಯಾತ್ರೆಯ ಕೊನೆಯ ದಿನಗಳು; ಪಾಳೆಯ ಕೈಲಾಸಪರ್ವತದ ಬಳಿ ಬೀಡು ಬಿಟ್ಟಿತು. ಒಂದು ಬೆಳಗ್ಗೆ ಚಂದ್ರಾಪೀಡ ಒಬ್ಬನೇ ತನ್ನ ಕುದುರೆಯೇರಿ ವಿಹಾರಕ್ಕೆ ಹೊರಟ, ಅಲ್ಲಿ ವಿಲಕ್ಷಣವಾದ ಕಿನ್ನರ ಮಿಥುನವೊಂದು ಕಣ್ಣಿಗೆ ಬಿತ್ತು. ಅದನ್ನು ಹಿಡಿಯಬೇಕೆಂದು ಚಂದ್ರಾಪೀಡ ಕುದುರೆಯನ್ನು ಜೋರಾಗಿ ಆಯೆಡೆಗೆ ಓಡಿಸಿದ. ಆದರೆ ಸ್ವಲ್ಪ ಕಾಲದಲ್ಲಿಯೇ ಅದು ಪರ್ವತಪಙ್ತೆಯಲ್ಲಿ ಕಣ್ಮರೆಯಾಯಿತು. ಆ ಹೊತ್ತಿಗೆ

ಯುವರಾಜ ದಣಿದಿದ್ದ; ಕುದುರೆಯೂ ಬಳಲಿತ್ತು. ದಣಿವಾರಿಸಿಕೊಂಡು ಹೋಗೋಣವೆಂದು ನೀರ್ದಾಣಕ್ಕಾಗಿ ಹುಡುಕಿದ. ಅನತಿ ದೂರದಲ್ಲಿ ಅಚ್ಛೋದ ಎಂಬ ಸರೋವರ ಕಾಣಿಸಿತು. ಅಲ್ಲಿಗೆ ಹೋಗಿ ಕುದುರೆಗೆ ನೀರು ಕುಡಿಸಿ ಹುಲ್ಲು ಮೇಯಲು ಬಿಟ್ಟು, ತಾನೂ ನೀರು ಕುಡಿದು ವಿಶ್ರಮಿಸಿಕೊಳ್ಳಲು ಅನುವಾದ. ಆ ಕಡುಮೌನದ ಕಾಡಿನಲ್ಲಿ ಇಂಪಾದ ಗಾನವೊಂದು ಕೇಳಿಬಂತು. ಕುತೂಹಲದಿಂದ ಮೇಲೆದ್ದ ಚಂದ್ರಾಪೀಡ ಆ ದನಿಯನ್ನು ಹಿಂಬಾಲಿಸಿ ಹೊರಟ. ಕೊಂಚ ದೂರ ಹೋದ ಮೇಲೆ ಅವನಿಗೊಂದು ಸಿದ್ಧಾಯತನ ಕಾಣಿಸಿತು. ಅಲ್ಲೊಂದು ಚತುರ್ಮುಖ ಲಿಂಗ, ಮುಂದೆ ಕಣ್ಮುಚ್ಚಿ ವೀಣಾನಾದದೊಡನೆ ತನ್ನ ಇಂಪಾದ ಕಂಠ ಬೆರೆಸಿ ನವಯೌವನಭರಿತೆಯಾದ ಯುವತಿ ಹಾಡುತ್ತಿದ್ದಳು. ಅವಳು ಉಟ್ಟಿದುದು ಅಚ್ಚ ಬಿಳಿಯ ಪತ್ತಲ, ಕೊರಳಲ್ಲಿ ಜಪಸರ. ಯುವರಾಜ ಆಕೆ ಹಾಡುವುದನ್ನು ನಿಲ್ಲಿಸುವ ತನಕ ಕಾದ. ಆಕೆ ಹಾಡು ಮುಗಿಸಿ ಲಿಂಗಕ್ಕೆ ಪ್ರದಕ್ಷಿಣೆ ಬರುವಾಗ ಚಂದ್ರಾಪೀಡ ಅವಳ ಕಣ್ಣಿಗೆ ಬಿದ್ದ. ಅವನನ್ನು ಸ್ವಾಗತಿಸಿ ಆತ್ಮೀಯತೆಯಿಂದ ಅತಿಥಿಸತ್ಕಾರಮಾಡಿದಳು. ಮೊದಲು ಅಳುಕಿನಿಂದ ಕೂಡಿದ್ದ ಚಂದ್ರಾಪೀಡ ಅವಳ ಆದರವನ್ನು ಕಂಡು ಧೈರ್ಯಗೊಂಡು ಆ ಕಿರುವಯಸ್ಸಿಗೇ ತಾಪಸವೃತ್ತಿಯನ್ನು ಕೈಗೊಂಡುದೇಕೆಂದು ಕುತೂಹಲದಿಂದ ಕೇಳಿದ. ಅವಳ ಕಣ್ಣಿನಲ್ಲಿ ನೀರು ತುಂಬಿತು, ದನಿ ಗದ್ಗದವಾಯಿತು. ಕೊನೆಗೆ ಸಾವರಿಸಿಕೊಂಡು ತನ್ನ ಹೆಸರು ಮಹಾಶ್ವೇತೆಯೆಂದು ಹೇಳಿ ತನ್ನ ಕತೆಯನ್ನು ಹೇಳತೊಡಗಿದಳು.

ಮಹಾಶ್ವೇತೆ ಹೇಳಿದ ಕತೆ : ತಾನು ಹಂಸ ಮತ್ತು ಗೌರಿ ಎಂಬ ಹೆಸರಿನ ಅಪ್ಸರದಂಪತಿಯ ಒಬ್ಬಳೇ ಮಗಳು. ಬಹುಕಾಲದ ನಂತರ ಹುಟ್ಟಿದ ಮಗಳೆಂಬ ಕಾರಣದಿಂದ ತಾಯ್ತಂದೆಯರ ಪ್ರೀತಿ ಕಡಲಾಗಿತ್ತು. ತನಗೆ ಯೌನ ಬಂತು. ಒಮ್ಮೆ ತಾನು ತಾಯಿಯೊಡನೆ ಸ್ನಾನಮಾಡಿ ಬರಲು ಅಚ್ಛೋದ ಸರೋವರಕ್ಕೆ ಬಂದಳು. ದಾರಿಯಲ್ಲೊಬ್ಬ ಸುಂದರ ಮುನಿಕುಮಾರನ ಭೇಟಿಯಾಯಿತು; ಕಂಡ ಕ್ಷಣವೇ ಅವನ ಬಗ್ಗೆ ಗಾಢಪ್ರೀತಿಯುಂಟಾಯಿತು. ಋಷಿಕುಮಾರ ಅಲ್ಲವೇ, ಅವನಿಗೆ ನಮಸ್ಕಾರ ಮಾಡುವ ನೆವದಲ್ಲಿ ಅವನ ಪಾದಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡಳು. ಹೊರಗೆ ನಮಸ್ಕಾರ ಒಳಗೆ ಕಾಮವಿಕಾರ! ಈ ಸನ್ನಿವೇಶದಿಂದಾಗಿ ಅವನಿಗೂ ಇವಳ ಬಗ್ಗೆ ಅನುರಾಗವುಂಟಾಗಿ ಆತನೂ ಮೋಹಪರವಶನಾದ. ಪಕ್ಕದಲ್ಲೇ ಇದ್ದ ಅವನ ಗೆಳೆಯನನ್ನು (ಕಪಿಂಜಲ) ಈ ಮುನಿಕುಮಾರನ ವಿಷಯ ಕೇಳಿದಾಗ ಅವನು ಶ್ವೇತಕೇತುವಿನ ಮಗ ಪುಂಡರೀಕನೆಂಬ ವಿಷಯ ತಿಳಿಯಿತು. ಮಾತಾಡುವ ನೆವದಿಂದ ಅವನ ಕಿವಿಯಲ್ಲಿದ್ದ ಸುಂದರವಾದ ಕುಸುಮಮಂಜರಿಯ ವಿಷಯ ಕೇಳಿದಾಗ ಪುಂಡರೀಕ ಅದನ್ನು ತೆಗೆದು ಮಹಾಶ್ವೇತೆಯ ಕಿವಿಗೆ ತೊಡಿಸಲು ಹೋದ. ಕನ್ನೆಯ ಕೆನ್ನೆಯ ಸ್ಪರ್ಶಸುಖದಿಂದ ಅವನ ಕೈ ನಡುಗಿ ಕೈಲಿದ್ದ ಜಪಸರ ಜಾರಿ ಬಿತ್ತು. ಅದನ್ನು ತಾನೆತ್ತಿಕೊಂಡು ಕೊರಳಲ್ಲಿ ಧರಿಸಿ ಮಹಾಶ್ವೇತೆ ಸುಖಿಸಿದಳು. ಇದನೆಲ್ಲ ಕಂಡ ಕಪಿಂಜಲನು ತನ್ನ ಗೆಳೆಯನನ್ನು ಗದರಿಕೊಂಡ. ಆಗ ಮುನಿಕುಮಾರ ಕೋಪಗೊಂಡಂತೆ ಮಹಾಶ್ವೇತೆಯ ಬಳಿ ಹೋಗಿ ತನ್ನ ಜಪಸರವನ್ನು ವಾಪಸು ಕೊಡಲು ಕೇಳಿದ; ಗಾಬರಿಯಿಂದ ಮಹಾಶ್ವೇತೆ ಜಪಸರಕ್ಕೆ

ಬದಲಾಗಿ ತಾನು ಹಾಕಿಕೊಂಡಿದ್ದ ಹಾರವನ್ನು ತೆಗೆದುಕೊಟ್ಟುಬಿಟ್ಟಳು. ಅನ್ಯಚಿತ್ತನಾಗಿದ್ದ ಪುಂಡರೀಕ ಅದನ್ನೇ ಜಪಸರವೆಂದು ಭಾವಿಸಿ ತೆಗೆದುಕೊಂಡ.

ತಾನು ವಾಪಸ್ಸು ಮನೆಗೇನೋ ಬಂದಳು; ಆದರೆ ಮನಸ್ಸು ಮಾತ್ರ ಮುನಿಕುಮಾರನಲ್ಲಿಯೇ ಉಳಿದುಬಿಟ್ಟಿತ್ತು. ಅವನು ಹೋದ ದೆಸೆಯನ್ನೇ ತಾನು ಮೂಕವಾಗಿ ನೋಡುತ್ತ ಕೂತಿದ್ದಾಗ, ಸ್ನಾನಕ್ಕಾಗಿ ಹಿಂದೆ ಉಳಿದಿದ್ದ ಮಕರಿಕೆ ಎಂಬ ಸೇವಕಿ ಮುನಿಕುಮಾರನು ಕಳಿಸಿದ್ದ ಪ್ರೇಮಪತ್ರವನ್ನು ತಂದುಕೊಟ್ಟಳು. ಸೊಕ್ಕಿದವಳಿಗೆ ಕಳ್ಳು ಕುಡಿಸಿದಂತಾಯಿತು. ಹೇಗೋ ಸಂಜೆಯವರೆಗೂ ಕಾಲ ತಳ್ಳಿದಳು. ಆ ಹೊತ್ತಿಗೆ ಪುಂಡರೀಕನ ಗೆಳೆಯ ಕಪಿಂಜಲ ಗಾಬರಿಯಿಂದ ಬಂದು ಗೆಳೆಯನ ಮದನಾವಸ್ಥೆಯನ್ನು ಮನಕರಗುವಂತೆ ವರ್ಣಿಸಿ ಅವನನ್ನುಳಿಸಲೋಸುಗ ಬೇಗ ಬರಬೇಕೆಂದು ಕೇಳಿಕೊಂಡು, ಯಾರಿಗೂ ಕಾಣಿಸದಂತೆ ಹೊರಟು ಹೋದ. ಅಷ್ಟು ಹೊತ್ತಿಗೆ ತಾಯಿ ಬಂದಳು. ಆಕೆಯನ್ನು ಹೇಗೋ ಸಾಗಹಾಕಿದ ಮಹಾಶ್ವೇತೆ ತರಳಿಕೆಯೊಡನೆ ಮುನಿಕುಮಾರನಿದ್ದ ಜಾಗಕ್ಕೆ ಹೊರಟಳು. ದಾರಿಯಲ್ಲಿ ಅಪಶಕುನಗಳ ಸರಮಾಲೆ, ಅವಳಿಗೆ ದಿಗಿಲಾಯಿತು. ಗಾಬರಿಯಿಂದ ಹೋಗಿ ನೋಡಲು ಪುರುಷನೊಬ್ಬನ ಅಳಲು ಕೇಳಿಬಂತು, ಅವನು ಕಪಿಂಜಲ; ತನ್ನ ಗೆಳೆಯ ಗತಜೀವನಾಗಿದ್ದರಿಂದ ರೋದಿಸತೊಡಗಿದ್ದ. ಮೊದಲು ಕಣ್ಣ ಬೇಟದಲ್ಲಿಯೇ ತಾನು ವರಿಸಿಬಿಟ್ಟಿದ್ದ ಪತಿ ಅವನು ಎಂಬ ಭಾವನೆ ಅವಳದು; ಹೀಗಾಗಿ ಮಹಾಶ್ವೇತೆ ಸಹಗಮನಕ್ಕಾಗಿ ಚಿತೆಯೇರ್ಪಡಿಸಲು ತರಳಿಕೆಗೆ ಸೂಚಿಸಿದಳು. ಆಗ ಒಂದು ಅಚ್ಚರಿ! “ಮಗಳೆ ಸಾಯಬೇಡ. ನೀನು ಮುಂದೆ ಇವನೊಡೆ ಕೂಡುವೆ” ಎಂಬ ಅಶರೀರವಾಣಿಯಾಯಿತು. ಅಷ್ಟರಲ್ಲಿ ಯಾವುದೋ ದಿವ್ಯಶರೀರವೊಂದು ಪುಂಡರೀಕನ ದೇಹವನ್ನು ಎತ್ತಿಕೊಂಡು ಆಕಾಶಕ್ಕೆ ಹಾರಿತು. ಅದನ್ನು ಕಂಡ ಕಪಿಂಜಲನು “ನನ್ನ ಗೆಳೆಯನನ್ನು ಎತ್ತಿಕೊಂಡು ಎಲ್ಲಿ ಹೋಗುತ್ತೀ?” ಎಂದು ಕೋಪದಿಂದ ಕಿರುಚಿ ಆಕಾಶಕ್ಕೆ ನೆಗೆದು ಅವನೂ ಕಣ್ಮರೆಯಾಗಿಬಿಟ್ಟ. ತರಳಿಕೆ ತನಗೆ ಸಮಾಧಾನ ಹೇಳಿ, ಸ್ನಾನ ಮಾಡಿಸಿದಳು. ಪುಂಡರೀಕನನ್ನು ಮತ್ತೆ ಕೂಡುವ ಆಸೆಯಿಂದ ನಾರುಮಡಿ–ಜಪಸರ ಧರಿಸಿ ತಪಶ್ಚರಣೆಯಲ್ಲಿರುವುದಾಗಿ ಮಹಾಶ್ವೇತೆ ತಿಳಿಸಿದಳು. ಇದನ್ನೆಲ್ಲ ಕೇಳಿದ ಚಂದ್ರಾಪೀಡನು ಹಾಗಾದರೆ ತರಳಿಕೆ ಎಲ್ಲೆಂದು ಪ್ರಶ್ನಿಸಿದಾಗ ಮಹಾಶ್ವೇತೆ ಹೀಗೆಂದಳು: “ನನ್ನ ಪ್ರಿಯ ಗೆಳತಿ ಕಾದಂಬರಿ; ಗಂಧರ್ವ ರಾಜ ಚಿತ್ರರಥ ಮತ್ತವನ ಮನದನ್ನೆ ಮದಿರಾದೇವಿಯ ಏಕೈಕ ಪುತ್ರಿ. ನಾನು ಪುಂಡರೀಕನನ್ನು ಸೇರುವವರೆಗೂ ತಾನು ಮದುವೆಯಾಗುವುದಿಲ್ಲವೆಂದು ಹಟಹಿಡಿದಿದ್ದಾಳಂತೆ ಅವಳ ತಾಯ್ತಂದೆಯರು ಇದರಿಂದ ದುಃಖಿತರಾಗಿದ್ದಾರೆ. ಅವಳನ್ನು ಮದುವೆಯಾಗುವಂತೆ ಓಲೈಸಲೋಸುಗ ನನ್ನ ಪರವಾಗಿ ತರಳಿಕೆಯನ್ನು ಕಳಿಸಿದ್ದೇನೆ. ಅವಳು ಹೋದ ಕೊಂಚ ಹೊತ್ತಿಗೇ ನೀವು ಬಂದಿರಿ” ಎಂದಳು.

ಜಾಬಾಲಿ ಮುಂದುವರಿಸಿದ ಕತೆ : ಮಾರನೆಯ ಬೆಳಗ್ಗೆ ತರಳಿಕೆ ಹಿಂದಿರುಗಿ ಬಂದಳು. ಕಾದಂಬರಿಯ ಹಟ ತೀರದೆಂದು ತಿಳಿಸಿದಾಗ ಮಹಾಶ್ವೇತೆ ತಾನೇ ಕಾದಂಬರಿಯಿದ್ದ ಹೇಮಕೂಟಕ್ಕೆ ಹೋಗಲು ನಿರ್ಧರಿಸಿ, ಜೊತೆಯಲ್ಲಿ ಬಂದು

ಕಾದಂಬರಿಗೆ ಬುದ್ಧಿ ಹೇಳಬೇಕೆಂದು ಚಂದ್ರಾಪೀಡನನ್ನು ಪ್ರಾರ್ಥಿಸಿದಳು. ಯುವರಾಜ ಅದಕ್ಕೆ ಒಪ್ಪಿದ. ತನ್ನ ಗೆಳತಿಯ ಬಳಿ ಕರೆದೊಯ್ದು ಮಹಾಶ್ವೇತೆಯು ಚಂದ್ರಾಪೀಡನನ್ನು ಅವಳಿಗೆ ಪರಿಚಯಿಸಿದಳು. ಕಾದಂಬರಿ-ಚಂದ್ರಾಪೀಡರು ಕಂಡ ಕ್ಷಣದಿಂದ ಪರಸ್ಪರರಲ್ಲಿ ಅನುರಕ್ತರಾದರು. ಮಹಾಶ್ವೇತೆಯನ್ನು ಕಾಣಲು ಚಿತ್ರರಥ ಬಂದಾಗ ಪ್ರೇಮಿಗಳ ಮೊದಲ ಭೇಟಿ ಮುಕ್ತಾಯವಾಯಿತು. ಮಹಾಶ್ವೇತೆಯ ಮದುವೆಯಾಗುವವರೆಗೂ ತಾನು ಕನ್ಯೆಯಾಗಿಯೇ ಇರುತ್ತೇನೆಂಬ ಹಟತೊಟ್ಟ ತನ್ನಲ್ಲಿ ಈ ಮೋಹ ತುಂಬಿಕೊಂಡಿತಲ್ಲ ಎಂದು ಕಾದಂಬರಿ ಮುಜುಗರಪಟ್ಟಳು. ರಾತ್ರಿ ಚಂದ್ರಾಪೀಡ ಕಾದಂಬರಿಯ ಧ್ಯಾನದಲ್ಲಿಯೇ ಇದ್ದಾಗ, ಕಾದಂಬರಿಯು ತನ್ನ ಪ್ರೇಮಕಾಣಿಕೆಯಾಗಿ ಕಳಿಸಿದ್ದ 'ಶೇಷ' ಎಂಬ ಮುತ್ತಿನ ಹಾರವನ್ನು ಮದನಲೇಖೆಯೆಂಬ ಅವಳ ಸೇವಕಿಯಿಂದ ಸ್ವೀಕರಿಸಿದ. ಬೆಳುದಿಂಗಳು ಎಲ್ಲೆಡೆ ಪಸರಿಸಿದ್ದಾಗ ಕಾದಂಬರಿ ಮಿತಪರಿವಾರದೊಡನೆ ಬಂದು ಸ್ವಲ್ಪ ಕಾಲ ಮಾತಾಡಿ ಹಿಂದಿರುಗಿದಳು. ಈ ಆಗುಹೋಗುಗಳು ಚಂದ್ರಾಪೀಡನಲ್ಲಿ ವಿಸ್ಮಯವುಂಟುಮಾಡಿತು.

ಮಾರನೆಯ ಬೆಳಗ್ಗೆ ಎದ್ದ ಚಂದ್ರಾಪೀಡ ಪ್ರಾತರ್ವಿಧಿಗಳನ್ನು ಪೂರೈಸಿ ಮಹಾಶ್ವೇತೆ-ಕಾದಂಬರಿಯರ ಅಪ್ಪಣೆ ಪಡೆದು, ಬಹುಕಾಲ ಬಿಟ್ಟು ಬಂದಿದ್ದ ತನ್ನ ಪರಿವಾರವನ್ನು ಸೇರಲು ಅಚ್ಛೋದ ಸರೋವರದ ಕಡೆಗೆ ಹೊರಟ. ಆ ಹೊತ್ತಿಗೆ ಅವನನ್ನು ಹುಡುಕಿಕೊಂಡು ಅವನ ಪರಿವಾರವೂ ಅಲ್ಲಿಗೆ ಬಂದಿತ್ತು. ಮಾರನೆಯ ಬೆಳಗು ಹರಿಯುವ ಹೊತ್ತಿಗೆ ಕೇಯೂರಕನೆಂಬ ಸೇವಕನು ಬಂದು ಚಂದ್ರಾಪೀಡ ಹೇಮಕೂಟದಲ್ಲಿಯೇ ಮರೆತುಬಂದಿದ್ದ ಶೇಷವನ್ನೂ ಇತರ ಕಾಣಿಕೆಗಳನ್ನೂ ಕೊಟ್ಟು, ಮರಳಿ ಬರುವಂತೆ ಆಕೆ ಚಂದ್ರಾಪೀಡನನ್ನು ಬಿನ್ನೈಸಿಕೊಂಡುದನ್ನು ಕೇಳಿ ಮತ್ತೆ ಪತ್ರಲೇಖೆಯೊಡನೆ ಹೇಮಕೂಟಕ್ಕೆ ಹೊರಟ. ಅಲ್ಲಿ ಸೇರಿದ ಬಳಿಕ ಕಾದಂಬರಿಯೊಡನೆ ಸ್ವಲ್ಪ ಹೊತ್ತು ಪ್ರಣಯಾಲಾಪದಲ್ಲಿ ತೊಡಗಿದ್ದು, ಅವಳ ಇಚ್ಛೆಯಂತೆ ಪತ್ರಲೇಖೆಯನ್ನು ಅಲ್ಲಿಯೇ ಬಿಟ್ಟು ಚಂದ್ರಾಪೀಡ ತನ್ನ ಪಾಳೆಯಕ್ಕೆ ಹಿಂದಿರುಗಿದ. ಆ ಹೊತ್ತಿಗೆ ದೂತನ ಮೂಲಕ ಉಜ್ಜಯಿನಿಗೆ ವಾಪಸಾಗುವಂತೆ ತಾಯ್ತಂದೆಯರು ಕಳಿಸಿದ್ದ ಸಂದೇಶವನ್ನು ಕೇಳಿದ ಚಂದ್ರಾಪೀಡ ಪತ್ರಲೇಖೆಯನ್ನು ಕರೆತರಲು ಮೇಘನಾದನೆಂಬ ಸೇವಕನಿಗೆ ಹೇಳಿ, ಪರಿವಾರವನ್ನು ನಿಧಾನವಾಗಿ ಕರೆತರುವಂತೆ ವೈಶಂಪಾಯನನಿಗೆ ತಿಳಿಸಿ ತಾನು ರಾಜಧಾನಿಗೆ ಮರಳಿದ. ಆದರೆ ಅವನ ಮನಸ್ಸು ಕಾದಂಬರಿಯ ಹಂಬಲದಿಂದ ವಿಹ್ವಲವಾಗಿತ್ತು. ಕೆಲವು ದಿನಗಳ ಬಳಿಕ ಪತ್ರಲೇಖೆ ವಾಪಸಾದಳು; ಕಾದಂಬರಿಯ ತೀವ್ರ ವಿರಹವೇದನೆಯನ್ನು ವರ್ಣಿಸಿದಳು. ಮರುದಿನ ಬೆಳಗ್ಗೆ ಕೇಯೂರಕ ಬಂದು ಅವನು ಮರೆತು ಬಂದಿದ್ದ ಶೇಷವನ್ನೂ ಕಾದಂಬರಿ ಕಳಿಸಿದ್ದ ಇತರ ಕಾಣಿಕೆಗಳನ್ನೂ ತಂದು ಚಂದ್ರಾಪೀಡನಿಗೆ ಅರ್ಪಿಸಿದ. ಆತನೂ ಕಾದಂಬರಿಯ ಪರಿತಾಪವನ್ನು ವರ್ಣಿಸಿದ. ಅವನ ಉದ್ವೇಗ ಇಮ್ಮಡಿಗೊಂಡಿತು. (ಇಲ್ಲಿಗೆ ಮೂಲದಲ್ಲಿ ಬಾಣಭಟ್ಟ ರಚಿಸಿದ್ದ ಭಾಗವು ಮುಕ್ತಾಯಗೊಳ್ಳುತ್ತದೆ. ಮುಂದಿನ ಕಥನ ಬಾಣನ ಮಗ ಭೂಷಣನ ರಚನೆ). ಅವಳನ್ನು ನೋಡಲು ತಾನೇ ಬರುವುದಾಗಿ ಹೇಳಿ ಪತ್ರಲೇಖೆ ಮತ್ತು ಕೇಯೂರಕರಿಬ್ಬರನ್ನೂ ಕಾದಂಬರಿಯ ಬಳಿ ಕಳಿಸಿದ.

ದಿನಗಳು ಉರುಳಿದವು; ಆದರೆ ವೈಶಂಪಾಯನನ ಸುಳಿವೂ ಇಲ್ಲ, ಸೈನ್ಯಪರಿವಾರವೂ ವಾಪಸಾಗಲಿಲ್ಲ! ಚಂದ್ರಾಪೀಡನು ಕಳವಳಪಡುತ್ತಿರುವಾಗ ಒಂದು ದಿನ ಹಿಂತಿರುಗಿ ಬಂದ ಸೇನಾಪರಿವಾರದವರು ವೈಶಂಪಾಯನನು ವಿಚಿತ್ರ ಸ್ಥಿತಿಯಲ್ಲಿದ್ದಾನೆಂದೂ ಅಲ್ಲಿಂದ ಹಿಂತಿರುಗಲು ಇಷ್ಟಪಡುತ್ತಿಲ್ಲವೆಂದೂ ತಿಳಿಸಿದರು. ವೈಶಂಪಾಯನನ್ನು ಕರೆತರಲು ತಾನೇ ಹೋಗಲು ನಿಶ್ಚಯಿಸಿ ತಾಯ್ತಂದೆಯರ ಅನುಮತಿ ಪಡೆದು ಕೈಲಾಸ ಪರ್ವತದ ಕಡೆಗೆ ಹೊರಟ. ಎಲ್ಲಿ ಹುಡುಕಾಡಿದರೂ ಗೆಳೆಯನ ಸುಳಿವೇ ಇಲ್ಲ! ಕೊನೆಗೆ ಚಂದ್ರಾಯುಧವನ್ನೇರಿದ ಚಂದ್ರಾಪೀಡನು ಮಹಾಶ್ವೇತೆಯ ಆಶ್ರಮಕ್ಕೆ ಬಂದ. ಅಲ್ಲವಳು ಕಣ್ಣೀರು ಸುರಿಸುತ್ತ ಕೂತಿದ್ದಳು. ಕಾದಂಬರಿಗೇನೋ ಆಪತ್ತು ಒದಗಿದೆ ಎಂದು ಅವನು ಭಾವಿಸಿದ. ಆದರೆ ಅವಳು ತನ್ನ ಕಣ್ಣೀರಿಗೆ ಕೊಟ್ಟ ಕಾರಣವೇ ಬೇರೆ: ಚಂದ್ರಾಪೀಡ ಉಜ್ಜಯಿನಿಗೆ ಹೋದ ಮೇಲೆ ತಾನು ಇಲ್ಲಿ ತಪಶ್ಚರಣಕ್ಕಾಗಿ ಆಗಮಿಸಿದಳೆಂದೂ, ಒಂದು ದಿನ ಚಂದ್ರಾಪೀಡನ ವಯಸ್ಸಿನ ಬ್ರಾಹ್ಮಣ ಯುವಕನೊಬ್ಬನು ಬಂದು ತನ್ನನ್ನು ಕಣ್ಣುಗಳಿಂದಲೇ ಹೀರುವಂತೆ ನೋಡುತ್ತ ತನ್ನಂತಹ ಸುಂದರ ಯುವತಿಯು ತಪಸ್ಸಿಗೆ ತೊಡಗುವುದೇ ಎಂದು ಕೇಳಿದ, ಪುಂಡರೀಕನ ವಿರಹದಿಂದ ಮನನೊಂದಿದ್ದ ತಾನು ಇದರಿಂದ ಕುಪಿತಳಾಗಿ ಅವನನ್ನು ತನ್ನ ಬಳಿ ಸುಳಿಯಲು ಅವಕಾಶ ನೀಡದಂತೆ ತಡೆ ಎಂದು ತರಳಿಕೆಗೆ ಹೇಳಿ ತಾನೆ ಬೇರೆಡೆಗೆ ಹೋದೆ. ಆದರೆ ತರಳಿಕೆಯಿಂದ ತಪ್ಪಿಸಿಕೊಂಡು ಅಲ್ಲಿಗೂ ಅವನು ಬಂದುದಲ್ಲದೆ ಪದೇ ಪದೇ ಚಪಲಮಾತುಗಳನ್ನಾಡುತ್ತ ತನ್ನ ಹಿಂದೆಯೇ ಸುಳಿಯುತ್ತಿದ್ದ. ಈ ಯುವಕನ ಕಾಟವನ್ನು ತಾಳಲಾರದೆ, ಗಿಳಿಯಂತೆ ಗಳಹುತ್ತಿದ್ದ ಅವನು ಗಿಳಿಯಾಗಿಯೇ ಹುಟ್ಟಲಿ ಎಂದು ಶಪಿಸಲು, ಅವನು ಕೂಡಲೇ ನಿಶ್ಚೇಷ್ಟಿತನಾಗಿ ಕೆಳಗೆ ಬಿದ್ದ. ಆನಂತರ ಅವನು ಚಂದ್ರಾಪೀಡನ ಗೆಳೆಯ ವೈಶಂಪಾಯನನೆಂಬ ವಿಷಯ ಪರಿಜನರಿಂದ ತಿಳಿಯಿತು ಎಂದಳು. ತನ್ನ ಗೆಳೆಯನ ವಿಷಯ ಕೇಳಿದ ಕೂಡಲೇ ಚಂದ್ರಾಪೀಡ ಎದೆಯೊಡೆದು ಆಘಾತದಿಂದ ಕೆಳಕ್ಕೆ ಕುಸಿದ. ಇದನ್ನು ಕಂಡು ಮಹಾಶ್ವೇತೆ ಮೂರ್ಛೆಹೋದಳು. ತರಳಿಕೆ ರೋದಿಸತೊಡಗಿದಳು.

ಚಂದ್ರಾಪೀಡನು ಮಹಾಶ್ವೇತೆಯ ಆಶ್ರಮಕ್ಕೆ ಬಂದ ವಿಷಯವನ್ನು ಕೇಳಿದ ಕಾದಂಬರಿ ಹಾಗೂ ಪತ್ರಲೇಖೆಯರೂ ಅಲ್ಲಿಗೆ ಬಂದವರು ನಡೆದಿರುವ ಘಟನೆಯಿಂದ ತಾವೂ ಮೂರ್ಛೆಗೊಂಡು ಬಿದ್ದರು. ಕೊಂಚ ಕಾಲದ ಬಳಿಕ ಕಾದಂಬರಿ ಎಚ್ಚೆತ್ತ ಮೇಲೆ ಪ್ರಾಣತ್ಯಾಗಕ್ಕೆ ಸಿದ್ಧಳಾದಳು. ಅಷ್ಟರಲ್ಲಿ ಆಗಸದಲ್ಲಿ ಚಂದ್ರಕಿರಣಗಳಿಂದ ಕೂಡಿದ ಪ್ರಭಾಪುಂಜವೊಂದು ಮೂಡಿ, ಅದರಿಂದ "ಪುಡರೀಕನ ದೇಹವೂ ಮಹಾಶ್ವೇತೆಯ ಸಮಾಗಮಕ್ಕಾಗಿ ಇನ್ನೂ ಬೆಳಗುತ್ತಿದೆ; ಹಾಗೆಯೇ ಈ ಚಂದ್ರಾಪೀಡನ ದೇಹವೂ ನಿತ್ಯವಾದದ್ದು, ಕೆಲಕಾಲಾನಂತರ ಆತನು ಕಾದಂಬರಿಯೊಡನೆ ಸೇರುತ್ತಾನೆ. ಹೀಗಾಗಿ ಅವನ ಈ ದೇಹವನ್ನು ಜೋಪಾನವಾಗಿ ಕಾಯಬೇಕು" ಎಂಬ ದಿವ್ಯಧ್ವನಿ ಕೇಳಿಸಿತು. ಸ್ವಲ್ಪ ಹೊತ್ತಿನ ಬಳಿಕ ಪತ್ರಲೇಖೆಯೂ ಮೂರ್ಛೆಯಿಂದ ಎದ್ದಳು. ತಕ್ಷಣವೇ ಚಂದ್ರಾಯುಧದ ಬಳಿ ಹೋಗಿ ಅದರೊಡನೆ ನಡೆದು ಅಚ್ಛೋದ ಸರೋವರದಲ್ಲಿ

ಹಾರಿಕೊಂಡಳು. ಈ ಆಶ್ಚರ್ಯವೆಲ್ಲ ಆದುದನ್ನು ಕಂಡು ಸಾವರಿಸಿಕೊಳ್ಳುವಷ್ಟರಲ್ಲಿ ಸರೋವರದಿಂದ ಕಪಿಂಜಲನು ಎದ್ದು ಬಂದು ಮಹಾಶ್ವೇತೆಗೆ ಹೀಗೆಂದು ಹೇಳಿದ: "ಪುಂಡರೀಕನು ವಿರಹಾಧಿಕ್ಯದಿಂದ ಪ್ರಾಣಸಂಕಟದಲ್ಲಿದ್ದಾಗ ಹೆಮ್ಮೆಯಿಂದ ನಗುತ್ತಿದ್ದಂತೆ ಕಾಣಿಸಿದ ಚಂದ್ರನಿಗೆ ಅವನು 'ನೀನು ಎರಡು ಸಲ ಮನುಷ್ಯನಾಗಿ ಹುಟ್ಟು' ಎಂದು ಶಪಿಸಿದನಂತೆ; ಅದರಿಂದ ಕೋಪಗೊಂಡ ಚಂದ್ರನು 'ನೀನೂ ನನ್ನೊಡನೆ ಹುಟ್ಟಿ ಅದರಲ್ಲಿ ಭಾಗಿಯಾಗು' ಎಂದು ಮರುಶಾಪವಿತ್ತು ಪುಂಡರೀಕನ ದೇಹವನ್ನು ತೆಗೆದುಕೊಂಡು ಹೋಗಿ ಚಂದ್ರಲೋಕದಲ್ಲಿರಿಸಿ ಕಾಪಾಡುತ್ತಿದ್ದಾನೆ. ಶ್ವೇತಕೇತುವಿನ ಬಳಿ ಹೋಗಿ ಆಯುಷ್ಕಾಮದಾನಯಾಗಗಳನ್ನು ಮಾಡಲು ಚಂದ್ರ ತನ್ನನ್ನು ಕಳಿಸಿದ. ಆತುರದಿಂದ ಬರುತ್ತಿರುವಾಗ ತಿಳಿಯದೆ ತಾನು ವೈಮಾನಿಕನೊಬ್ಬನನ್ನು ದಾಟಿಬಿಟ್ಟೆ; ಅದರಿಂದ ಕುಪಿತನಾದ 'ಅವನು ನೀನು ಕುದುರೆಯ ಜನ್ಮವನ್ನು ತಾಳು' ಎಂದು ಶಾಪವಿತ್ತ. ಕುದುರೆಯಾದಾಗಲೂ ನನ್ನ ಗೆಳೆಯನೊಡನೆ ಇರುವಂತೆ ಅನುಗ್ರಹಿಸು ಎಂದು ಕೇಳಿಕೊಂಡಾಗ ವೈಮಾನಿಕ ಹಾಗೆಯೇ ಆಗಲೆಂದು ಕರುಣಿಸಿದ. ಅದರಂತೆ ನಾನು ಚಂದ್ರಾಪೀಡನಿಗೆ ವಾಹನವಾದೆ, ಈಗ ಅಚ್ಛೋದ ಸರೋವರದಲ್ಲಿ ಮುಳುಗಿದ ಕ್ಷಣವೇ ತನಗೆ ಕುದುರೆಯ ರೂಪು ಹೋಗಿ ತನ್ನ ಹಿಂದಿನ ಸ್ವರೂಪ ಬಂದಿದೆ. ಈಗ ಶ್ವೇತಕೇತುವಿನ ಬಳಿ ಹೋಗುತ್ತಿದ್ದೇನೆ" ಎಂದು ಹೇಳಿ ಅಲ್ಲಿಂದ ಹೊರಟ. ಆಗ ಮಹಾಶ್ವೇತೆ ಕಾದಂಬರಿಯನ್ನು ಕುರಿತು, ತಾವಿಬ್ಬರೂ ಈಗ ಒಂದೇ ಸ್ಥಿತಿಯಲ್ಲಿರುವವರು. ಈಗ ಚಂದ್ರನನ್ನು ಇಬ್ಬರೂ ಪೂಜಿಸೋಣ, ಅವನು ಕರುಣೆ ತೋರುತ್ತಾನೆ ಎನ್ನಲು ಒಪ್ಪಿದ ಗೆಳತಿಂಯೊಡನೆ ಹಾಗೇ ಮಾಡಲು ತೊಡಗಿದರು. ಈ ಕಡೆ ಚಂದ್ರಾಪೀಡನಿಗೊದಗಿದ ಗತಿಯನ್ನು ಕೇಳಿದ ಚಂದ್ರಾಪೀಡ ಮತ್ತು ವೈಶಂಪಾಯನರ ತಾಯ್ತಂದೆಗಳು ಅಲ್ಲಿಗೆ ಬಂದರು. ಹೀಗೆ ಪುಂಡರೀಕನು ಶ್ವೇತಕೇತು–ಲಕ್ಷ್ಮಿ ದಂಪತಿಯರಿಗೆ ಮಗನಾಗಿ ಹುಟ್ಟಿ ಕಾಮಪರವಶತೆಯ ಕಾರಣದಿಂದ ದೇವತ್ವದಿಂದ ಚ್ಯುತನಾಗಿ ಶುಕನಾಸನಿಗೆ ವೈಶಂಪಾಯನನಾಗಿ ಮತ್ತೆ ಹುಟ್ಟಿದರೂ ಈಗ ಮಹಾಶ್ವೇತೆಯ ಶಾಪದಿಂದ ಗಿಳಿಯಾಗಿದ್ದಾನೆ ಎಂದು ಜಾಬಾಲಿಯು ತನ್ನ ಕಥನವನ್ನು ಮುಗಿಸಿದ.

ಗಿಳಿ ಹೇಳಿದ ತನ್ನ ಮುಂದಿನ ಕತೆ : ಜಾಬಾಲಿ ಋಷಿ ಹೀಗೆ ತನ್ನ ಕತೆಯನ್ನು ಹೇಳಿದಾಗ ತನಗೆ ಜನ್ಮಾಂತರದ ನೆನಪುಂಟಾಯಿತು, ಹಿಂದೆ ತಾನು ಕಲಿತಿದ್ದ ವಿದ್ಯೆಯೆಲ್ಲ ಮರುಕಳಿಸಿತು. ಆಗ ಅವರನ್ನು "ಜ್ಞಾನೋದಯವಾದರೆ ವಿರಕ್ತಿ ಹೆಚ್ಚುವುದೆಂದು ಹೇಳುತ್ತಾರೆ. ಆದರೆ ನನಗೆ ಮಹಾಶ್ವೇತೆಯ ಬಗೆಗಿನ ಮೋಹ ಹೆಚ್ಚಾಗುತ್ತಿದೆ. ಚಂದ್ರಾಪೀಡ ಎಲ್ಲಿದ್ದಾನೆ?" ಎಂದು ಕೇಳಿದೆ. ಅವರು ನಾನು ಹಾರಲಾರೆನಾದ್ದರಿಂದ. ಗರಿಗಳು ಬಲಿತ ಮೇಲೆ ಹೋಗಬೇಕೆಂದೂ ಈಗ ಸುಮ್ಮನಿರಬೇಕೆಂದೂ ಹೇಳಿ ಹೊರಟುಹೋದರು. ಸ್ವಲ್ಪ ಹೊತ್ತಾದ ಮೇಲೆ ನನ್ನ ಗೆಳೆಯನಾದ ಕಪಿಂಜಲನು ಬಂದು ಪೂರ್ವ ವೃತ್ತಾಂತವನ್ನೆಲ್ಲ ತಿಳಿಸಿ. ತನ್ನ ತಂದೆ ಶ್ವೇತಕೇತು ಆಯುಷ್ಕಾಮಹೋಮವನ್ನು ಮಾಡುತ್ತಿರುವುದಾಗಿಯೂ. ತಾಯಿಯಾದ ಲಕ್ಷ್ಮಿ ಅವರಿಗೆ ಪರಿಚಾರಕಿಯಾಗಿರುವಳೆಂದೂ ತಿಳಿಸಿ. ಆ ಯಾಗ ಮುಗಿಯುವವರೆಗೆ ನಾನು

ಹಾರಲಾರೆನೆಂದೂ ತಿಳಿಸಿ ಹೊರಟು ಹೋದ. ಕೆಲ ಕಾಲದ ಬಳಿಕ ತನಗೆ ಹಾರುವ ಶಕ್ತಿ ಬಂತು. ಚಂದ್ರಾಪೀಡ ಎಲ್ಲಿರುವನೆಂಬ ವಿಷಯವೂ ತನಗೆ ತಿಳಿಯಿತು. ಅವನನ್ನು ನೋಡುವ ಆತುರದಿಂದ ಒಂದು ದಿನ ಜಾಬಾಲಿಗಳ ಆಶ್ರಮದಿಂದ ತಪ್ಪಿಸಿಕೊಂಡು ಹೊರಟು ಬಂದೆ. ಹಾಗೇ ಹಾರುತ್ತ ಬಂದು ಗಿಡದ ಮೇಲೆ ಮಲಗಿದೆ. ಎಚ್ಚರವಾದಗ ತಾನೂ ಯಾರೋ ಬೀಸಿದ್ದ ಬಲೆಯಲ್ಲಿ ಸಿಕ್ಕಿಬಿದ್ದಿದ್ದೆ. ನನ್ನನ್ನು ಹಿಡಿದವನೊಬ್ಬ ಚಂಡಾಲ. "ನಾನು ನನ್ನ ಗೆಳೆಯನನ್ನು ನೋಡಲು ಆತುರನಾಗಿದ್ದೇನೆ. ಅವನ ಬಳಿ ಹೋಗಲು ಇನ್ನೂ ಬಹು ದೂರ ಹಾರಬೇಕಾಗಿದೆಯಾದ್ದರಿಂದ ಬಿಟ್ಟುಬಿಡು" ಎಂದು ಅವನನ್ನು ಬಹುವಿಧವಾಗಿ ಕೇಳಿಕೊಂಡೆ. ಅವನು ಮಾತ್ರ ತನ್ನ ಮನವಿಯನ್ನು ಕೇಳದೆ ತನ್ನನ್ನೆತ್ತಿಕೊಂಡು ಹೊಲೆಯರ ಹಟ್ಟಿಗೆ ಹೋಗಿ ಚಂಡಾಲಕನ್ಯೆಯೊಬ್ಬಳಿಗೆ ತನ್ನನ್ನು ಕೊಟ್ಟ. ಅವಳು ತನ್ನನ್ನೊಂದು ಪಂಜರದಲ್ಲಿಟ್ಟಳು. ಕೆಲವು ದಿನಗಳು ಕಳೆದವು. ಇವಳಾರು, ತನ್ನನ್ನು ಇವಳೇಕೆ ಹಿಡಿದಿದ್ದಾಳೆ ಎಂಬುದಾವುದೂ ನನಗೆ ತಿಳಿಯದಾಯಿತು ಎಂದು ಹೇಳಿ ಗಿಳಿ ತನ್ನ ಕಥನವನ್ನು ಮುಗಿಸಿತು. ಹೀಗೆ ಗಿಳಿ ತನ್ನ ಕತೆಯನ್ನು ನಿರೂಪಿಸಲು ಶೂದ್ರಕನಿಗೆ ಬಹಳ ವಿಸ್ಮಯವುಂಟಾಯಿತು. ಅವನು ಚಂಡಾಲಕನ್ಯೆಯನ್ನು ಕರೆಸಿ ವಿಚಾರವೇನೆಂದು ಕೇಳಿದ. ಆಗ ಆ ಚಂಡಾಲಕನ್ಯೆಯು ಶೂದ್ರಕನು ಬೇರಾರೂ ಆಗಿರದೆ ಚಂದ್ರಾಪೀಡನಾಗಿದ್ದ ಚಂದ್ರನೆಂದೂ, ಗಿಳಿಯೇ ಶಾಪಕ್ಕೊಳಗಾಗಿ ವೈಶಂಪಾಯನನಾಗಿದ್ದ ಪುಂಡರೀಕನೆಂದೂ, ತಾನು ಈ ರೂಪವನ್ನು ತಾಳಿದ ಲಕ್ಷ್ಮಿಯೆಂದೂ ಹೇಳಿ ಶ್ವೇತಕೇತುಗಳ ಆಜ್ಞೆಯಂತೆ ಆಯುಷ್ಕಾಮಹೋಮವು ಮುಗಿಯುವವರೆಗೂ ಗಿಳಿಯನ್ನು ಸೆರೆಹಿಡಿದು ಜೋಪಾನವಾಗಿರಿಸಿದ್ದೆನೆಂದೂ, ಯಜ್ಞ ಕೊನೆಗೊಂಡ ಮೇಲೆ ತಾನೀಗ ಗಿಳಿಯನ್ನು ಇಲ್ಲಿಗೆ ತಂದೆನೆಂದೂ ಹೇಳಿ ಈಗ ಅವರು ತಮ್ಮ ದೇಹಗಳನ್ನು ತೊರೆದು ತಮ್ಮ ಹಿಂದಿನ ದಿವ್ಯದೇಹಗಳನ್ನು ಹೊಂದಿ ಇಷ್ಟಜನರೊಡನೆ ಸೇರಬಹುದೆಂದೂ ವಿವರಿಸಿ ಆಕಾಶಕ್ಕೆ ಹಾರಿ ಮಿಂಚಿನಂತೆ ಕಣ್ಮರೆಯಾದಳು. ರಾಜನೂ ಗಿಳಿಯೂ ತಮ್ಮ ತಮ್ಮ ದೇಹಗಳನ್ನು ತ್ಯಜಿಸಿದರು. ಈ ಕಡೆ ಚಂದ್ರಾಪೀಡನ ದೇಹದಲ್ಲಿ ಮತ್ತೆ ಚೈತನ್ಯವುಂಟಾಗಿ ಅವನು ಎದ್ದು ಕೂತರೆ, ಅತ್ತ ಚಂದ್ರಲೋಕದಿಂದ ಪುಂಡರೀಕನೂ ಬಂದ. ಅಷ್ಟು ಹೊತ್ತಿಗೆ ತಾರಾಪೀಡ-ವಿಲಾಸವತಿಯರೂ ಶುಕನಾಸ-ವಿಲಾಸವತಿಯರೂ ಬಂದರು. ಹೇಮಕೂಟದಿಂದ ಕಾದಂಬರಿಯ ತಾಯ್ತಂದೆಯರೂ ಹೇಮಕೂಟಕ್ಕೆ ಬಂದರು. ಅನಂತರ ಚಂದ್ರಪೀಡ-ಕಾದಂಬರಿ ಹಾಗೂ ಪುಂಡರೀಕ-ಮಹಾಶ್ವೇತೆಯರ ಮದುವೆ ನಡೆದು ಎಲ್ಲವೂ ಸುಖಾಂತವಾಯಿತು.

ಹೀಗೆ 'ಕಾದಂಬರಿ' ಕಾವ್ಯವು ತೊಡಕಿನ ಕತೆಯಿಂದ ಕೂಡಿದ್ದರೂ ಅದ್ಭುತರಮ್ಯತೆಯಿಂದ ಆಹ್ಲಾದಕಾರಿಯಾದ ಕಥಾನಕವಾಗಿದೆ. ಕತೆಯೊಳಗೆ ಕತೆಯಿದ್ದು ಈ ಕಾವ್ಯವು ವಿಸ್ಮಯ ಹುಟ್ಟಿಸುತ್ತದೆ. ಜೊತೆಗೆ ಇದರೊಡನೆ ಮೂಲದಲ್ಲಿ ಬರುವುದು ದೀರ್ಘ ವರ್ಣನೆಗಳು. ರಾಜನ ಓಲಗ, ದೈಹಿಕ ವ್ಯಾಯಾಮ, ಸ್ನಾನ, ಊಟ, ಋಷ್ಯಾಶ್ರಮಗಳು, ಬೇಟೆ, ಬೇಟೆಗಾರರ ರೂಪ, ಸರೋವರಗಳು, ಜೈತ್ರಯಾತ್ರೆ, ಹಗಲು-

ರಾತ್ರಿಗಳು ಮುಂತಾದವುಗಳನ್ನೂ ಬಾಣ ಸಾಕಷ್ಟು ದೀರ್ಘವಾಗಿಯೇ ವರ್ಣಿಸುತ್ತಾನಂತೆ. ಕವಿ ಶಬ್ದಧಾರಾಳಿ; ಒಂದು ಮಾತಿನ ಎಡೆಯಲ್ಲಿ ಹತ್ತು ಮಾತು ಬಳಸಬಲ್ಲ ಚತುರ. ಜೊತೆಗೆ ದೀರ್ಘ ಸಮಾಸ ಪದಗಳು ಬೇರೆ; ಕಗ್ಗಾಡಿನಲ್ಲಿ ಹೋಗಬೇಕಾದ ತೊಡಕು ಎಷ್ಟೋ ವೇಳೆ ಬಾಣಗದ್ಯದಿಂದ ಉಂಟಾಗುತ್ತದಂತೆ. ಪ್ರತಿ ವರ್ಣನೆಯಲ್ಲಿಯೂ ಕುಸುರಿ ಕೆಲಸ, ಸೂಕ್ಷ್ಮ ನಿರೀಕ್ಷಣೆಯ ವಿವರಗಳು, ಮಾತಿನ ಕೌಶಲ ಎದ್ದು ಕಾಣುತ್ತವೆ. ಮಾತುಗಳನ್ನು ಶಬ್ದಚಿತ್ರವನ್ನಾಗಿಸಬಲ್ಲ ಕಲೆಗಾರ ಅವನು; ಈ ವಿಷಯದಲ್ಲಿ ಅವನನ್ನು ಸರಿಗಟ್ಟುವವರು ಸಂಸ್ಕೃತ ಸಾಹಿತ್ಯದಲ್ಲಿಯೇ ಮತ್ತೊಬ್ಬನಿಲ್ಲವೆಂಬ ಹೆಗ್ಗಳಿಕೆ ಬಾಣನದು. ಕವಿಯ ಮತ್ತೊಂದು ಗುಣವೆಂದರೆ ಸ್ತ್ರೀಪುರುಷರ ಹೃದಯದ ಭಾವನೆಗಳನ್ನು ಅವುಗಳ ನವಿರಿಗೆ ಅನುಗುಣವಾಗಿ ಚಿತ್ರಿಸುವುದು. ಎಲ್ಲ ಭಾವಸೂಕ್ಷ್ಮಗಳು, ಚಿತ್ತವಿಕಾರಗಳು ಮಾತಾಗಿ ಈ ಕಾವ್ಯದಲ್ಲಿ ಕಣ್ಮುಂದೆ ನಿಲ್ಲುತ್ತವೆ. ಆ ಕಾರಣಕ್ಕಾಗಿಯೇ, ಕನಿಷ್ಠ ಪಕ್ಷ, ವರ್ಣನೆಯ ಮಟ್ಟಿಗಾದರೂ, 'ಬಾಣೋಚ್ಛಿಷ್ಟಂ ಜಗತ್ಸರ್ವಂ' ಎಂಬ ಮಾತು ನಿಜವೆಂದು ಸಂಸ್ಕೃತ ವಿದ್ವಾಂಸರ ಅಭಿಪ್ರಾಯ. ಆದರೂ ಕೆಲವೊಮ್ಮೆ ಅವನ ವರ್ಣನೆಗಳು ಮಿತಿಮೀರುತ್ತವೆ, ಕೆಲವು ವೇಳೆ ಅನೌಚಿತ್ಯದಿಂದ ಕೂಡಿರುತ್ತವೆ. ಉದಾಹರಣೆಗೆ ರೆಕ್ಕೆಯಿನ್ನೂ ಬಲಿಯದ ಗಿಳಿಮರಿಯು ಬೇಟೆಯ ಸೂಕ್ಷ್ಮಗಳನ್ನೆಲ್ಲ ವಿವರಿಸುವುದು. ಉತ್ಪ್ರೇಕ್ಷೆಗಳಂತೂ ಕಾವ್ಯದುದ್ದಕ್ಕೂ ಇಡಿಕಿರಿದಿವೆ.

ಪ್ರಾಯಶಃ ಈ ಭಾವನೆ ನಾಗವರ್ಮನನ್ನೂ ಕಾಡಿತೋ ಏನೋ; ಆದ್ದರಿಂದಲೇ ಅವನು ವರ್ಣನೆಗಳ ವಿಷಯದಲ್ಲಿ ಹೆಚ್ಚು ಮುತುವರ್ಜಿ ವಹಿಸಿ, ಬೇಡದ್ದನ್ನು ಬಿಟ್ಟು, ಬೇಕಾದ ಕಡೆ ಹ್ರಸ್ವಗೊಳಿಸಿ, ಆವಶ್ಯಕವೆನಿಸಿದ ಕಡೆ ಮೂಲದ ವಿವರಗಳಿಗೆ ಮತ್ತಷ್ಟು ವಿವರಗಳನ್ನು ಜೋಡಿಸಿ ಒಂದು ಬಗೆಯ ಸಮತೋಲನವನ್ನು ಸಾಧಿಸಲು ಪ್ರಯತ್ನಿಸಿ ಸಾಕಷ್ಟು ಯಶಸ್ಸನ್ನು ಕಂಡಿದ್ದಾನೆ. ಇಬ್ಬರಿಂದ ರಚಿತವಾಗಿ ಶೈಲಿಗಳಲ್ಲಿ ಭಿನ್ನತೆಯಿದ್ದ ಮೂಲವನ್ನು ಒಬ್ಬನೇ ಕನ್ನಡಿಸಿರುವುದರಿಂದ ನಿರೂಪಣೆಗೆ ಏಕರೂಪತೆ ಬಂದಿದೆ. ಭಾಷೆ ಒಂದೇ ರೀತಿಯಲ್ಲಿ ಬಳಕೆಯಾಗಿದೆ. ಮೂಲದಲ್ಲಿನ ವರ್ಣನೆ ಮತ್ತು ನಿರೂಪಣೆಗಳೆರಡನ್ನೂ ಮನನ ಮಾಡಿಕೊಂಡು ಆದಷ್ಟೂ ಅವುಗಳ ಮೂಲಭಾವವನ್ನು ಉಳಿಸಿಕೊಂಡು ಅವನ್ನೆಲ್ಲ ಕನ್ನಡ ಪದ್ಯಗಳಲ್ಲಿ ಪಡಿಮೂಡಿಸಿರುವುದು ನಾಗವರ್ಮನ ಹಿರಿಮೆಯೇ ಆಗಿದೆ. ಅನುವಾದ ಹೇಗಿರಬೇಕೆಂಬುದಕ್ಕೆ 'ಕರ್ಣಾಟಕ ಕಾದಂಬರಿ' ಒಂದು ಮಾದರಿಕೃತಿಯಾಗಿದೆ. ನಮ್ಮ ಕವಿಯ ವಿಶೇಷ ಗುಣವೆಂದರೆ ಭಾವನೆಗೆ ಅನುಗುಣವಾದ ಲಾಲಿತ್ಯಪೂರ್ಣ ಭಾಷೆಯನ್ನು ಬಳಸುವುದು. ಹೇಳಿ ಕೇಳಿ ಇದು ಮಾರ್ಗಕಾವ್ಯ, ಅದೂ ಪಡೆಸು ಗದ್ಯದ ಸಂಸ್ಕೃತ ಕೃತಿಯ ಭಾಷಾಂತರ. ಆದ್ದರಿಂದ ಅವನೂ ಮಾರ್ಗದ ಸಮಾಸಭೂಯಿಷ್ಠ ಭಾಷೆಯನ್ನು ಕೆಲವೊಮ್ಮೆ ಕನ್ನಡದಲ್ಲಿ ತರಬೇಕಾಯಿತು. ಸಂಸ್ಕೃತದ ವರ್ಣಛಂದಸ್ಸು ಪದ್ಯದ ಪ್ರತಿ ಪಾದದಲ್ಲಿನ ವರ್ಣಸಂಖ್ಯೆ ಮತ್ತು ಅವುಗಳ ಖಚಿತ ವಿನ್ಯಾಸ (ಗುರುಲಘುಗಳ ಬಳಕೆ) ಇವುಗಳ ಕಾರಣದಿಂದ ಅದನ್ನು ಸಾಧಿಸಲು ಸಮಾಸರಚನೆ ಸಂಸ್ಕೃತದಲ್ಲಿ ಅವಶ್ಯಕವೇನೋ. ಇದು ಕನ್ನಡ ಜಾಯಮಾನಕ್ಕೆ ವ್ಯತಿರಿಕ್ತವಾದುದು. ಕನ್ನಡ ಸರಳನುಡಿಗಳಿಂದ ಕೂಡಿರುವಂಥದ್ದು.

ಪದಗಳನ್ನು ಹೆಣೆದಾಗಲೂ ಎರಡು ಮೂರು ಪದಗಳು ಸೇರಬಹುದೇ ಹೊರತು ಅನೇಕ ಪಾದಗಳಲ್ಲಿ ಹರಿಯುವ ದೀರ್ಘಸಮಾಸ ಇಲ್ಲಿ ಅವಶ್ಯಕವೂ ಇಲ್ಲ, ಸಾಧ್ಯವೂ ಇಲ್ಲ. ಹೀಗಾಗಿ ನಾಗವರ್ಮ ವರ್ಣನೆಗಳ ಸಂದರ್ಭದಲ್ಲಾದರೂ ಸಮಾಸಯುಕ್ತವಾದ ಸಂಸ್ಕೃತಭೂಯಿಷ್ಠ ಶೈಲಿಯನ್ನು ಅನುಸರಿಸುವುದು ಅನಿವಾರ್ಯವಾಯಿತು. ಆದರೆ ಕತೆಯ ನಿರೂಪಣೆಯಲ್ಲಿಯೂ, ಸಂಭಾಷಣೆಗಳಲ್ಲಿಯೂ ಸರಳ ಕನ್ನಡವನ್ನೇ ಬಳಸುತ್ತಾನೆ; ಅದಕ್ಕನುಗುಣವಾದ ಕಂದವನ್ನೇ ಉಪಯೋಗಿಸುತ್ತಾನೆ. ಏಕೆಂದರೆ ಕಂದದ ರಚನೆಯಲ್ಲಿ ದೀರ್ಘವಾದ ಪಾದಗಳುಳ್ಳ ವೃತ್ತದಲ್ಲಿನಂತೆ ಸಮಾಸಯುಕ್ತತೆ ಬೇಕಾಗುವುದಿಲ್ಲ.

ಈಗ ಕೆಲವು ಉದಾಹರಣೆಗಳೊಡನೆ 'ಕರ್ನಾಟಕ ಕಾದಂಬರಿ'ಯ ವರ್ಣನಾ ವೈಖರಿಯನ್ನು ನೋಡೋಣ. ಗಿಳಿ ವಾಸಿಸುತ್ತಿದ್ದ ಬೂರುಗಮರದ ಸಮೀಪವಿದ್ದ ಅಗಸ್ತ್ಯಾಶ್ರಮದ ಬಳಿಯ ಪಂಪಾ ಸರೋವರದ ವರ್ಣನೆ ಹೀಗಿದೆ;

ಕಡಲ ಪೀರ್ದನಗಸ್ತ್ಯನೆಂಬ ಪುರುಡಿಂ ಮತ್ತೊಂದನಬ್ಜೋದ್ಭವಂ
ಪಡೆದಂ ಪೆರ್ಗಡಲಂ ಮಹಾಪ್ರಳಯದೊಳ್ ದಿಕ್ಸಂಧಿಗಳ ಬಂಧಮಂ
ಬಿಡೆ ಬೀಳ್ದತ್ತಿಳೆಗಾಗಸಂ ಧರಣಿಯಂ ಪೆರ್ಬಂದಿಯಂ ಕಿಳ್ತೆತ್ತಿದೊಂ
ದೆಡೆ ನೀರ್ ತೀವಿತು ಎನಲ್ಕೆ ಪೆಂಪುವಡೆಗುಂ ಗುಣ್ಪಿಂದೆ ಪಂಪಾಸರಂ

(ಪಂಪಾ ಸರೋವರದ ಆಳವು ಎಷ್ಟಿತ್ತೆಂದರೆ, ಅಗಸ್ತ್ಯ ಋಷಿಯು ಸಮುದ್ರವನ್ನೆಲ್ಲ ಒಂದೇ ಕುಡಿತೆಯಲ್ಲಿ ಕುಡಿದುಬಿಟ್ಟನಲ್ಲ ಎಂಬ ಪೈಪೋಟಿಯಿಂದ ಬ್ರಹ್ಮನು ಮತ್ತೊಂದು ದೊಡ್ಡ ಸಮುದ್ರವನ್ನು ಸೃಷ್ಟಿಸಿದ ಹಾಗಿತ್ತು; ಪ್ರಳಯಕಾಲದಲ್ಲಿ ದಿಕ್ಕುಗಳಲ್ಲಿ ಕಾಣಿಸಿಕೊಂಡ ಬಿರುಕುಗಳ ಮೂಲಕ ಆಕಾಶವೇ ಕಳಚಿಬಿತ್ತೋ ಎನ್ನುವ ಹಾಗಿತ್ತು; ವರಾಹಾವತಾರದಲ್ಲಿ ವಿಷ್ಣುವು ಭೂಮಿಯನ್ನೆತ್ತಿದಾಗ ಆ ಜಾಗದಲ್ಲಿ ನೀರು ತುಂಬಿಕೊಂಡು ಈ ಸರೋವರವಾಯಿತೋ ಎನ್ನುವಂತಿತ್ತು!) ಆಶ್ಚರ್ಯಕರವಾಗಿ, ಈ ಪದ್ಯವು ವೃತ್ತವೇ ಆಗಿದ್ದರೂ ಪದಗಳ ಹೆಣಿಗೆ ಪೆಡಸಿಂದ ಕೂಡಿರದೆ ಹಳಗನ್ನಡದಲ್ಲಿ ಸಾಧಿಸಬಹುದಾದ ಸರಳತೆಯನ್ನು ಒಳಗೊಂಡಿರುವುದು ಕವಿಯ ಭಾಷೆಯ ಮೇಲಿನ ಹಿಡಿತಕ್ಕೆ ಕನ್ನಡಿಯಾಗಿದೆ.

ಹಾಗೆಯೇ ಚಂದ್ರಾಪೀಡ ಕಂಡ ಅಚ್ಛೋದ ಸರೋವರದ ವರ್ಣನೆಯಿರುವುದು ಹೀಗೆ:

ಎಲೆ! ತಾರಾಗಂ ಹರಂ ಕಣ್ಣಿಡೆ ಕರಗಿದುದು! ಅಂತಲ್ತು, ರುದ್ರಾಟ್ಟಹಾಸಂ
ಜಲಮಾದತ್ತು! ಅಲ್ತು, ಚಂದ್ರಾತಪಂ ಅಮೃತರಸಾಕಾರಮಾಯ್ತು! ಅಲ್ತು, ಹೈಮಾ
ಚಲಂ ಅಂಭೋರೂಪದಿಂದಂ ಪರಿಣಮಿಸಿದುದು! ಅಂತಲು, ನೈರ್ಮಲ್ಯಶೋಭಾ
ಕಲಿತಂ ತ್ರೈಲೋಕ್ಯಲಕ್ಷ್ಮೀ ಮಣಿಮುಕುರಮೆನಲ್ ಚೆಲ್ವಿದಾಯ್ತಬ್ಜಷಂಡಂ!

(ಎಲೆಲೆ! ಹರನು ತನ್ನ ಮೂರನೆಯ ಕಣ್ಣನ್ನು ತೆರೆದಾಗ ಇಡೀ ಹಿಮಾಲಯವೇ ಕರಗಿ ನೀರಾಗಿರಬೇಕು; ಉಹ್ಞೂ, ರುದ್ರನ ಅಟ್ಟಹಾಸವೇ ನೀರಾಗಿರಬೇಕು; ಅದೂ

ಅಲ್ಲ, ಬೆಳುದಿಂಗಳೆ ನೀರಿನ ರೂಪದಲ್ಲಿ ಮಡುಗಟ್ಟಿರಬೇಕು; ಅದೂ ಅಲ್ಲ. ಹಿಮಾಲಯ ಪರ್ವತವು ನೀರಿನ ರೂಪದಲ್ಲಿ ಇಲ್ಲಿ ಅವತರಿಸಿರಬೇಕು; ಅಲ್ಲಲ್ಲಿ, ಇದು ತ್ರಿಲೋಕಲಕ್ಷ್ಮಿಯು ತನ್ನ ಚೆಲುವನ್ನು ನೋಡಿಕೊಳ್ಳಲು ಸೃಷ್ಟಿಸಿಕೊಂಡ ರನ್ನಗನ್ನಡಿಯಾಗಿರಬೇಕು!) ಕವಿಯ ಕಲ್ಪನೆಗೆ ರೆಕ್ಕೆಪುಕ್ಕ ಮೂಡಿಬಿಟ್ಟಿದೆಯಿಲ್ಲಿ. ಷೇಕ್ಸ್‌ಪಿಯರ್‌ನ ನಾಟಕವೊಂದರಲ್ಲಿ ಬರುವಂತೆ ಇಲ್ಲಿಯೂ ಕವಿಯ ಕಣ್ಣು ಯಾವುದೋ ಒಂದು ಉತ್ಕಂಠಿತೆಯಲ್ಲಿ ತೇಲುಗಣ್ಣುಮೇಲುಗಣ್ಣಾಗಿ ಇಹಪರಗಳೆರಡ್ಕೂ ಸಂಚರಿಸಿರಬೇಕು. ಎಂಥ ಕಲ್ಪನೆ! ಅದೂ ಅಮೂರ್ತವಾದ ಕಲ್ಪನೆಗಳ ಚೆಲುವನ್ನು ಪರಿಭಾವಿಸಿ; ರುದ್ರನ ಅಟ್ಟಹಾಸ (ಬರಿ ನಗುವಲ್ಲ) ಕರಗಿ ನೀರಾಯಿತೋ ಎಂಬ ಮಾತು! ಇದನ್ನು ಬರೆಯುವಾಗ ಕವಿಮನಸ್ಸು ಖಂಡಿತ ನೆಲದ ಪರಿವೆಯನ್ನು ಪೂರ್ತಿ ಕಳೆದುಕೊಂಡಿರಬೇಕು. ಅಲ್ಲದೆ ದೂರ ಕುದುರೆಯೇರಿ ಬಂದು ದಣಿವಿನಿಂದ ಕೂಡಿದ ಚಂದ್ರಾಪೀಡನ ಮನಸ್ಸಿಗೆ ಇದನ್ನು ಕಂಡಾಗ ಉಂಟಾದ ವಿಸ್ಮಯ, ಸಂತೋಷ-ಸಮಾಧಾನದ ಭಾವಗಳು ಈ ಪದ್ಯದಲ್ಲಿ ಮೂಡಿವೆ. ಇಲ್ಲಿನ ಮಾತುಗಳ ಜೋಡಣೆಯಾದರೂ ಎಷ್ಟು ಸುಂದರ! ಭಾವಕ್ಕನುಗುಣವಾದ ಭಾಷೆ.

ಗಿಳಿಯ ಮರಿಯು ವಾಸಿಸುತ್ತಿದ್ದ ಬೂರುಗದ ಮರದ ಬಳಿಗೆ ಬಂದ ಮುದಿಬೇಡನ ವ್ಯಕ್ತಿಚಿತ್ರ ಕಣ್ಣಿಗೆ ಕಟ್ಟುತ್ತದೆ.

ಜರೆಯಿಂದಂ ಪುರ್ಬು ಜೋಲಲ್ ತೆರೆ ತರತರದಿಂದುಣ್ಮೆಪೊಣ್ಮಲ್ಕೆ ಗಂಟಲ್
ಮುರಿದತ್ತೊಂದೊಂದಜೊಳ್ ತಳ್ತೊಗೆಯೆ ಸೆರೆಗಳೊತ್ತಂಬದಿಂ ಬರ್ಪ ಕೆಮ್ಮಿಂ
ಬಿರಿಯಲ್ ಬೆಟ್ಟಂಗಳ್ ಆ ಬಟ್ಟೆಯೊಳಿನಿತಡಗುಂ ತನ್ನ ಕೆಯ್ಸಾರದೆಂದಾ
ತುರಿಸುತ್ತುಂ ಭ್ರಾಂತಿಯಿಂದೆನ್ನಯ ಮರದಡಿಯೊಳ್ ನಿಂದನೊರ್ವ ಪುಳಿಂದಂ

(ಮುಪ್ಪಿನಿಂದಾಗಿ ಹುಬ್ಬು ಜೋಲಾಡುತ್ತಿತ್ತು, ಚರ್ಮದ ಸುಕ್ಕು ಹೊಮ್ಮುತ್ತಿತ್ತು. ಬಾಗಿದ ಕತ್ತಿನ ನರಗಳ ಒತ್ತಡದಿಂದ ಬರುವ ಕೆಮ್ಮಂತೂ ಬೆಟ್ಟಗಳೇ ಬಿರುಕುಬಿಡುವಷ್ಟು ಜೋರಾಗಿತ್ತು! ತನಗೆ ಆ ಹಾದಿಯಲ್ಲಿ ಸ್ವಲ್ಪವಾದರೂ ಮಾಂಸ ಸಿಕ್ಕುತ್ತದೋ ಇಲ್ಲವೋ ಎಂಬ ಕಳವಳದಿಂದ ಆ ಮುದಿಬೇಡನು ನಾವಿದ್ದ ಮರದಡಿಯಲ್ಲಿ ನಿಂತಿದ್ದ).

ಮುದಿಬೇಡನು ಬೂರುಗದ ಮರವನ್ನು ಹತ್ತಿಬಂದು ಗೂಡುಗಳಲ್ಲಿದ್ದ ಹಕ್ಕಿಗಳನ್ನು ತೆಗೆತೆಗೆದು ಕತ್ತು ಹಿಚುಕಿ ಕೆಳಕ್ಕೆ ಬಿಸಾಡುವಾಗ ಅವನು ಮರಿಗಳ ಬಗ್ಗೆಯೂ ಕರುಣೆ ತೋರಲಿಲ್ಲ. ಅಲ್ಲಿ ವಾಸಿಸುತ್ತಿದ್ದ ಗಿಳಿಮರಿಗಳ ಸ್ವರೂಪವನ್ನು ವರ್ಣಿಸುವ ಈ ಪದ್ಯ ತನ್ನ ಶಬ್ದವಿನ್ಯಾಸದ ಮೂಲಕವೇ ಅವುಗಳ ಕೋಮಲತೆ, ಲಾಲಿತ್ಯಗಳನ್ನು ಎದೆಗೆ ಮುಟ್ಟುವಂತೆ ಅನುಭವಕ್ಕೆ ತರುತ್ತದೆ:

ಜಳಜದ ಮೊಗ್ಗೆಯಂತೆ ಮುಗುಳಂತೆ ಎಳ ಎಕ್ಕೆಯ ಕಾಯ್ಗಳಂತೆ ಶಾ
ಲ್ಮಲಿ ಕುಸುಮಂಗಳಂತೆ ತರು ನೀಡನಿಕಾಯದಿನೆಲ್ಲವಾಗಾಗಳಾ
ಗಳೆ ಗಜಿವೊಯ್ವ ಕಣ್ದೆಜಿವ ತುಪ್ಪುಜಿಜೊಡರ್ಚುವ ಕೆಂಪನಾಳ್ವ ಕೋ
ಮಳ ಶುಕಶಾಬಕಪ್ರಕರಮಂ ತೆಗೆವಂ ದಯೆಗೆಟ್ಟು ಲುಬ್ಧಕಂ

(ತಾವರೆಯ ಮೊಗ್ಗುಗಳಂತೆ, ಅರೆಬಿರಿದ ಹೂಗಳಂತೆ, ಎಳತಾದ ಎಕ್ಕೆಯ ಕಾಯಿಗಳಂತೆ, ಶಾಲ್ಮಲಿಯ ಹೂಗಳಂತೆ ಇದ್ದ, ಇನ್ನೂ ಈಗ ತಾನೇ ಗರಿಮೂಡುತ್ತಿರುವ, ಕಣ್ಣುಬಿಟ್ಟು ನೋಡಲು ಕಲಿಯುತ್ತಿರುವ, ಪುಕ್ಕಗಳಿನ್ನೂ ಪೂರ್ತಿ ಮೂಡದೆ ಮೊಳೆಯುತ್ತಿರುವ ಕೆಂಪು ಕೊಕ್ಕಿನಿಂದ ಆಕರ್ಷಕವಾದ ಪುಟಾಣಿ ಗಿಳಿಮರಿಗಳ ಗುಂಪನ್ನೂ ದಯೆಯಿಲ್ಲದ ಆ ಬೇಡನು ತೆಗೆತೆಗೆದು ಎಸೆದನು).

ತಂದೆಯನ್ನು ಕಳೆದುಕೊಂಡು, ಬೇಡನಿಂದ ಅದೃಷ್ಟವಶಾತ್ ಉಳಿದ ಗಿಳಿಮರಿಯು ಬಾಯಾರಿಕೆಯಿಂದ ಬಳಲಿದ್ದರೂ ತೆವಳುತ್ತ ಅವನಿಂದ ದೂರ ಹೋದ ದೃಶ್ಯ:

ಗಱಿ ಪಾರಲ್ಕಿಲ್ಲ ಕಾಲುಂ ಬಲಿಯವು ನಡೆಯಲ್ ಬೆಟ್ಟಿತೆಂಬಂತೆ ಮೂಗಂ
ಮುಱಿವನ್ನಂ ಮುಗ್ಗುತ್ತ ಎಡಬಲದೊಳಗಾಂ ಬೀೞುತುಂ ಪಕ್ಕಗೂಡಾ
ಗೊಱಗುತ್ತುಂ ಪೋಗಿ ಮಧ್ಯಾಹ್ನದ ಬಿಸಿಲ್ ಅೞುರಲ್ ಕಣ್ಮಲರ್ ನಟ್ಟುಸುಯ್ಗಳ್
ಪೊಱಪೊಟ್ಟೊಂದೊಂದನಟ್ಟುತ್ತಿರೆ ಪಿರಿದುಮೞಲ್ದೆನ್ನೊಳಿಂತೆಂದೆನಾಗಳ್

(ಹಾರಲು ರೆಕ್ಕೆಗಳಿಲ್ಲ, ನಡೆಯಲು ಇನ್ನೂ ಕಾಲು ಬಲಿತಿಲ್ಲ, ಆಗಾಗ ಮುಗ್ಗರಿಸಿ ಕೊಕ್ಕು ನೋವಾಗುವಂತೆ ಪಕ್ಕದಲ್ಲುರುಳಿ ನಡೆಯುತ್ತ, ಮಧ್ಯಾಹ್ನದ ಬಿರುಬಿಸಿಲಿನಿಂದ ಕಣ್ಣುಗಳು ಮುಚ್ಚಿ ನಿಟ್ಟುಸಿರು ಹೊಮ್ಮಿ ನೋವನ್ನನುಭವಿಸಿ ಈ ರೀತಿ ಹೇಳಿಕೊಂಡೆನು).

ಬದುಕುವ ಆಸೆಯಿಂದ ಕೂಡಿ ದಣಿವನ್ನು ಮೀರಿ ಮಹಾಶ್ವೇತೆ ಎಂಬ ಹೆಸರಿಗೆ ಅನ್ವರ್ಥವಾಗಿದ್ದ ರೂಪಿನ ತರುಣಿಯನ್ನು ಚಂದ್ರಾಪೀಡನು ಮೊದಲ ಬಾರಿ ಕಂಡಾಗ ಕವಿ ಅವಳ ಸಾತ್ವಿಕ ಚೆಲುವನ್ನು ಬಣ್ಣಿಸುವ ಪರಿ ಇದು:

ಕಡೆದರೊ ಶಂಖದಿಂ ತೆಗೆದರೊ ನವಮೌಕ್ತಿಕದಿಂ ಮೃಣಾಳದಿಂ
ಪಡೆದರೊ ದಂತದಿಂದೆಸೆಯೆ ಮಾಡಿದರೋ ರುಚಿರೊಜ್ಜ್ವಲಾಂಗಮಂ
ಬಿಡದಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂ
ದೊಡೆದರೊ ಪೇೞೆನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ

(ಬೆಳ್ಳಗೆ ತಳತಳಿಸುವ ಅವಳ ಶರೀರವು ಶಂಖದಿಂದ ಕಡೆದು ಮಾಡಿದ್ದಾರೋ ಎನ್ನುವಂತೆ, ಹೊಸ ನಳನಳಿಸುವ ತಾವರೆಯ ದಂಟಿನಿಂದ ರೂಪಿಸಿರುವಂತೆ, ಹೊಸಮುತ್ತುಗಳಿಂದ ನಿರ್ಮಿಸಿರುವಂತೆ, ಕಾಂತಿಮಯವಾದ ದೇಹವನ್ನು ದಂತದಿಂದ ಕೆತ್ತನೆ ಮಾಡಿದ್ದಾರೆಯೋ ಎಂಬಂತೆ, ಬೆಳುದಿಂಗಳ ಕಾಂತಿಯೆಂಬ ಕುಂಚದಿಂದ ತೊಳೆದು ಪಾದರಸದಿಂದ ಲೇಪನಮಾಡಿದಂತೆ ಶೋಭಿಸುತ್ತಿತ್ತು!).

ಇವೆಲ್ಲ ಒಂದು ರೀತಿಯ ಹೊರರೂಪಿನ ವರ್ಣನೆಗಳು; ಅವುಗಳಲ್ಲಿಯೂ ಕವಿಯು ತೋರುವ ಅನನ್ಯ ಕುಸುರಿಗೆಲಸವನ್ನು ಕಾಣಬಹುದು. ಜೊತೆಗೆ ಈ ಕವಿ

ಸೂಕ್ಷ್ಮ ವಿಷಯಗಳನ್ನೂ ಅವುಗಳಿಗನುಗುಣವಾದ ಸೂಕ್ಷ್ಮತೆಯಿಂದಲೂ ಭಾವಾನುಸಾರಿ ಭಾಷೆಯ ಮೂಲಕವೂ ನವಿರಾಗಿ ಚಿತ್ರಿಸಬಲ್ಲ. ಅಂತಹುದೊಂದು ಚಿತ್ರ ಜಾಬಾಲಿ ಋಷಿಯ ವ್ಯಕ್ತಿತ್ವದ ವರ್ಣನೆಯಲ್ಲಿದೆ.

ತನುವೆರಸುಯ್ಯಲ್ ಮುನಿಗಳನ್
ಅನಲಂ ಸ್ವರ್ಗಕ್ಕೆ ಸೇತುಗಟ್ಟಿದನೆನೆ ಪಾ
ವನ ಹೋಮಧೂಮಮೊಗೆಯಲ್
ಮುನಿಪಾಶ್ರಮಮೆನಗೆ ಕಾಣಲಾದತ್ತಾಗಳ್

(ಜಾಬಾಲಿಋಷಿಗಳನ್ನು ದೇಹಸಮೇತವಾಗಿ ಸ್ವರ್ಗಕ್ಕೆ ಕರೆದೊಯ್ಯಲು ಅಗ್ನಿಯು ಸೇತುವೆಯನ್ನು ಕಟ್ಟಿದ್ದಾನೆಯೋ ಎಂಬಂತೆ ಪಾವನವಾದ ಯಜ್ಞದ ಹೊಗೆಯು ಆಕಾಶಕ್ಕೆ ಅಡರುತ್ತಿದ್ದುದು ಕಾಣುತ್ತಿತ್ತು!).

ಮಹಾಶ್ವೇತೆ ಮೊದಲ ಬಾರಿಗೆ ಪುಂಡರೀಕನನ್ನು ಕಂಡು ಮೋಹಗೊಂಡು ಅವನ ನೆನಪಿನಲ್ಲೇ ಮನೆಗೆ ಬಂದು ಹಗಲಿಡೀ ಅವನ ಧ್ಯಾನದಲ್ಲಿದ್ದು ಸುತ್ತಲ ಆಗುಹೋಗುಗಳನ್ನು ಮಾತ್ರವಲ್ಲದೆ ತನ್ನ ಬಗ್ಗೆಯೂ ಆಲೋಚನೆ ಮಾಡಲಾರದ ಸ್ಥಿತಿಯನ್ನು ಅನುಭವಿಸುವುದು ಹೀಗೆ:

ಮನೆಗೇಂ ಬಂದೆನೋ ಬಾರೆನೋ ಸಖಿಯರೊಳ್ ಕೂಡಿರ್ದೆನೋ ಕೂಡದಿ
ರ್ದೆನೊ ಮೇಣ್ ನಿದ್ರೆಯೊಳಿರ್ದೆನೊ ಪಿರಿದುಮೆಚ್ಚತ್ತಿರ್ದೆನೋ ಮೌನಮಿ
ರ್ದೆನೊ ಮಾತಾಡುತುಮಿರ್ದೆನೋ ವ್ಯಸನದೊಳ್ ಸಂದಿರ್ದೆನೋ ರಾಗಮಿ
ರ್ದೆನೊ ಪೇೞಾಂ ನಗುತಿರ್ದೆನೋ ಮನದೊಳಂದಾಸತ್ತಱುತ್ತಿರ್ದೆನೋ

ಅನುವಾದವೇ ಅನವಶ್ಯವೆಂಬಷ್ಟು ಸರಳವಾದ ನೇರವಾದ, ಜೊತೆಗೆ ಅಲಂಕಾರಗಳೇ ಇಲ್ಲದ ಈ ಬದಲಾವಣೆಯಾದರೂ ಅದೆಷ್ಟು ಪ್ರಭವಶಾಲಿಯಾಗಿದೆ! ಎತ್ತಿ ತೋರಿಸಲು ಹೊಸತನವೇನಿಲ್ಲ; ಆದರೆ ಅದರ ಸಂವಹನಸಾಮರ್ಥ್ಯವನ್ನು ಅಳೆಯಲಸಾಧ್ಯ. ಪ್ರತಿಭಾಶಾಲಿಯಾದ ಕವಿಯ ಕೈಯಲ್ಲಿ ನೇರಮಾತು ಕೂಡ ಕಾವ್ಯವಾಗುವ ಪರಿಯಿದು!

ಚಂದ್ರಾಪೀಡನನ್ನು ತನ್ನರಮನೆಯಲ್ಲಿ ಮೊದಲ ಬಾರಿಗೆ ನೋಡಿದ ಸಂದರ್ಭದಲ್ಲಿ ಮಹಾಶ್ವೇತೆ ತನ್ನನ್ನವನಿಗೆ ಪರಿಚಯಿಸಿ ಕೊಟ್ಟು ಅವನಿಗೆ ತಾಂಬೂಲವನ್ನು ನೀಡಲು ಹೇಳಿದಾಗ ಮೊದಲು ನಾಚಿಕೆಯಿಂದ ಹಿಂಜರಿದರೂ ಆನಂತರ ಹಾಗೆ ಮಾಡುವಾಗ ಮುಂದೆ ಚಾಚಿದ ಅವನ ಬೊಗಸೆ ಅವಳ ಕೈಗಳನ್ನು ತಾಗುತ್ತದೆ. ಮೊದಲ ನೋಟದಲ್ಲೇ ಅವನಿಗೆ ಮನಸೆತ್ತಿರುವ ಆಕೆಯ ಸರ್ವಸ್ವವೀಗ ಅವನಿಗೆ ಅರ್ಪಿತಗೊಳ್ಳುವಂತೆಯೂ ಮತ್ತವನು ಅದನ್ನು ಸ್ವೀಕರಿಸಿದಂತೆಯೂ ಭಾಸವಾಗುವ ಕ್ಷಣದ ವರ್ಣನೆ ಹೀಗಿದೆ;

ಎನಸುಂ ಮುಂದೆ ನಖಾಂಶು ನಿಳ್ಕೆ ನೃಪಹಸ್ತಾನ್ವೇಷಣಂಗೆಯ್ವವೋಲ್
ನಿನಗನ್ನಂ ಬಿಡದುಣ್ಮಿದೀ ಬೆಮರ ಕಯ್ನೀರಾಗಿರಲ್ ತೋರ್ಕೆಗೊ
ಟ್ಟನನಂಗಂ ಪಿಡಿ ನಿನ್ನ ಕಯ್ಯೆಡೆಯನೊಂದಿರ್ದಪ್ಪುದಿದೆನ್ನ ಜೀ
ವನವೆಂಬುದದಿನಿಕ್ಕಿದಳ್ ನಡುಗುತುಂ ತನ್ವಂಗಿ ತಾಂಬೂಲಮಂ

(ತನ್ನ ಉಗುರಿನ ಕಾಂತಿಯು ಕೊಂಚ ಮುಂದೆ ಚಾಚಿಕೊಂಡಿರಲು, ಚಂದ್ರಾಪೀಡನ ಕೈ ಎಲ್ಲಿದೆಯೆಂದು ತನ್ನ ಕೈ ಹುಡುಕುತ್ತಿರುವಂತೆಯೂ, ಒಂದೇ ಸಮನೆ ಉಕ್ಕುತ್ತಿರುವ ಬೆವರ ಹನಿಗಳೇ ಧಾರೆಯ ನೀರಾಗಿರಲು ಮನ್ಮಥನು ನನ್ನನ್ನು ನಿನಗೆ ಕಾಣಿಕೆಯಾಗಿ ಅರ್ಪಿಸುತ್ತಿದ್ದಾನೆ, ಅದನ್ನು ಸ್ವೀಕರಿಸು ಎಂಬಂತೆಯೂ, ಇನ್ನು ನನ್ನ ಪ್ರಾಣವು ನಿನ್ನ ಕೈಯಲ್ಲಿದೆ ಎಂದು ಇರಿಸುವಂತೆಯೂ ಆ ಕೃಶಾಂಗಿಯು ತಾಂಬೂಲವನ್ನು ಅವನ ಕೈಯಲ್ಲಿರಿಸಿದಳು). ನೀಡುವಿಕೆ ವಸ್ತುರೂಪದ್ದಲ್ಲ, ಚೈತನ್ಯರೂಪದ್ದು ಎಂಬುದನ್ನೂ, ಅರ್ಪಿಸಿಕೊಳ್ಳುವ ಮತ್ತು ಹೃತ್ಪೂರ್ವಕವಾಗಿ ಸ್ವೀಕರಿಸುವ ಕೃತ್ಯಗಳು ಒಮ್ಮೆಗೇ ನಡೆಯುವುದನ್ನೂ ಈ ಪದ್ಯ ನವುರಾಗಿ ಬಣ್ಣಿಸುತ್ತದೆ. ಮೊದಲ ನೋಟದ ಪ್ರಣಯಕ್ಷಣದ ಭಾವಚಿತ್ರ ಇದು! ಇಂಥ ಚಿತ್ರಗಳು ಇಡೀ ಕಾವ್ಯದ ಉದ್ದಕ್ಕೂ ಹರಡಿವೆ. ಕಾವ್ಯದುದ್ದಕ್ಕೂ ಇರುವುದು ಕೋಮಲ ಭಾವಗಳ ನವಿರು ನರ್ತನ. ಎಲ್ಲಿಯೂ ಆರ್ಭಟವಿಲ್ಲ, ಎಲ್ಲಿಯೂ ತೋರಿಕೆಯಿಲ್ಲ, ಎಲ್ಲಿಯೂ ವೈಭವವಿಲ್ಲ. ದಿವ್ಯ ಪ್ರಶಾಂತತೆ ಕಾವ್ಯವನ್ನಾವರಿಸಿರುವ ಪರಿವೇಷ, ಅರ್ಪಣೆ, ಮರುಅರ್ಪಣೆಗಳ ಕ್ಷಣಗಳೇ ಇಲ್ಲಿರುವಂಥವು. ಅನುಭವವನ್ನು ಭಾವ, ಭಾವಕ್ಕನುಗುಣವಾದ ಭಾಷೆ, ಭಾಷೆಯ ಕೋಮಲತೆ ಈ ಕಾವ್ಯದ ಪ್ರಮುಖ ಗುಣ. ಮೂಲ ಹೇಗಿದೆಯೋ ತಿಳಿಯದು. ಅಲ್ಲಿನ ಗದ್ಯ ಮರಗಿಡಬಳ್ಳಿಗಳು ಒಂದಕ್ಕೊಂದು ಹೆಣೆದುಕೊಂಡು ದುರ್ಗಮವಾಗಿಸಿದ ದಟ್ಟ ಕಾಡಿನಂತಹುದು ಎಂದು ಹೇಳುತ್ತಾರೆ. ಅಲ್ಲಿ ಅಂಥ ಸನ್ನಿವೇಶಗಳು ಕಡಿಮೆ. ಆದರೆ ಇಲ್ಲಿಯೂ ಕೆಲವು ವೇಳೆ ತೀರ ಕಠಿಣವಾದ ಭಾಷೆಯ ಪ್ರಯೋಗವಿದೆ. ಉದಾಹರಣೆಗೆ ಈ ಕೆಳಗಿನ ಪದ್ಯ:

ಇದೆ ಪರ್ವಿತ್ತು ಮತಂಗಜೋಚ್ಚಲಿತ ಕಂಜಾಳೀರಜಸ್ತೋಮಮಿಂ
ತಿದೆ ತೀಡಿತ್ತು ವರಾಹಸಂಕುಳ ದಳನ್ಮುಸ್ತೋತ್ಕರಾಮೋದಮಿಂ
ತಿದೆ ಬಂದತ್ತಿಭಯೂಥನಾಥ ದಳಿತೋದ್ಯತ್ಸಲ್ಲಕೀ ಗಂಧಮಿಂ
ತಿದೆ ತೋಱಿತ್ತು ಮದಾಂಧಸೈರಿಭಖುರಪ್ರೋದ್ಭೂತರೇಣುವ್ರಜಂ

ಕ್ರಿಯಾಪದಗಳನ್ನು ಬಿಟ್ಟರೆ ಉಳಿದೆಡೆ ಪ್ರತಿಸಾಲಿನಲ್ಲಿಯೂ ಹರಡಿಕೊಂಡಿರುವುದು ಒಂದೊಂದು ದೀರ್ಘ ಸಮಾಸ! ಈ ಪದ್ಯವನ್ನು ಕುರಿತು ವೆಂಕಣ್ಣಯ್ಯನವರು ಹೇಳುವುದಿದು: "ಕನ್ನಡ ಪರಿವರ್ತನಕ್ಕಿಂತಲೂ ಸಂಸ್ಕೃತ ಮೂಲವೇ ಸುಲಭವಾಗಿರುವುದಲ್ಲವೇ!" ಎಂದು. ಆದರೆ ಇಂತಹ ಎಡೆಗಳು ತೀರ ಅಪರೂಪ. ಜೊತೆಗೆ ಎಲ್ಲಿಯೂ ಭೀಕರತೆ, ರೌದ್ರ, ದ್ವೇಷ, ಮತ್ಸರದಂತಹ ಭಾವಗಳೇ ಇಲ್ಲದಿರುವುದರಿಂದ ಇಡೀ ಕಾವ್ಯದ ವಾತಾವರಣ ಆಹ್ಲಾದಕರವಾಗಿರುವುದರ ಜೊತೆಗೆ,

ವಿರಹ ಉದ್ವೇಗಗಳ ಕ್ಷಣಗಳಲ್ಲಿ ಮಾತ್ರ ತೀವ್ರ ವೇದನೆ ವ್ಯಕ್ತವಾಗುತ್ತದೆ. ಆದರೆ ಆ ವೇದನೆ ಪ್ರೇಮಮೂಲವಾದುದೇ ಹೊರತು ದುಃಖಮೂಲವಾದುದಲ್ಲ.

ಕಾದಂಬರಿ ಕಾವ್ಯವು ಅನೇಕ ಅಂಶಗಳಿಂದ ವಿಶಿಷ್ಟ ರಚನೆ. ಅಲ್ಲಿಯವರೆಗಿನ ಕಾವ್ಯಗಳೆಲ್ಲ ಪುರುಷಪ್ರಧಾನ ಅಥವಾ ನಾಯಕಪ್ರಧಾನ ಕತೆಗಳಿಂದ ಕೂಡಿದವು. ಆದರೆ ಕಾದಂಬರಿ ಮಾತ್ರ ಸ್ತ್ರೀಪಾತ್ರ ಪ್ರಧಾನವಾದುದು. ಇಲ್ಲಿ ಪ್ರಧಾನಪುರುಷರು ಬಂದರೂ ಖಳನಾಯಕರಿಲ್ಲ, ಖಳನಾಯಕಿಯರೂ ಇಲ್ಲ. ಪರಸ್ಪರ ಪೈಪೋಟಿಯಿದ್ದರೆ ತಾನೇ ಸಂಘರ್ಷ; ಇಲ್ಲಿರುವುದು ಸಹಯೋಗ, ಸಹಾನುಭೂತಿ, ಸಹಬಾಳ್ವೆ; ಇರುವಂಥದೂ ಇಲ್ಲಿರುವುದು ವ್ಯಕ್ತಿಸಂಘರ್ಷವಲ್ಲ, ಭಾವತುಮುಲ, ಅದೂ ಮಾನವನಿರ್ಮಿತವಾದುದಲ್ಲ, ಮಾನವಾತೀತ ಕಾರಣದಿಂದಾದುದು. ಅಲ್ಲದೆ, ಕಾವ್ಯದ ಹೆಸರು ಕಾದಂಬರಿ ಎಂದಿದ್ದರೂ ಅವಳನ್ನು ನಾಯಕಿ ಎಂದು ಕರೆಯಲು ಸಾಧ್ಯವಿಲ್ಲ; ಏಕೆಂದರೆ ಕಾವ್ಯದುದ್ದಕ್ಕೂ ಓದುಗರನ್ನು ಹೆಚ್ಚು ಸೆರೆಹಿಡಿಯುವವಳು ಮಹಾಶ್ವೇತೆ. ಅಲ್ಲದೆ, ಅವರಿಬ್ಬರೂ ಅಭಿನ್ನರಂತೆ ವರ್ತಿಸುತ್ತಾರೆ; ಒಬ್ಬರ ವಿರಹದಲ್ಲಿ ಮತ್ತೊಬ್ಬಳೂ ನವೆಯುತ್ತಾಳೆ, ಒಬ್ಬಳಂತೆ ಇನ್ನೊಬ್ಬಳೂ ತ್ಯಾಗಕ್ಕೆ ಸಿದ್ಧಳಾಗುತ್ತಾಳೆ. ಸ್ತ್ರೀಮಾತ್ಸರ್ಯಕ್ಕೆ ಇಲ್ಲಿ ಅವಕಾಶವೇ ಇಲ್ಲ. ಅಥವಾ ಒಟ್ಟಾರೆ ಮಾತ್ಸರ್ಯಕ್ಕೇ ಈ ಕಾವ್ಯದಲ್ಲಿ ಎಡೆಯಿಲ್ಲ. ತಾರಾಪೀಡ–ಶುಕನಾಸರೂ ಆಪ್ತರು. ಅವರ ನಡುವೆ ರಾಜ–ಮಂತ್ರಿ ಸಂಬಂಧಕ್ಕಿಂತ ಮಿಗಿಲಾದುದು ಸ್ನೇಹ. ಅಂತೆಯೇ ಅವರ ಮಕ್ಕಳಾದ ಚಂದ್ರಾಪೀಡ–ವೈಶಂಪಾಯನರ ನಡುವಣದ್ದೂ ಅಂತಸ್ತನ್ನು ಮೀರಿದ ಅಂತರಂಗ. ಪುಂಡರೀಕ–ಕಪಿಂಜಲರದಂತೂ ಬೆಸುಗೆಗೊಂಡ ಜೀವಗಳು. ಈ ಎರಡೂ ಜೋಡಿಗಳು ಜನ್ಮಾಂತರದಲ್ಲೂ ತಮ್ಮ ಗೆಳೆತನವನ್ನು ಬಿಟ್ಟುಕೊಡದಂಥವು. ಪತ್ರಲೇಖೆ, ಮಕರಿಕೆ, ತರಳಿಕೆಯಂತಹ ಸೇವಕಿಯರನ್ನೂ ಅವರ ಯಜಮಾನರುಗಳು ಒಂದು ರೀತಿಯಲ್ಲಿ ಸಮಾನರಂತೆ ಕಾಣುವರು. ಅಲ್ಲಿ ಆಜ್ಞೆಗಳಿಲ್ಲ, ಅಂತರಂಗದ ಕೋರಿಕೆಗಳಿವೆ. ದರ್ಪವಿಲ್ಲ ಅನುಕಂಪವಿದೆ, ಎರಡೂ ಕಡೆ. ಮಾಡುವ ಸೇವೆ ಬರೀ ಸೌಜನ್ಯಪೂರ್ಣ ಮಾತ್ರವಲ್ಲ, ಯಜಮಾನ–ಯಜಮಾನಿತಿಗೆ ಒಳಿತಾಗಬೇಕೆಂಬ ಕಕ್ಕುಲತೆಯಿಂದ ಮಾಡುವ ಸಹಾಯ. ತಂದೆತಾಯಿಗಳಿಗೆ – ತಾರಾಪೀಡ–ವಿಲಾಸವತಿ, ಶುಕನಾಸ–ಮನೋರಮೆ, ಹಂಸ–ಗೌರಿ, ಚಿತ್ರರಥ–ಮದಿರಾದೇವಿ – ಮಕ್ಕಳು ತಮ್ಮ ಹತೋಟಿಯಲ್ಲಿರಬೇಕೆಂಬ ಚಪಲವಿಲ್ಲ, ಅವರ ಸುಖಕ್ಕಾಗಿಯೇ ಹಾತೊರೆಯುವವರು. ಮಕ್ಕಳೂ ತಾಯ್ತಂದೆಯರ ಮಾತನ್ನು ಉಲ್ಲಂಘಿಸುವವರಲ್ಲ, ತಮ್ಮ ಹೃದಯದ ಸೆಳೆತಕ್ಕೆ ಬೆಲೆಗೊಟ್ಟವರು. ಎರಡು ಪೀಳಿಗೆಗಳ ನಡುವೆ ಇರುವುದು ಅಂತರವಲ್ಲ, ಬೆಸೆಯುವ ಪ್ರೀತಿಸೇತು. ಹೀಗಾಗಿ ಇಲ್ಲಿಯ ಪಾತ್ರಗಳಲ್ಲಿ ಅಂತಸ್ತಿನ ಭೇದವೂ ಇಲ್ಲ, ವರ್ಗತಾರತಮ್ಯವೂ ಇಲ್ಲ, ಜಾತಿಭೇದವೂ ಇಲ್ಲ. ಇದೊಂದು ಜಾತ್ಯತೀತ ವರ್ಗಾತೀತ ಪ್ರೇಮದ ಕತೆ. ಇಲ್ಲಿ ಮನುಷ್ಯರಿದ್ದಾರೆ, ಗಂಧರ್ವರಿದ್ದಾರೆ, ಅಪ್ಸರೆಯರಿದ್ದಾರೆ, ಆದರೆ ಅವರೆಂದೂ ಇನ್ನೊಬ್ಬರ ಪ್ರೇಮಸಂಬಂಧದಲ್ಲಿ ಈ ತಾರತಮ್ಯ ನುಸುಳಗೊಡರು. ಪ್ರೇಮದ ಅಂತಹ ದಿವ್ಯಸ್ವರೂಪವನ್ನು ಕವಿಪ್ರತಿಭೆ ಗುರುತಿಸಿದೆ. ಬಾಣನ ಕಾಲದಲ್ಲಿ (ಕ್ರಿಶ ಏಳನೆಯ ಶತಮಾನದ ಮೊದಲರ್ಧ) ಆ ಮುಂದೆ ಆದಂತೆ ಜಾತಿ ಕಟ್ಟುಪಾಡುಗಳು

ತೀವ್ರವಾಗಿರಲಿಲ್ಲವೇನೋ. (ಆದರೆ ನಾಗವರ್ಮನ ಕಾಲಕ್ಕೆ ಜಾತಿ ಕಟ್ಟುಪಾಡುಗಳು ಅನುಲ್ಲಂಘನೀಯವಾಗಿತ್ತು). ಅಥವಾ ಗಂಡುಹೆಣ್ಣಿನ ನಡುವಣ ಪ್ರೇಮವು ಎಲ್ಲ ನಿಯಮಗಳಿಗೂ ಅತೀತವಾದುದು ಎಂಬುದು ಕವಿಪ್ರತಿಭೆಯ ಕಾಣ್ಕೆಯೇನೋ. ಇದೊಂದು ಬಗೆಯಲ್ಲಿ ಮಾನವಾತೀತ ಪ್ರೇಮಕಥಾನಕವಾದ್ದರಿಂದ ನಾಗವರ್ಮ ಬ್ರಾಹ್ಮಣನಾದರೂ ಕನ್ನಡಿಸಲು ಈ ಕಾವ್ಯವನ್ನು ಆಯ್ಕೆ ಮಾಡಿಕೊಂಡಿರಬಹುದು.

ಇಲ್ಲಿ ಶಾಪದ ಪ್ರಸಂಗಗಳಿವೆ, ಆದರೆ ಅವುಗಳು ದ್ವೇಷಪ್ರೇರಿತವಲ್ಲ. ಮಹಾಶ್ವೇತೆ ವೈಶಂಪಾಯನನಿಗೆ ಗಿಳಿಯಾಗೆಂದು ಶಾಪವಿತ್ತುದು ಅವನು ತನ್ನ ಮೂಲಪ್ರೇಮವನ್ನು ತನ್ನ ಚಪಲವಾಕ್ಯಗಳಿಂದ ಕೆಣಕುತ್ತಾನೆಂಬುದೇ ಹೊರತು, ಅವನ ಮೇಲಣ ಸಹಜಕೋಪದಿಂದಲ್ಲ. ಅವನು ಚಂದ್ರಾಪೀಡನ ಗೆಳೆಯನೆಂದು ತಿಳಿದ ಬಳಿಕ ಅವಳು ಅನುಭವಿಸಿದ ಯಾತನೆಯೆಂತಹುದು! ಪುಂಡರೀಕನು ವಿರಹಸಂಕಟವನ್ನು ಅನುಭವಿಸುವ ಸನ್ನಿವೇಶದಲ್ಲಿ ತನ್ನನ್ನು ಕಂಡು ನಗುತ್ತಿರುವಂತೆ ತೋರಿದ ಚಂದ್ರನಿಗೆ ಶಾಪನೀಡುವ ಪ್ರಸಂಗ ನೋಡೋಣ: ಅಲ್ಲಿ ಚಂದ್ರನೇನೂ ನಗುತ್ತಿರಲಿಲ್ಲ, ಆದರೆ ತನ್ನ ಅಂತರ್ಯದ ಸಂಕಟ ಅವನು ಶಾಪ ಕೊಡುವಂತೆ ಮಾಡಿತು, ಚಂದ್ರನೂ ನೀನೂ ಜೊತೆಯಾಗಿ ಹುಟ್ಟು ಎಂದು ಮರುಶಾಪವಿತ್ತನಲ್ಲ, ಅದರ ಫಲಿತವೇನು, ಗೆಳೆಯರಿಬ್ಬರೂ ಜನ್ಮಾಂತರದಲ್ಲೂ ಜೊತೆಯಾಗಿ ಇರುವಂತಾದುದು! ಅಲ್ಲದೆ ಚಂದ್ರ ಪುಂಡರೀಕ ದೇಹವನ್ನು ಮರಳಿ ಜೀವ ತಾಳುವವರೆಗೂ ರಕ್ಷಿಸಿದ, ಆಯುಷ್ಕಾಮಯಾಗವನ್ನು ಮಾಡುವಂತೆ ಕಪಿಂಜಲನ ಮೂಲಕ ಶ್ವೇತಕೇತುವಿಗೆ ಹೇಳಿಕಳಿಸಿದ. ವೈಮಾನಿಕನನ್ನು ದಾಟಿಕೊಂಡು ಹೋದ ಕಪಿಂಜಲನಿಗೆ ಶಾಪವಿತ್ತ ವೈಮಾನಿಕನು ಅವನು ಚಂದ್ರಾಪೀಡನ ಕುದುರೆಯಾದ ಇಂದ್ರಾಯುಧವಾಗಿ ಹುಟ್ಟಲು ಕಾರಣನಾದ. ಶಾಪವಿದ್ದರೂ ಅವುಗಳ ಪರಿಣಾಮ ಶುಭಕಾರಕವೇ.

ಪುಂಡರೀಕನ ಅತೀವ ವಿರಹದಿಂದಾಗಿ ಅವನ ದೇಹದಿಂದ ಜೀವವೇನೋ ಹೋಯಿತು; ಆದರೆ ಅದು ಮಹಾಶ್ವೇತೆಯ ಮೋಹವನ್ನು ಪಕ್ವಗೊಳಿಸಿ ಪ್ರೇಮವಾಗುವಂತೆ ಮಾಡುವ ಸಾಧನವಾಯಿತು. ಹಾಗೆಯೇ ಚಂದ್ರಾಪೀಡನ ದೇಹದಿಂದ ಹೋದ ಜೀವ. ತಮ್ಮ ನಲ್ಲರು ಸತ್ತರೆಂದು ಭಾವಿಸಿದ ಮಹಾಶ್ವೇತೆ ಕಾದಂಬರಿಯರಿಬ್ಬರೂ ಸಹಗಮನಕ್ಕಾಗಿ ಸಿದ್ಧರಾಗುತ್ತಾರೆ; ಅಂದರೆ ಕಂಡ ಕ್ಷಣದಿಂದಲೇ ಅವರು ತಮ್ಮ ಗಂಡಂದಿರೆಂಬ ಭಾವನೆ ಹೊಂದುತ್ತಾರೆ. ಮದುವೆ ಎಂಬುದು ಪ್ರೇಮಾಂಕುರವಾಗುವ ಗಳಿಗೆಯೇ ಹೊರತು ಶಾಸ್ತ್ರಾನುಗುಣವಾದ ಮುಹೂರ್ತಾವಲಂಬಿಯಲ್ಲ. ಹೀಗೆ ಇಲ್ಲಿನ ಸಂಬಂಧಗಳು ಮಾನವಕೃತ ಕೃತಕ ಬಂಧಗಳಿಂದ ಮುಕ್ತವಾದವು. ಇಂಥ ಸ್ಥಿತಿ ಇದ್ದರೆ ಎಷ್ಟು ಚಂದ ಅನ್ನಿಸುವಂಥದು! ಹಾಗಾಗಿ ಇಲ್ಲಿನದು ವಾಸ್ತವಸತ್ಯವಲ್ಲ, ಆದರ್ಶಸ್ಥಿತಿ. ಇಲ್ಲಿನ ಪ್ರೇಮ ಮುಕ್ತವಾದುದು, ಆದರೆ ನಿಯಂತ್ರಿತವಾದುದು, ಆಳವಾದುದು. ಆಳಗೊಂಡ ಪ್ರೇಮಕ್ಕೆ ಚ್ಯುತಿ ಬಾರದಂತೆ ಘಟನೆಗಳೆಲ್ಲ ಜರುಗಿ ಕೊನೆಗೆ ಎರಡೂ ಜೋಡಿಗಳು ಒಂದಾಗುತ್ತವೆ. ಇಲ್ಲಿನ ಪ್ರೇಮಿಗಳು ಜನ್ಮಾಂತರಗಳಷ್ಟು ದೀರ್ಘಕಾಲ ವಿರಹ ಅನುಭವಿಸಬೇಕು; ಅದಕ್ಕೆ ಕಾರಣ ಒಗರಾದ ಕಾಮ ಸಿಹಿಯಾದ ಪ್ರೇಮವಾಗಿ ಮಾರ್ಪಡಲು. ಆ

ಸಂಧಿಕಾಲದ ನೋವೇ ತಪಸ್ಸು; ಇಂಥ ಪ್ರೇಮದ ಸನ್ನಿವೇಷದಲ್ಲಿ ವಿರಹದ ನೋವಿಗಿಂತ ಮಿಗಿಲಾದ ತಪಸ್ಸಿರಬಹುದೇ; 'ತಪಕೆ ಬೇರೆ ಕೋಡೆರಡೊಳವೇ?' ಇಲ್ಲಿನ ಜನ್ಮಾಂತರವೆಂಬುದು ಸಾಂಕೇತಿಕವಾಗಿ ಆ ಸ್ಥಿತಿಯ ಸ್ವರೂಪವರ್ಣನೆಯಾಗಬಹುದು. ಅಂದರೆ ಅತಿಮಾನುಷ ಆವರಣ–ಘಟನೆಗಳ ಸಾಂಕೇತಿಕತೆಯನ್ನು ಸೂಕ್ತವಾಗಿ ಅರ್ಥವಿಸಿದಾಗ ಕಾವ್ಯದ ಹೊಸ ಹೊಳಪು ಗೋಚರಿಸುತ್ತದೆ. ಗಿಳಿಯಾಗುವುದು ಎಂದರೆ ಗಿಳಿಯೇ ಆಗುವುದು ಎಂದಾಗದೆ, ಗಿಳಿಯಂತೆ ಅಸಹಾಯಕವಾದ, ರೆಕ್ಕೆಯಿದ್ದರೂ ಹಾರಲಾಗದ ಆದರೆ ಬಲಿತಾಗ ಹಾರಬಹುದಾದ, ಅಂತಹ ಹಂತ ಬರುವುದು ನಿಶ್ಚಿತವಾದರೂ ಯಾವಾಗ ಎಂಬುದು ನಿಶ್ಚಿತವಿಲ್ಲದಿರುವ ಪರಿಸ್ಥಿಯಲ್ಲಿ ಬೇಯುವ ಮನಸ್ಸಿನ ಸಂಕೇತವಾಗಬಹುದು. ಆದರೆ ಹೀಗೆ ವಿವರಿಸಿಬಿಟ್ಟರೆ ಕಾವ್ಯ ಹೃದಯಕ್ಕೆ ಬಾರದು.

ಈ ಕತೆಯ ಸ್ವರೂಪವನ್ನು ಗಮನಿಸಿದರೆ ಜಾನಪದಮೂಲ ಇದಕ್ಕಿರಬಹುದು ಎನಿಸುತ್ತದೆ. ಸಂಸ್ಕೃತದ ಅನೇಕ ಕಾವ್ಯಗಳಿಗೆ ವಸ್ತು ಸಿಕ್ಕಿರುವುದು 'ಬೃಹತ್ಕಥೆ' ಮತ್ತು 'ಕಥಾಸರಿತ್ಸಾಗರ'ದಿಂದ. ಅಲ್ಲಿರುವುದು ಬಹುತೇಕ ಕಲ್ಪಕ ಕತೆಗಳು. ಕಾದಂಬರಿಯ ಗ್ರಾಂಥಿಕ ಮೂಲ ಯಾವುದೇ ಇರಲಿ, ಅದಕ್ಕೂ ಜಾನಪದ ಕಥಾಕಣಜವೇ ಆಕರವಾಗಿರುವಂತೆ ತೋರುತ್ತದೆ. ಯಾಕೆಂದರೆ, ಕಾದಂಬರಿ ಕತೆಯ ಗೋಜಲು ವಿನ್ಯಾಸ, ಪ್ರಾಣಿ–ಮನುಷ್ಯ ಪರಸ್ಪರ ರೂಪಪರಾವರ್ತನ, ಶಾಪ–ಅನುಗ್ರಹ ಇಂಥವುಗಳೆಲ್ಲ ಜಾನಪದಸಂಪ್ರದಾಯವನ್ನು ನೆನಪಿಸುತ್ತವೆ. ಇಂಥ ಕಥೆಗಳು ಸಾಂಕೇತಿಕವಾದವು; ಅವುಗಳಿಗೆ ಅರ್ಥ ಹೇಳುವುದಕ್ಕಿಂತ ಅವುಗಳ ಸಂದೇಶವನ್ನು ಅನುಭವಿಸಿ ಎದೆಗೆ ತಂದುಕೊಳ್ಳುವುದು ಆವಶ್ಯಕ. ಕತೆಯ ಅರ್ಥವಲ್ಲ ಮುಖ್ಯವಾದುದು, ಅದು ತಂದುಕೊಡುವ ಅನುಭವ. (ಅರ್ಥವಿಲ್ಲ, ಸ್ವಾರ್ಥವಿಲ್ಲ, ಬರಿಯ ಭಾವಗೀತ!) ಕೇಳಿದಾಗಲೇ ಇಂಥ ಕತೆಗಳು ಎದೆಯನ್ನು ತಾಗುತ್ತವೆ. ಜಾನಪದ ಮನಸ್ಸಿಗೆ ಇವೆಲ್ಲ ನೇರವಾಗಿ ಸಂವಹಿಸುತ್ತವೆ. ಒಟ್ಟಾರೆ ಗಂಡುಹೆಣ್ಣುಗಳ ನಡುವಣ ಆಕರ್ಷಣೆಯ ನೆಲೆಗಳನ್ನು ಚಿತ್ರಿಸುವ ಈ ಕತೆಯೇ ಮನಮುಟ್ಟುವಂಥದು. ಬಾಣ ಅದನ್ನು ಮತ್ತಷ್ಟು ಹರಿತವಾದ ಕಲ್ಪನೆಯ ಬಣ್ಣದಿಂದ ಮಿರುಗುಗೊಳಿಸುತ್ತಾನೆ. ಕವಿಯೊಬ್ಬನ ಕೌಶಲವಿರುವುದು ಅವನು ಏನು ಹೊಸದನ್ನು ಹೇಳುತ್ತಾನೆ ಎಂಬುದರಲ್ಲಲ್ಲ, ಎಷ್ಟು ತಾಜಾ ಆಗಿ ಅದನ್ನು ನಿರೂಪಿಸುತ್ತಾನೆ ಎಂಬುದರಲ್ಲಿ. 'ನವ್ಯಂ ಕಾವ್ಯಂ ಭವತಿ ಗ್ರಥನಕೌಶಲಾತ್' ಎಂಬ ಮಾತೇ ಇದೆಯಲ್ಲ. ಹೊಸತಾಗಿ ಕಟ್ಟುವ ಕ್ರಮದಲ್ಲಿಯೇ ಕವಿಯ ಪ್ರತಿಭೆ ಅಡಗಿರುವುದು. ಆ ದೃಷ್ಟಿಯಿಂದ ಕಾದಂಬರಿ ಅತ್ಯಂತ ಹೃದ್ಯವಾದ, ಸಕಲಜನಪ್ರಿಯವಾದ ರಚನೆ. ಹೀಗಾಗಿಯೇ ಅದಕ್ಕೆ ಸಂಸ್ಕೃತದಲ್ಲಿ ಮಾನ್ಯತೆಯ ಸ್ಥಾನ ಸಿಕ್ಕಿರುವುದು. ಕನ್ನಡ ಕವಿ ನಾಗವರ್ಮನ ಪುನಾಸೃಷ್ಟಿ ಸ್ವತಂತ್ರ ಕಾವ್ಯದ ಹೊಸತನವನ್ನೆಲ್ಲಿಯೂ ಬಿಟ್ಟುಕೊಡುವುದಿಲ್ಲ. ಇಬ್ಬರ ಕೈಚಳಕದಿಂದಾಗಿ ಮೂಲದಲ್ಲಿಲ್ಲದ ಇಡಿತನ ಕನ್ನಡದಲ್ಲಿ ಕಾಣುವುದು ಒಂದೇ ಕೈವಾಡವಿರುವುದರಿಂದ, ಮೂಲವನ್ನು ಗ್ರಹಿಸಿ ಕನ್ನಡ ಪದ್ಯವಾಗಿಸುವ ಕೌಶಲದಿಂದ.

ವಿವೇಚನಾಯುತವಾಗಿ ಕಥಾನುಗುಣವಾದ ವರ್ಣನೆಗಳನ್ನು ತಂದಿರುವುದರಿಂದ ಮತ್ತು ಭಾವಾನುಗುಣವಾದ ಹದವಾದ ಭಾಷೆಯ ಬಳಕೆಯಿಂದ.

ಇಂಥ ಕಾವ್ಯಕ್ಕೆ ಮಿತಿಗಳು ಇಲ್ಲವೆಂದಲ್ಲ, ಇರುತ್ತವೆ. ಇಲ್ಲಿಯ ಅನುಭವವಲಯ ಬಹು ಸೀಮಿತವಾದದ್ದು; ಇಲ್ಲಿನದು ಯೌವನದಲ್ಲಿನ ಗಂಡು-ಹೆಣ್ಣುಗಳ ಸಹಜ ಆಕರ್ಷಣೆಯ ಕಾಮನಬಿಲ್ಲಿನ ಜಗತ್ತು. ಅಷ್ಟರ ಮಟ್ಟಿಗೆ ಮಾತ್ರ ಅದರ ವ್ಯಾಪ್ತಿ; ಆ ಹೊರಗಿನ ಬದುಕಲ್ಲ. ಇದೆಷ್ಟೇ ಮುಖ್ಯವಾದರೂ, ಮೂಲಭೂತವಾದರೂ ಬದುಕು ಇಷ್ಟೇ ಅಲ್ಲವಲ್ಲ. ಪಾತ್ರಗಳು ಇಲ್ಲಿ ಅನುಭವಿಸುವ ಅನುಭವಗಳೆಲ್ಲ ಈ ಆಕರ್ಷಣೆಯ ಸುತ್ತಲೂ ಇರುವ ಅದರ ವಿವಿಧ ಛಾಯೆಗಳವು, ಆದರೆ ಇಡೀ ಬದುಕು ಅದಕ್ಕೆ ಹೊರತಾಗಿ ಮಹಾವಿಸ್ತಾರವಾದ ವಲಯವನ್ನೊಳಗೊಂಡುದು. ಇಲ್ಲಿನ ವಿರಹದುಃಖ ಬೇರೆ; ವಿಶಾಲ ಬದುಕಿನ ದುಃಖದ ಪರಿಗಳು ಬೇರೆ; ಇಲ್ಲಿನ ಸಂತಸದ ರೀತಿಗಿಂತ ಆ ಜಗತ್ತಿನ ಸಂತೋಷದ ಕ್ಷಣಗಳ ಅನುಭವ ಭಿನ್ನ. ಇಲ್ಲಿಲ್ಲದ ಅಸಂಖ್ಯಾತ ಭಾವಕ್ಷಣಗಳು ವಿಶಾಲ ಬದುಕಿನಲ್ಲಿ ವ್ಯಕ್ತಿಯೊಬ್ಬನಿಗೆ ಉದ್ದಕ್ಕೂ ಅನುಭವಕ್ಕೆ ಬರುತ್ತವೆ; ಇಲ್ಲಿನ ತಪಸ್ಸಿನ ರೂಪ ಬೇರೆ, ಮನುಷ್ಯ ತನ್ನ ಜೀವನವಿಡೀ ಒಳಗೊಳ್ಳಬೇಕಾದ ತಾಪದ ಬಗೆಗಳು ಬೇರೆ. ಪ್ರೇಮಿಗಳ ಪುನಸ್ಸಮಾಗಮದ ಸಾರ್ಥಕ್ಯ ಒಂದು ಬಗೆಯದಾದರೆ, ವ್ಯಕ್ತಿಯೊಬ್ಬನ ಜೀವಿತ ಕಾಲದಲ್ಲಿ ಸಾರ್ಥಕ್ಯಭಾವನೆಯನ್ನು ತಂದುಕೊಡುವ ಕ್ಷಣಗಳ ರೀತಿ ಬೇರೆ. ಅಂದರೆ ಇಲ್ಲಿನ ಪ್ರಪಂಚ ಸೀಮಿತವಾದುದು. ಹೀಗಾಗಿ ಈ ಕಾವ್ಯ ಓದುಗನಲ್ಲಿ ಮಧುರತೆಯನ್ನು, ಸಿಹಿನೋವನ್ನು ಉಂಟುಮಾಡುವುದರಲ್ಲಿ ಸಫಲವಾದರೂ ಜೀವನದ ಅಗಾಧತೆಯ ಸ್ವರೂಪವನ್ನಾಗಲೀ, ಅದರ ಗಾಢತೆಯ ತೀವ್ರತೆಯ ರೀತಿಯನ್ನಾಗಲೀ ಅನುಭವಕ್ಕೆ ತಂದು ಓದುಗನನ್ನು ಅಲುಗಾಡಿಸಿಬಿಡುವಷ್ಟೇನೂ ವ್ಯಾಪಕವಾದುದಲ್ಲ. ಇದು ಕಾವ್ಯದ ಆಶಯವೂ ಅಲ್ಲ, ಓದುಗನ ನಿರೀಕ್ಷೆಯೂ ಅಲ್ಲ. ಆದ್ದರಿಂದಲೇ ನಾವು ಹೇಳಬಹುದಾದ ಮಾತೆಂದರೆ ತನ್ನ ಸೀಮಿತ ಆಶಯವನ್ನು ಸಾರ್ಥಕಗೊಳಿಸಿರುವ 'ಕಾದಂಬರಿ' ಒಂದು ಹೃದ್ಯ ಕೃತಿ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ–ಜೂನ್, ೨೦೧೫

# ೩. ಹರಿಹರನ ಗಿರಿಜಾಕಲ್ಯಾಣ : ಕೆಲವು ಒಳನೋಟಗಳು

–ಡಾ. ಪ್ರಮೀಳಾ ಮಾಧವ್*

ಸಾಹಿತ್ಯ ಕ್ಷೇತ್ರದಲ್ಲಿ ಅಧ್ಯಯನ ಮಾಡತಕ್ಕ ಸಹೃದಯ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಆಸಕ್ತಿ, ಕುತೂಹಲಗಳನ್ನು ಕೆರಳಿಸತಕ್ಕ ಪ್ರಮುಖ ಕ್ಷೇತ್ರಗಳಲ್ಲಿ ತೌಲನಿಕ ಅಧ್ಯಯನವೂ ಒಂದು ಮಾನವಾಂತರ್ಗತ ಭಾವನೆ, ಸಂವೇದನೆಗಳು ದೇಶ. ಕಾಲಾತೀತವಾಗಿ ಸಮಾನಸ್ತರಗಳಲ್ಲಿ ಸ್ಪಂದಿಸುತ್ತವೆಂಬುದನ್ನು ಪ್ರಪಂಚದ ಅನೇಕ ಸಾಂಸ್ಕೃತಿಕ ಅಧ್ಯಯನಗಳು ಸಾಬೀತು ಪಡಿಸಿವೆ.

ಭಾರತದಲ್ಲಿ ಸಂಸ್ಕೃತ ಹಾಗೂ ಇತರ ದೇಶೀ ಭಾಷೆಗಳ ಸಂಬಂಧ ಸುದೀರ್ಘವಾದುದು. ಅನೇಕ ದೇಶೀ ಭಾಷೆಗಳು ತಮ್ಮ ಸಾಹಿತ್ಯ ಸಂವರ್ಧನೆಯ ಶೈಶವ ಕಾಲದಲ್ಲಿ ಭಾರತ ಸಂಸ್ಕೃತಿಯ ತಾಯಿಬೇರಾಗಿರುವ ಸಂಸ್ಕೃತ ಭಾಷಾ. ಸಾಹಿತ್ಯದಿಂದ ಅನೇಕ ಬಗೆಯಲ್ಲಿ ಪೋಷಿತಗೊಂಡಿವೆ. ಕ್ರಮೇಣ ಸಂಸ್ಕೃತ ಸಾಹಿತ್ಯದಿಂದ ವಸ್ತು. ವಿಧಾನಗಳನ್ನು ಆಕರವಾಗಿ ಬಳಸಿಕೊಂಡರೂ ಸ್ವತಂತ್ರವಾದ ಛಾಪಿನಿಂದ ಸತ್ವ. ಶಕ್ತಿಗಳನ್ನು ಮೈಗೂಡಿಸಿಕೊಂಡು ಪ್ರಬಲವಾಗಿ, ಪ್ರಬುದ್ಧವಾಗಿ ಬೆಳೆದಿವೆ.

ಸಂಸ್ಕೃತದಲ್ಲಿ ಕಾಳಿದಾಸನ 'ಕುಮಾರಸಂಭವ', ಕನ್ನಡದಲ್ಲಿ ಹರಿಹರನ 'ಗಿರಿಜಾಕಲ್ಯಾಣ' ಪುರಾಣ ಪ್ರಸಿದ್ಧವಾದ ಕಾಮದಹನ ಮತ್ತು ಶಿವಪಾರ್ವತಿಯರ ವಿವಾಹ ಕತೆಯನ್ನೊಳಗೊಂಡ ಆಯಾಭಾಷೆಗಳಲ್ಲಿ ರಚಿತವಾದ ಪ್ರಪ್ರಥಮ ಉಪಲಬ್ಧ ಕಾವ್ಯ ಕೃತಿಗಳಾಗಿವೆ. ರಾಮಾಯಣ, ಮಹಾಭಾರತ, ಪುರಾಣ, ಜಾನಪದ ಹಾಗೂ ಇನ್ನಿತರ ಮೂಲಗಳಿಂದ ಆರಿಸಿದ ಕಥಾತುಣುಕುಗಳನ್ನು ಕಾವ್ಯ ಶೈಲಿಯಲ್ಲಿ ರಮಣೀಯವಾಗಿಯೂ ರಸಪೂರ್ಣವಾಗಿಯೂ ಎರಕಹೊಯ್ದು ಕಾಳಿದಾಸ 'ಕುಮಾರ ಸಂಭವ'ವೆಂಬ ಅತ್ಯುತ್ತಮ ಕಾವ್ಯ ಶಿಲ್ಪವನ್ನು ಕಂಡರಿಸಿದರೆ ಶಿವಪಾರಮ್ಯವನ್ನು ಸಾರುವ ವಸ್ತು, ವಿವರಗಳನ್ನು ಅನೇಕ ಮೂಲಗಳಿಂದ ಆರಿಸಿಯೂ 'ಕುಮಾರಸಂಭವ'ವನ್ನು

* ನಿವೃತ್ತ ಕನ್ನಡ ಪ್ರಾಧ್ಯಾಪಕರು. ೮೮/ಎ' ಶ್ರೀ ಸದನವಿಠಲ ನಗರ, ಇಸ್ರೋಲೇಔಟ್ ಸಮೀಪ, ಬೆಂಗಳೂರು – ೫೬೦೦೭೮. ಮೊ : ೯೮೪೫೨೧೬೧೦.

ಮೇಲ್ಪಂಕ್ತಿಯಾಗಿಟ್ಟುಕೊಂಡು ಅನುಕರಣೆಯಾಗದಂತೆ ಎಚ್ಚರವಹಿಸಿ, ಹದವರಿತು ಬದಲಾಯಿಸಿ, ಹೊಸದನ್ನು ಸೇರಿಸಿ ಹರಿಹರ 'ಗಿರಿಜಾಕಲ್ಯಾಣ'ವೆಂಬ ಕಾವ್ಯವನ್ನು ರಚಿಸಿದ್ದಾನೆ. 'ಕುಮಾರ ಸಂಭವ' ದಷ್ಟು ಕಲಾವಂತಿಕೆ, ರಸದೃಷ್ಟಿಯಿಲ್ಲದಿದ್ದರೂ ಅದಕ್ಕಿಂತ ಅಧಿಕವಾದ ಅನುಭವ, ದರ್ಶನಗಳನ್ನು ನೀಡುವಲ್ಲಿ ಕವಿ ಸಫಲನಾಗಿದ್ದಾನೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೨-೧೩ನೆಯ ಶತಮಾನಗಳು ಅನೇಕ ಕಾರಣಗಳಿಂದ ಒಂದು ಪ್ರಮುಖ ಘಟ್ಟ. ವಸ್ತು, ಭಾಷೆ, ಬಂಧ ಇತ್ಯಾದಿಗಳಲ್ಲಿ ವೈವಿಧ್ಯಪೂರ್ಣವಾಗಿ ಪ್ರಯೋಗಶೀಲತೆಯನ್ನು ಮೆರೆದ ಕಾಲ. ಈ ಕಾಲದ ಯುಗಪ್ರವರ್ತಕ ಕವಿ ಹರಿಹರ. ೧೩ನೆಯ ಶತಮಾನದ ಕ್ರಾಂತಿಕವಿಯೆನಿಸಿದ ಈತ ಅನೇಕ ಪ್ರಥಮಗಳಿಗೆ ಕಾರಣ ಕರ್ತ. 'ಗಿರಿಜಾಕಲ್ಯಾಣ' ಕಾವ್ಯ ಚಂಪೂಕಾವ್ಯವಾದರೂ ಕವಿಯ ಪ್ರಯೋಗ ಮತ್ತು ಪ್ರಬುದ್ಧ ಮನೋಭಾವದ ಪ್ರತಿಬಿಂಬವನ್ನು ಅದರಲ್ಲೂ ದರ್ಶಿಸಬಹುದು.

ಇಡೀ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ತ್ರೀಪ್ರಾತಿನಿಧ್ಯವನ್ನು ಪಡೆದ ಮೊತ್ತಮೊದಲ ಕಾವ್ಯ 'ಗಿರಿಜಾಕಲ್ಯಾಣ'. ಇಲ್ಲಿನ ಪ್ರಧಾನ ಪಾತ್ರ ಗಿರಿಜೆ. ಶಿವಭಕ್ತನಾದರೂ ಹರಿಹರ ಶಿವನಿಗಿಂತ ಶಿವಾನಿಗೆ ಮೊದಲ ಪ್ರಾಶಸ್ತ್ಯವಿತ್ತಿರುವುದು ಗಮನಾರ್ಹ ವಿಚಾರ. ಇದಕ್ಕೆ ಕಾರಣವನ್ನು ಅರಿಯಬೇಕಿದ್ದರೆ ಆ ಕಾಲದ ಸಾಮಾಜಿಕ ಜನಜೀವನವನ್ನೂ ಕವಿಯ ವೈಚಾರಿಕ ಮನಸ್ಥಿತಿಯನ್ನೂ ಅವಲೋಕಿಸಬೇಕಾಗಿದೆ.

೧೨-೧೩ನೆಯ ಶತಮಾನಗಳು ಬಹುಶಃ ಹಿಂದೆಂದೂ ಇಲ್ಲದಷ್ಟು ಸ್ತ್ರೀ ಸಮಾಜವನ್ನು ಮೂಲೆಗುಂಪಾಗಿಸಿದ ಕಾಲ. ಮಹಮ್ಮದೀಯರ ಆಕ್ರಮಣದ ಫಲವಾಗಿ ಸ್ತ್ರೀ ಸಮುದಾಯದ ಸಂರಕ್ಷಣೆಯ ಕಾಳಜಿ ಇದರ ಹಿನ್ನೆಲೆಯಲ್ಲಿದೆಯೆಂದು ವಾದಿಸಬಹುದಾದರೂ ಇದರಿಂದ ಮಹಿಳೆಯ ಸತ್ವ, ಶಕ್ತಿ, ಸ್ವಾತಂತ್ರ್ಯಗಳಿಗೆ ಬಹಳಷ್ಟು ಬಾಧಕವಾಗಿದೆಯೆಂಬುದನ್ನು ಅಲ್ಲಗಳೆಯುವಂತಿಲ್ಲ. ಇಂಥ ಸಂದರ್ಭದಲ್ಲಿ ವಚನಯುಗದ ಜನಪರ ನಿಲುವನ್ನು ಸ್ತ್ರೀ ಸಮಾನತಾವಾದವನ್ನು ಸಮರ್ಥಿಸಿದ ಹರಿಹರ ಮಹಿಳೆಯರ ಆಶೋತ್ತರಗಳಿಗೆ ಧ್ವನಿಯಾಗುವ ಅಂಶ ನಮಗೆ ಮಹತ್ತರವಾಗುತ್ತದೆ.

'ಗಿರಿಜಾಕಲ್ಯಾಣ' ಹರಿಹರನ ಸ್ತ್ರೀಪರಧೋರಣೆಗೆ ಪ್ರತ್ಯಕ್ಷ ನಿದರ್ಶನವಾಗಿದೆ. ಮೇನಾದೇವಿಯ ಪುತ್ರೀ ದೋಹಳ, ಮಗಳಿಗಾಗಿ ಕೈಗೊಳ್ಳುವ ಅವಳ ತಪಸ್ಸು, ಮಗನಿಗಿಂತ ಮಗಳಲ್ಲಿ ತೋರುವ ಅಕ್ಕರೆ, ತನ್ನಿಚ್ಛೆಯ ಪತಿಯನ್ನು ವರಿಸಬೇಕೆನ್ನುವ ಮಗಳ ಅಭಿಲಾಷೆಯನ್ನು ಈಡೇರಿಸುವ ಹಿಮವಂತನ ಕಾಳಜಿ, ತಪಸ್ವಿ ಶಿವನ ಆರಾಧನೆಯಲ್ಲಿ ಗಿರಿಜೆ ತೋರುವ ಸ್ವಾತಂತ್ರ್ಯ, ಹತಾಶನಾದ ಮನ್ಮಥನಲ್ಲಿ ಧೈರ್ಯೋತ್ಸಾಹಗಳನ್ನು ತುಂಬಿ ತನ್ನ ರಕ್ಷಣೆಯಲ್ಲಿ ಶಿವ ತಪೋಭಂಗಕ್ಕೆ ಕರೆದೊಯ್ಯುವ ಗಿರಿಜೆಯ ಎದೆಗಾರಿಕೆ, ತನ್ನನ್ನು ಧಿಕ್ಕರಿಸಿದ ಶಿವನನ್ನು ತಾನಿದ್ದಲ್ಲಿಗೇ ಕರೆಸುವೆನೆಂಬ ಆತ್ಮ ವಿಶ್ವಾಸ, ವಾದಕ್ಕಿಳಿದ ಕಪಟ ವಟುವನ್ನು ಹೊಡೆಯುವ ಧೈರ್ಯ, ತನ್ನಿಂದಾದ ನಷ್ಟಕ್ಕೆ ಪರಿಹಾರ ಕೊಡಿಸುವೆನೆಂದು ರತಿಗೆ ನೀಡುವ ಆಶ್ವಾಸನೆ, ವಿವಾಹದ ವಿಷಯದಲ್ಲಿ ತೋರುವ ಅಭಿಪ್ರಾಯ ಸ್ವಾತಂತ್ರ್ಯ -ಇವೆಲ್ಲವೂ ಸ್ತ್ರೀ ಪ್ರಾತಿನಿಧ್ಯಕ್ಕೆ ಪೂರಕವಾದ

ಸಾಕ್ಷಿಗಳಾಗಿವೆ. ಕಾವ್ಯದ ಪ್ರಧಾನ ಭೂಮಿಕೆಗಳಲ್ಲಿ ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಹರಿಹರ ತನ್ನ ವಿಚಿಕಿತ್ಸಕ ಮನೋಭಾವವನ್ನು ಯಶಸ್ವಿಯಾಗಿ ಅಭಿವ್ಯಕ್ತಿಸಿದ್ದಾನೆ. ಇವು ಯಾವುವೂ 'ಕುಮಾರಸಂಭವ'ದಲ್ಲಾಗಲೀ ಇತರ ಆಕರಗಳಲ್ಲಾಗಲೀ ಕಾಣಿಸದ ಹರಿಹರನದ್ದೇ ಆದ ಹೊಸ ಕಾಣ್ಕೆಗಳಾಗಿದ್ದು ಮಹಿಳಾ ವ್ಯಕ್ತಿತ್ವದ ಉನ್ನತಿಕೆಯ ಅನೇಕ ಮಜಲುಗಳನ್ನು ಪರಿಚಯಿಸುತ್ತವೆ.

ಪಾರ್ವತೀ ಪರಮೇಶ್ವರರ ಸಂಬಂಧದ ವಿಷಯದಲ್ಲೂ ಹರಿಹರನ ಯೋಚನೆ ಕಾಳಿದಾಸನಿಗಿಂತ ಭಿನ್ನವಾಗಿದೆ. ಸಮಾಜದ ಪುರುಷ ಪ್ರಾಧಾನ್ಯ ನಿಲವನ್ನು ಖಂಡಿಸುವ, ಸ್ತ್ರೀ ಪುರುಷ ಸಮಾನತೆ ವಾದವನ್ನು ಸಮರ್ಥಿಸುವ ಒಂದು ಉತ್ತಮ ಪ್ರಣಾಳಿಕೆಯಾಗಿ ಶಿವಶಿವೆಯರ ಸಂಬಂಧವನ್ನು ಯೋಜಿಸಿದ್ದಾನೆ. 'ಕುಮಾರಸಂಭವ'ದಲ್ಲಿ ಓರ್ವ ಮುಗ್ಧ, ವಿಧೇಯ, ಲಾವಣ್ಯವತೀ ವಧುವನ್ನು ಅವಳ ಯೋಗ್ಯತೆಯಿಂದಲೇ ಜಗನ್ಮಾತೆಯಾಗಿಸುವ ರೀತಿ ಕಂಡುಬಂದರೆ 'ಗಿರಿಜಾಕಲ್ಯಾಣ'ದಲ್ಲಿ ದಾಂಪತ್ಯ ಜೀವನದಲ್ಲಿ ಸ್ತ್ರೀ ಪುರುಷರೊಳಗಿರಬೇಕಾದ ಸಮಾನತೆ ಮತ್ತು ಸ್ನೇಹ ಸಂಬಂಧಗಳನ್ನು ಜಗಜ್ಜಾಹೀರುಗೊಳಿಸುವ ಉತ್ಸಾಹ ಕಾಣಿಸುತ್ತದೆ. ಕಾಳಿದಾಸನ ಪಾರ್ವತೀ ಪರಮೇಶ್ವರರು ಜಗನ್ಮಾತಾಪಿತರುಗಳಾಗಿದ್ದರೂ ಆ ಪದವಿಯಲ್ಲಿ ಅಲಂಕೃತಳಾದ ಪಾರ್ವತಿ ಅತ್ಯಂತ ದುರ್ಭರವಾದ ಕಷ್ಟ ಸಂಕಷ್ಟಗಳನ್ನು ಅನುಭವಿಸಿ ಮೇಲಕ್ಕೇರಿದವಳು. ಹರಿಹರನ ಗಿರಿಜೆ ಶಿವನ ವಧುವಲ್ಲ; ಆಕೆ ಹರನದಾಸಿ, ಹರನ ಅರ್ಧಾಂಗಿ, ತಪಸ್ಸಿನ ಫಲಶ್ರುತಿಯಾಗಿ ಅವಳು ಜಗನ್ಮಾತೆಯಾದವಳಲ್ಲ. ಪಾರ್ವತೀ ಪರಮೇಶ್ವರರು ಮೊದಲೇ ಅವಿಭೇದ ಪ್ರಕೃತಿಗಳೆಂದೂ ಭಕ್ತರ ಇಷ್ಟಾರ್ಥ ಪೂರೈಕೆಗಾಗಿ, ಲೋಕದ ಕ್ಷೇಮಕ್ಕಾಗಿ ತಾತ್ಕಾಲಿಕವಾಗಿ ಅಗಲಿದವರೆಂದೂ ಕವಿ ಹೇಳುತ್ತಾನೆ. ನಾರದ ಮಹರ್ಷಿ ಮೇನಾದೇವಿಯೊಂದಿಗೆ ಆಡುವ ಮಾತುಗಳನ್ನು ಪರಿಭಾವಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. 'ಮೇನೆಯೆ ನಿನ್ನ ತಪಕ್ಕತಿ ಮಾನಿ ಮಹಾದೇವಿ ಕರುಣದಿಂ ನಿನ್ನುದರ ಸ್ಥಾನದೊಳಂ ಜನಿಯಿಸೆ ಸುಜ್ಞಾನಿಯ ನೆಲೆ ಪುತ್ರಿಯೆಂಬರೇ ಧಾರಿಣಿಯೊಳ್' (ಆ.೪. ಪ.೫೧) 'ದಕ್ಷನ ಶಿವನಿಂದೆಗೆ ಕಮಲಾಕ್ಷಿ ಮಹಾದೇವಿ ಸೆಡೆದು ನಿಜಯೋಗದೊಳಿಂ ತಕ್ಷಯ, ನಿಧಿ ಮೇನೆಗೆ ಕರುಣೇಕ್ಷಣೆಯಾಗುತ್ತೆ ಬಂದುದಂ ಭಾವಿಸಿರೇ' (ಆ.೪, ಪ.೫೩) 'ಅದುಕಾರಣದಿಂ ಮುನ್ನಮೆ ಮೊದಲಿಂ ಹರನರಸಿ ಗಿರಿಶನರ್ಧಾಂಗಿ ವರಪ್ರದೆ ವರನೀಶ್ವರನೀಕೆಗೆ ಮುದದಿಂ ಶಿವನಲ್ಲಿಗಿರದೆ ಕಳಿಪುಪುದುಚಿತಂ (ಆ.೪. ಪ.೫೪) ಇದನ್ನು ಸಮರ್ಥಿಸುವಂತೆ ಪಾರ್ವತಿ ತಪಸ್ವಿಯಾದ ಶಿವನಲ್ಲಿ ಪತ್ನಿಗುಚಿತವಾದ ಸಲಿಗೆ, ಅಧಿಕಾರ, ಕೋಪ, ತಾಪಗಳನ್ನು ತೋರಿಸುತ್ತಾಳೆ. ಇದು ಹರಿಹರ ಉದ್ದೇಶಪೂರ್ವಕವಾಗಿಯೇ ಯೋಜಿಸಿಕೊಂಡ ಬದಲಾವಣೆ. ಈ ಅಂಶವನ್ನು ಕಾವ್ಯದ ಉದ್ದಕ್ಕೂ ಕವಿ ಅಲ್ಲಲ್ಲಿ ನಿರೂಪಿಸುತ್ತ ಸಾಗುತ್ತಾನೆ. ಆದರೆ ಪಾರ್ವತಿಯ ಪಾತ್ರವನ್ನು 'ಕುಮಾರಸಂಭವ'ದ ಹಿನ್ನೆಲೆಯಲ್ಲಿ ಇಟ್ಟು ತೂಗಿನೋಡುವ ವಿಮರ್ಶಕರು 'ಗಿರಿಜಾಕಲ್ಯಾಣ'ದ ಪಾರ್ವತಿಯ ವರ್ತನೆಯನ್ನು ಅಶ್ಲೀಲ, ಅಸಭ್ಯವೆಂದು ಟೀಕಿಸುತ್ತಾರೆ. ಕಾವ್ಯಗಳೆರಡರಲ್ಲೂ ಈಶ್ವರನ ತಪಸ್ಸಿನ ವಿವರಗಳಿವೆ. ಆದರೆ ಕಾಳಿದಾಸ ಶಿವನ ತಪಸ್ಸಿನ ಕಾರಣವನ್ನು ಅಸ್ಪಷ್ಟವಾಗಿಸಿದರೆ ಹರಿಹರ ಅದನ್ನು ಸ್ಪಷ್ಟಮಾತುಗಳಲ್ಲಿ

ಉಲ್ಲೇಖಿಸುತ್ತಾನೆ. ಇದು ಪಾರ್ವತಿಗೆ ಕಪಿ ನೀಡಿದ ಮಹತ್ವಕ್ಕೆ ಪ್ರತೀಕವಾಗಿಯೇ ಇದೆ.

'ಗಿರಿಸುತೆ ಬಳೆವನ್ನವರಂ ಹರನಿರ್ದಪನೊಲ್ದು ಹೇಮಕೂಟಸ್ಥಳದೊಳ್.....' (ಆ.೪, ಪ.೫೫) 'ಸತಿಕಾಮಿತ ಮನದಿಂ ಪಾರ್ವತಿ ಬಳೆವನ್ನೆವರಮಿರ್ಪ ತಪಂ' (ಆ.೭, ಪ.೭೧)- ಹೀಗೆ ಒಮ್ಮೆ ನಾರದನಿಂದ, ಇನ್ನೊಮ್ಮೆ ಮನ್ಮಥನಿಂದ ಈ ಮಾತುಗಳನ್ನು ಹೇಳಿಸುತ್ತಾನೆ. ಆದ್ದರಿಂದ ಪಾರ್ವತೀ ಪರಮೇಶ್ವರರ ಅವಿನಾಭಾವ ಸಂಬಂಧವನ್ನು ಅರ್ಧನಾರೀಶ್ವರ ತತ್ತ್ವದ ಹಿನ್ನೆಲೆಯಲ್ಲಿ ಅರ್ಥವಿಸಿದರೆ ಪಾರ್ವತಿಯ ವರ್ತನೆಯಲ್ಲಿ ಟೀಕೆಗೆ ಅವಕಾಶವಿಲ್ಲ. ಮಾತ್ರವಲ್ಲ, ಶಿವನು ಮಾಡುವ ತಪಸ್ಸು ಶಿವೆಗಾಗಿ ಎಂಬ ಅಭಿಪ್ರಾಯವೂ ಸಾಮಾಜಿಕ ನೆಲೆಯಲ್ಲಿ ಸ್ತ್ರೀ ಶಕ್ತಿಯ ಔನ್ನತ್ಯಕ್ಕೆ ದ್ಯೋತಕವಾಗುತ್ತದೆ.

ಮನ್ಮಥನ ಪಾತ್ರಕಲ್ಪನೆಯಲ್ಲೂ ಕವಿ ವಿನೂತನ, ವಿಚಿಕಿತ್ಸಕ ಬುದ್ಧಿಮತ್ತೆಯನ್ನು ಪ್ರಚುರ ಪಡಿಸಿದ್ದಾನೆ. ಇಲ್ಲಿ ಮನ್ಮಥ 'ಕುಮಾರ ಸಂಭವ'ದಂತೆ ದೇವೇಂದ್ರನ ಸೇವಕನಾಗಿ ಆತನು ಸ್ಮರಿಸಿದಾಗ ಪ್ರತ್ಯಕ್ಷನಾಗಿ, ಅಂಜಲಿಬದ್ಧನಾಗಿ ನಿಲ್ಲುವ ದೀನನಲ್ಲ. ಆತ ವಿಷ್ಣುಸುತ; ಮಾತ್ರವಲ್ಲ ಓರ್ವ ರಾಜ. ರಾಜೋಚಿತವಾದ ಆತನ ದರ್ಪ, ದೌಲತ್ತುಗಳನ್ನು, ಭೋಗ ಭಾಗ್ಯಗಳನ್ನು ಹರಿಹರ ಅರ್ಥಪೂರ್ಣವಾಗಿ ವರ್ಣಿಸಿದ್ದಾನೆ. ದೇವಕಾರ್ಯಕ್ಕೆ ದೇವಗುರುವಿನಿಂದಲೇ ಆಮಂತ್ರಿತನಾಗುವ ಗೌರವಾನ್ವಿತ ವ್ಯಕ್ತಿ ಮನ್ಮಥ, ದೇವದೇವತೆಗಳ ಸಭೆಯಲ್ಲಿ ಅವರ ಸಮಕ್ಷಮ ಸರಿಸಮನಾಗಿ ಮಾತನಾಡುವ ಅಧಿಕಾರ, ಯೋಗ್ಯತೆ ಅವನಿಗಿವೆ. ವಿಷ್ಣುವಿನ ಸಲಹೆಯನ್ನು ಖಂಡಿಸುವ, ಟೀಕಿಸುವ ಅವನ ಎದೆಗಾರಿಕೆ ಹಾಗೂ ಸರ್ವಲೋಕ ಹಿತಾರ್ಥವಾಗಿ ಕೈಗೊಳ್ಳುವ ಆತ್ಮತ್ಯಾಗದ ನಿರ್ಣಯ ಅತ್ಯಂತ ಉತ್ಕೃಷ್ಟವಾಗಿಯೂ, ಅನನ್ಯವಾಗಿಯೂ ಚಿತ್ರಿತವಾಗಿವೆ. 'ಕುಮಾರಸಂಭವ'ದ ಅತಿವಿಧೇಯ, ಅತಿಕುಟಿಲ, ಅತಿಧೂರ್ತ, ಶಾಪಗ್ರಸ್ತ ಮನ್ಮಥನನ್ನು ಸರ್ವಾಂಗವಾಗಿ ಶುದ್ಧೀಕರಣಗೊಳಿಸಿ ಸೈದ್ಧಾಂತಿಕ ನೆಲೆಯಲ್ಲಿ ಕಳೆಯೇರುವಂತೆ ಮಾಡಿದ ಕೀರ್ತಿ ಹರಿಹರನಿಗೆ ಸಲ್ಲುತ್ತದೆ.

ಈ ಭಾಗದಲ್ಲಿ ವಿಚಾರಿಸಬೇಕಾದ ಒಂದು ಅಂಶವಿದೆ. ಮನ್ಮಥ ವಿಷ್ಣುವಿನ ಮಗನಾಗಿರುವಾಗಿ ಶಿವತಪೋಭಂಗದ ಪ್ರಾಣಾಪಾಯಕರ ಜವಾಬ್ದಾರಿಯನ್ನು ವಿಷ್ಣುವೇ ಮಗನಿಗೆ ಒಪ್ಪಿಸುವುದೂ ಅದಕ್ಕೆ ಮನ್ಮಥ 'ಹೆಜಿರ ಮಕ್ಕಳನಿಕ್ಕಿ ನೆಲೆಯನರಿವುದ ನಿಳೆಯೊಳಗೆನ್ನಲ್ಲಿ ಮಾಳ್ಪರೇ ಕಮಲಾಕ್ಷಾ' ಎಂದು ಪ್ರಶ್ನಿಸುವುದೂ ಸಹೃದಯರ ಆಕ್ಷೇಪಕ್ಕೆ ಒಳಗಾಗಿದೆ. ಆದರೆ ಮನ್ಮಥನ ಸ್ಥಾನ ಗೌರವ, ವಹಿಸಬೇಕಾದ ಕಾರ್ಯಭಾರ, ನೈತಿಕ ಬದ್ಧತೆಗಳನ್ನು ಮನದಂದರೆ ಈ ಆಕ್ಷೇಪಕ್ಕೆ ಆಧಾರವಿಲ್ಲ. ದೇವಾನುದೇವತೆಗಳು ತಮ್ಮಿಂದಾಗದ ಕೆಲಸವನ್ನು ಓರ್ವ ಆಳಿನಿಂದ ನಿರೀಕ್ಷಿಸುವುದೂ ಅದೂ ಆತ ಅಹಂಕಾರ ಆವೇಶಗಳಿಂದ ಬಾಯಿತಪ್ಪಿ ತನ್ನೊಡೆಯನನ್ನು ಮೆಚ್ಚಿಸುವ ಭರದಲ್ಲಿ 'ಕುರ್ಯಾಂ ಹರಸ್ಯಾಪಿಸಾಕ ಪಾಣೇ ಧೈರ್ಯಚ್ಯುತಿಂ' (ಪಿನಾಕ ಪಾಣಿಯಾದ ಹರನ ಧೈರ್ಯವನ್ನಾದರೂ ಕೆಡಿಸಬಲ್ಲೆ) ಎಂದು ಆಡಿದ ಮಾತಿನಲ್ಲೇ ಅವನನ್ನು ಕಟ್ಟಿಹಾಕಿ ಜವಾಬ್ದಾರಿಯನ್ನು ಹೊರಿಸುವುದೂ ನ್ಯಾಯಸಮ್ಮತವಲ್ಲ. 'ಕುಮಾರಸಂಭವ'ದ ಈ ಕುಟಿಲ ರೀತಿಗಿಂತ 'ಕೇಳೆಲೆ ದರ್ಪಕ ತಾರಕನೂಳಿಗದಿಂದುರಗ ಮರ್ತ್ಯ ನಿರ್ಜರಲೋಕಂ

ಗೋಳುಂಡೆಗೊಳುತಮಿದೆ ವೀರಾಳಾಪರಿಗೊಳ್ಳದಸುರನತ್ಯಧಿಕ ಬಲಂ' (ಆ.೭ ಪ. ೨೧) 'ಹರನತ್ಯಧಿಕ ತಪೋವಿಸ್ತರ ಮನನಾಗಿರ್ದಪಂ ಮದನ ತತ್ತಪಮಂ ಕೊರಗಿಸಿ ವರಗಿರಿಸುತೆಯೊಳ್ ನೆರಪಲ್ಲಿಗೆ ನೀನೆ ಬಲ್ಲೆ ನೀನೆ ಸಮರ್ಥಂ' (ಆ.೭, ಪ.೨೩) ಎಂಬ ಗಿರಿಜಾಕಲ್ಯಾಣದ ನೇರನೀತಿ ಹೆಚ್ಚು ಸಮಂಜಸ. ಮನ್ಮಥನ ಉತ್ತರವೂ ಯಥೋಚಿತವಾಗಿದೆ. ತಮ್ಮ ಹಾಗೂ ತಮ್ಮ ಮಕ್ಕಳ ಸುಖಕ್ಕಾಗಿ ಪರರ ಮಕ್ಕಳನ್ನು 'ಬಾವಿಗೆ ತಳ್ಳಿ ಆಳನೋಡುವ' ಸ್ವಾರ್ಥಿಗಳು ಎಲ್ಲ ಕಾಲದಲ್ಲೂ ಸಮಾಜ ಸುಧಾರಕರೆಂಬ ಹಣೆ ಪಟ್ಟಿಯನ್ನು ಧರಿಸಿ ಮೆರೆಯುತ್ತಿರುತ್ತಾರೆ. ಕುಮಾರಸಂಭವದ ದೇವೆಂದ್ರ ಮಾಡಿದ್ದೂ ಅದನ್ನೆ. ಆದ್ದರಿಂದ ಸಾಮಾನ್ಯ ಲೋಕರೂಢಿಗಿಂತ ಭಿನ್ನವಾಗಿ ಮಗನನ್ನೇ ಬಲಿಕೊಡುವ ಅಸಾಮಾನ್ಯಕ್ರಿಯೆಯನ್ನು ಮನ್ಮಥ ಇಲ್ಲಿ ಪ್ರಶ್ನಿಸುತ್ತಾನೆ. ತಾರಕನ ಹಾವಳಿಯಿಂದ ತ್ರಿಲೋಕವೆಲ್ಲ ತತ್ತರಿಸುತ್ತಿರುವಾಗ ತ್ರಿಮೂರ್ತಿಗಳೂ ಸೇರಿದಂತೆ ಎಲ್ಲ ದೇವಾನುದೇವತೆಗಳೂ ಸಮಸ್ಯೆಯ ಪರಿಹಾರಕ್ಕೆ ದೇವೇಂದ್ರನೊಬ್ಬನನ್ನೇ ಹೊಣೆ ಮಾಡುವುದೂ ದೇವೇಂದ್ರ ಯಾರೊಂದಿಗೂ ಸಮಾಲೋಚಿಸದೆ ಅದನ್ನು ಆಳಿಗೆ ಒಪ್ಪಿಸುವುದೂ ಸಮಸ್ಯೆಯ ಗಾಂಭೀರ್ಯಕ್ಕೆ ಕುಂದುಂಟಾಗಬಹುದೆಂಬ ಹರಿಹರನ ಶಂಕೆ ಸಹಜವೇ. ಆದ್ದರಿಂದಲೇ ಹರಿಹರ ದೇವತೆಗಳ ಹೋರಾಟ, ಸೋಲು, ಪಲಾಯನ, ಸಮಾಲೋಚನೆಗಳನ್ನು ಅನುಕ್ರಮವಾಗಿ ಸಂಯೋಜಿಸಿ ಅಂತಿಮ ಅಸ್ತ್ರವಾಗಿ ವಿಷ್ಣುವಿನ ಮೂಲಕ ಮನ್ಮಥನನ್ನು ಬಳಸಿಕೊಳ್ಳುತ್ತಾರೆ. ಯಾವ ವೀರಾಲಾಪಕ್ಕೂ ಅವಕಾಶವೀಯದೆ ಕಾರ್ಯಭಾರವನ್ನು ಅರುಹುತ್ತಾರೆ. ತ್ರಿಮೂರ್ತಿಗಳಲ್ಲಿ ಒಬ್ಬನಾದ ಈಶ್ವರನ ತಪೋಭಂಗ ಪರಿಹಾರ ಕಾರ್ಯವನ್ನು ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುವೇ ವಹಿಸಿಕೊಳ್ಳುವುದೂ. ಅದಕ್ಕಾಗಿ ಅನ್ಯರನ್ನು ಬಳಸದೆ ಸ್ವಂತ ಸುತನನ್ನೇ ಬಲಿಕೊಡಲು ನಿರ್ಧರಿಸುವುದೂ ಅದಕ್ಕೆ ಮನ್ಮಥ 'ಸರಳ ಭುವನಮೆನ್ನಿಂ ಪರಮಸುಖದೊಳಿರ್ಪುದು ಗಡಮಾನೆನಿತಜೀವನೆನ್ನ ಹರಣಂ ಘನವೇ ತೆಗೆಯಿಂದೆನೂಜು ತೀವಿತ್ತೆಂದಂ' (ಆ.೭, ಪ.೩೩) ಎಂದು ಉತ್ತರಿಸುವುದೂ ಅತ್ಯಂತ ಉದಾತ್ತವೂ, ಆದರ್ಶವೂ ಆದ ವಿಚಾರವಾಗಿದೆ.

ರತಿಯ ಪಾತ್ರವನ್ನೂ ಪ್ರಸಂಗಾವಧಾನತೆ ಮತ್ತು ತಾತ್ತ್ವಿಕ ತಳಹದಿಯಲ್ಲಿ 'ಕುಮಾರಸಂಭವ'ಕ್ಕಿಂತ ಭಿನ್ನವಾಗಿ ಧ್ವನಿರಮ್ಯವಾಗುವಂತೆ ಹರಿಹರ ಕಂಡರಿಸಿದ್ದಾನೆ. ಇಲ್ಲಿ ರತಿಯೆನ್ನುವುದು ಒಂದು ವ್ಯಕ್ತಿಯಾಗದೆ ಒಂದು ಭಾವಸೆಲೆಯಾಗಿದೆ. ಪಾರ್ವತಿಗೆ ಪರಶಿವನಲ್ಲಿರತಕ್ಕ ಹೃದಯದಾಳದ ಒಲವಿನ ಪ್ರತೀಕವೇ ರತಿ. ಹರನ ಹಣೆಗಣ್ಣಿನ ಬೆಂಕಿಯಲ್ಲಿ ಭಸ್ಮವಾದ ಮನ್ಮಥ ದಹನ ಪ್ರಸಂಗವನ್ನು ಇದೇ ಬಗೆಯಲ್ಲಿ ಪರಿಭಾವಿಸಬೇಕು. ಇಲ್ಲಿ ಮನ್ಮಥನೆಂದರೆ ಈಶ್ವರನ ಕುರಿತಾದ ಪಾರ್ವತಿಯ ಪ್ರಣಯ ಭಾವ ಮತ್ತು ದೈಹಿಕ ಕಾಮನೆಗಳು. ಆತುರಜನ್ಯ ಪ್ರವೃತಿಗಳಾದುದರಿಂದ ಇವು ಶಿವಕೋಪದಲ್ಲಿ ಸುಟ್ಟು ಹೋಗುತ್ತವೆ. ಮನ್ಮಥ ನಾಶವಾದರೂ ರತಿ ಉಳಿದಿದ್ದಾಳೆ. ಅಂದರೆ ಕ್ಷಣಿಕವಾದ ಹಂಬಲ, ದೈಹಿಕ ಬಯಕೆಗಳು ಸುಟ್ಟು ಹೋಗಿವೆಯಲ್ಲದೆ ಪಾರ್ವತಿಯ ಅಂತರಾಳದಲ್ಲಿರುವ ಶಿವನ ಕುರಿತಾದ ಒಲವಿರ ಹಾಗೆಯೇ ಉಳಿದಿದೆ. ಆದರೆ ಆ ಕ್ಷಣಕ್ಕೆ ಅದಕ್ಕೆ ಆಘಾತವಾಗಿದೆ; ಮುಂಗಾಣದೆ ತೊಳಲಿದೆ. ಅದರಿಂದುಂಟಾದ ಹೃದಯ

ತಾಪವೇ ರತಿಯನೋವು. ಆದ್ದರಿಂದ ತನ್ನ ತಪ್ಪನ್ನು ಸರಿಪಡಿಸಿ ತಾಳ್ಮೆ, ಸಹನೆ, ಸಾವಕಾಶದ ಮೂಲಕ ರತಿಗೆ ನ್ಯಾಯವನ್ನು ಅಂದರೆ ತನ್ನ ಶಾಶ್ವತವಾದ ಒಲವರಕ್ಕೆ ಸೂಕ್ತ ಸಮಾಧಾನವನ್ನು ಆಕೆ ನೀಡಬೇಕಾಗಿದೆ. ಆದ್ದರಿಂದಲೇ ರತಿಗಾದ ನಷ್ಟಕ್ಕೆ 'ಕುಮಾರಸಂಭವ'ದ ಅಶರೀರವಾಣಿಯ ಸಾಂತ್ವನಕ್ಕಿಂತ ಪಾರ್ವತಿಯೇ ಪರಿಹಾರವನ್ನು ಯೋಚಿಸುವುದು ಹರಿಹರನ ದರ್ಶನ ಸಂಪತ್ತಿಗೆ ಹಿಡಿದ ಕೈಗನ್ನಡಿಯಾಗಿದೆ. ರತಿಗೆ ಪಾರ್ವತಿ ನೀಡುವ ಆಶ್ವಾಸನೆ ತನಗೆ ತಾನೆ ಅವಳು ತಂದುಕೊಳ್ಳುವ ಮನಶ್ಶಾಂತಿ, ದುಃಖದ ಉಪಶಮನ, '........ ಈಶ್ವರನಂ ಬೇಡುವೆನಾವರ್ಥದೊಳಂ ಮಾಡುವೆನೆಲೆ ಪರಮಹರ್ಷಮಂ ನಿನಗೆ ರತೀ' ಎನ್ನುವ ಪಾರ್ವತಿಯ ಮಾತುಗಳು ಅರ್ಥಪೂರ್ಣ (ಆ.೮, ಪ.೮೧), ಮನ್ಮಥ ದಹನದೊಂದಿಗೆ ಸುಟ್ಟುಹೋದ ಅವಳ ಕಾಮಲಾಲಸೆಯ. ಜಾಗದಲ್ಲಿ ಆ ಕ್ಷಣದಿಂದಲೇ ತೀವ್ರವಾದ ತಪೋ ನಿರ್ಧಾರ ಬಲಗೊಳ್ಳುತ್ತದೆ. ತೀವ್ರ ಅನುರಾಗದಲ್ಲಿ ಅಸಾಧ್ಯವಾದುದನ್ನು ವೀರವೈರಾಗ್ಯದಲ್ಲಿ ಸಾಧಿಸುತ್ತಾಳೆ. 'ಕುಮಾರಸಂಭವ'ದಲ್ಲಿ ಮನ್ಮಥದಹನದ ಬಳಿಕ ಪಾರ್ವತಿ ವಿರಹಕಾತರಳಾಗಿ ವಿಲಪಿಸುವುದೂ, ವಿರಹತಾಪವನ್ನು ತಡೆಯಲಾರದೆ ತಪೋನಿರ್ಧಾರವನ್ನು ಕೈಗೊಳ್ಳುವುದೂ ದಾರ್ಶನಿಕ ನೆಲೆಯಲ್ಲಿ 'ಗಿರಿಜಾಕಲ್ಯಾಣ'ದಷ್ಟು ಉತ್ಕೃಷ್ಟವಾಗಿಲ್ಲ. ಮನ್ಮಥನ ಪುನರ್ಜನ್ಮ ಪ್ರಸಂಗವೂ ಇದೇ ಅಂಶವನ್ನು ಸಮರ್ಥನೀಯವಾಗಿ ಬಿಂಬಿಸಿದೆ. 'ಕುಮಾರಸಂಭವ'ದಲ್ಲಿ ಶಿವಪಾರ್ವತಿಯರ ವಿವಾಹ ಕಾಲದಲ್ಲಿ ಮನ್ಮಥನನ್ನು ಅನುಗ್ರಹಿಸುವ ವಿಚಾರವಿದ್ದರೆ 'ಗಿರಿಜಾಕಲ್ಯಾಣ'ದಲ್ಲಿ ಈಶ್ವರ ಸಾಕ್ಷಾತ್ಕರ ಸಂದರ್ಭದಲ್ಲೇ ಅದು ಸಂಭವಿಸಿ ಹರಿಹರನ ದರ್ಶನ ಸಂಪತ್ತಿಗೆ ಗರಿ ಮೂಡಿಸಿದೆ.

ಕಾವ್ಯಗಳ ರಸಸಂಬಂಧವಾದ ಒಂದು ವಿಶಿಷ್ಟ ಅಂಶವನ್ನು ಇಲ್ಲಿ ಪ್ರಸ್ತುತ ಪಡಿಸುವುದು ಅಗತ್ಯವೆನಿಸುತ್ತದೆ. ಕಾಳಿದಾಸನ 'ಕುಮಾರಸಂಭವ'ವನ್ನು ಶೃಂಗಾರ ಕಾವ್ಯವೆಂದೂ ಹರಿಹರನ 'ಗಿರಿಜಾಕಲ್ಯಾಣ'ವನ್ನು ಭಕ್ತಿ ಕಾವ್ಯವೆಂದೂ ಸಹೃದಯ ಲೋಕ ಗುರುತಿಸಿದೆ. ಆದರೆ ಕೃತಿಗಳ ಒಳಹೊಕ್ಕಾಗ 'ಕುಮಾರಸಂಭವ'ದ ಶೃಂಗಾರ ಭಕ್ತಿಯ ತನಿರಸದಲ್ಲೂ, 'ಗಿರಿಜಾಕಲ್ಯಾಣ'ದ ಭಕ್ತಿ ಶೃಂಗಾರದ ಅನುಲೇಪನದಲ್ಲೂ ಅದ್ದಿರುವುದು ಗೋಚರವಾಗುತ್ತದೆ. ಮೇಲ್ಪದರದಲ್ಲಿ 'ಕುಮಾರಸಂಭವ'ದ ಪದ್ಯಗಳು ಶೃಂಗಾರರಸದಂತೆ ಕಾಣಿಸಿಕೊಂಡರೂ ಅದರ ಗುರಿಕೇಂದ್ರಿತ ದೃಷ್ಟಿ ಭಕ್ತಿಯ ಹಾದಿಯಲ್ಲಿ ಸಾಧನೆಗೈಯುತ್ತದೆ. 'ಗಿರಿಜಾಕಲ್ಯಾಣ'ದ ಪ್ರಕೃತಿ, ಪಾತ್ರಗಳಲ್ಲಿ ಭಕ್ತಿಯ ಮೇಲ್ಮೈ ಕಾಣಿಸಿದರೂ ಅವುಗಳೊಳಗೆ ಜಾಗೃತವಾಗಿರುವ ಶಕ್ತಿ ಶೃಂಗಾರ ಅಥವಾ ದಾಂಪತ್ಯ ತತ್ತ್ವ. ಈ ಒಳನೋಟ ಕಾವ್ಯಗಳ ಅಧ್ಯಯನಕ್ಕೆ ಮತ್ತು ಅರ್ಥವಂತಿಕೆಗೆ ಹೊಸ ಆಯಾಮವನ್ನು ನೀಡುತ್ತದೆ. ಹಿಮಾಲಯದ ವರ್ಣನೆ, ಪಾರ್ವತಿಯ ಶಿವಪೂಜೆ, ಈ ಭಾಗಗಳಲ್ಲಿ ಈ ಅಂಶ ಅತ್ಯಂತ ನಿಖರವಾಗಿ ಪ್ರಸ್ಫುಟವಾಗುತ್ತದೆ.

ಅಷ್ಟಾದಶ ವರ್ಣನೆಗಳಿಗೆ ಕಟ್ಟುಬಿದ್ದು ಕೆಲವೊಮ್ಮೆ 'ಗಿರಿಜಾಕಲ್ಯಾಣ'ದಲ್ಲಿ ಹರಿಹರನ ಲೇಖನಿ ಕೆಲವು ಆಭಾಸಗಳನ್ನು ತುರುಕಿದರೂ ಕೆಲವು ವಿಶೇಷ ಸನ್ನಿವೇಶ ಹಾಗೂ ವರ್ಣನೆಗಳಲ್ಲಿ ಅಸಾಧಾರಣವಾದ ಪ್ರತಿಭೆ, ಪಾಂಡಿತ್ಯಗಳನ್ನು ದಿಗ್ದರ್ಶಿಸಿದೆ.

ಕಾಳಿದಾಸನಿಗಿಂತ ಹರಿಹರನಲ್ಲಿ ವರ್ಣನೀಯ ಅಂಶಗಳು ಅಧಿಕವಾಗಿವೆ; ಮಾತ್ರವಲ್ಲ ಈ ವರ್ಣನೆಗಳು 'ಗಿರಿಜಾಕಲ್ಯಾಣ'ದ ಸಮಗ್ರ ಕಾವ್ಯ ತತ್ತ್ವವನ್ನು ಪ್ರತಿಮಿಸುವಂತಿವೆ. 'ಕುಮಾರಸಂಭವ' ಮತ್ತು 'ಗಿರಿಜಾಕಲ್ಯಾಣ'ಗಳ ಕೆಲವು ಸಮಾನ ಕಾವ್ಯ ಭಾಗಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಹರಿಹರನ ವರ್ಣನೆಯೇ ಅಧಿಕವಾದ ಅರ್ಥ ಸೌಂದರ್ಯ, ಭಾವದೀಪ್ತತೆಗಳಿಂದ ಮನಸೆಳೆಯುವುದು, ಅನುಭವ ವೇದ್ಯ. ಹಿಮಾಲಯ, ಚಂದ್ರೋದಯ, ವಸಂತವೈಭವ, ಋತುವರ್ಣನೆ ಮುಂತಾದ ಭಾಗಗಳನ್ನು ಪರಿಭಾವಿಸಬಹುದು.

ಪಾರ್ವತೀ ಪರಮೇಶ್ವರರ ವಿವಾಹಕತೆಯನ್ನು ಅನೇಕ ವೀರಶೈವ ಹಾಗೂ ಇತರ ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಾಸಂಗಿಕವಾಗಿ ನಿರೂಪಿಸಿದ್ದು ಅವರೆಲ್ಲ ಹರಿಹರನ ಕಾವ್ಯವನ್ನೇ ಅನುಸರಿಸಿದ್ದಾರೆ. ಆದರೆ ಯಾವ ಕವಿಯೂ ಆ ಕಥಾವಸ್ತುವನ್ನು ಪೂರ್ಣ ಪ್ರಮಾಣದಲ್ಲಿ ರಚಿಸದಿರುವುದು ಸೋಜಿಗದ ವಿಚಾರವಾಗಿದೆ.

ಜ್ಞಾನದ ವಿವಿಧ ಶಾಖೆಗಳಲ್ಲಿ ಅಸಾಧಾರಣವಾದ ಪಾಂಡಿತ್ಯ, ಅದನ್ನು ಕಾವ್ಯ ವೇದಿಕೆಯಲ್ಲಿ ರಸಪೂರ್ಣವಾಗಿ ಅಭಿವ್ಯಕ್ತಿಸಬಲ್ಲ ಪ್ರತಿಭೆ ಕಾಳಿದಾಸನಷ್ಟು ಹರಿಹರನಲ್ಲಿ ಮಿಂಚಿಲ್ಲ . ಇದಕ್ಕೆ ಕಾರಣ ಭಕ್ತಕವಿ ಹರಿಹರನ ನಿರಾಸಕ್ತಿಯೇ ಹೊರತು ಪಾಂಡಿತ್ಯ, ಪ್ರತಿಭೆಗಳ ಕೊರತೆಯಲ್ಲವೆಂಬುದನ್ನು ಸಾಕ್ಷ್ಯಾಧಾರಗಳು ರುಜುವಾತು ಪಡಿಸಿವೆ. ಒಟ್ಟಿನಲ್ಲಿ ಕೆಲವು ವಿಮರ್ಶಕರು ಅಭಿಪ್ರಾಯಿಸುವಂತೆ 'ಗಿರಿಜಾಕಲ್ಯಾಣ'ವನ್ನು ಹರಿಹರ ತನ್ನ ಮೇಲಿನ ಆಪಾದನೆಯನ್ನು ತೊಡೆಯಲೋಸುಗ ರಚಿಸದನೆನ್ನುವುದನ್ನಾಗಲೀ, 'ಕುಮಾರ ಸಂಭವ'ವಿಲ್ಲದಿರುತ್ತಿದ್ದರೆ 'ಗಿರಿಜಾಕಲ್ಯಾಣ'ದ ರಚನೆಯಾಗುತ್ತಿರಲಿಲ್ಲವೆನ್ನುವುದನ್ನಾಗಲೀ ಅವಸರದ ತೀರ್ಮಾನವೆಂದು ಹೇಳಬೇಕಾಗಿದೆ. ಆದ್ದರಿಂದ ಸಾಹಿತ್ಯ ಶ್ರೇಣಿಯಲ್ಲಿ 'ಗಿರಿಜಾಕಲ್ಯಾಣ'ದ ಸ್ಥಾನವನ್ನು ಸಹೃದಯ ಲೋಕ ಇನ್ನೂ ಸರಿಯಾಗಿ ಗುರುತಿಸಲಿಲ್ಲವೆಂದೂ, ಅದಕ್ಕೆ ಸಲ್ಲಬೇಕಾದ ಪ್ರಾಶಸ್ತ್ಯ ಸಲ್ಲಲಿಲ್ಲವೆಂದೂ ಕಾವ್ಯದ ಒಳನೋಟಗಳು ರುಜುವಾತು ಪಡಿಸುತ್ತವೆ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೪. ಬೇಂದ್ರೆ ವ್ಯಕ್ತಿತ್ವ ಮತ್ತು ನವೋದಯ ಕಾವ್ಯ

–ಡಾ. ಜಿ. ಕೃಷ್ಣಪ್ಪ*

ಬೇಂದ್ರೆಯವರ ವ್ಯಕ್ತಿತ್ವ ವಿಕಾಸಗೊಂಡಿರುವುದು ಗೆಳೆಯ, ಶಿಕ್ಷಕ, ಕವಿ, ದೇಶಭಕ್ತ ಎಂಬ ಚತುರ್ಮುಖಗಳಲ್ಲಿ. ಅಲ್ಲಿ ಪ್ರಬಲಗೊಂಡ ಕವಿಗೆ ಕಾವ್ಯರಚನೆ ಒಂದು ಯೋಗವಾಗಿತ್ತು. ಅದನ್ನು ಅವರು 'ಕಾವ್ಯಯೋಗವೆಂದರೆ ಕವಿಯ ಕರ್ಮಯೋಗ. ಲೋಕಸಂಗ್ರಹದ ಇಚ್ಛೆಯಿಂದ ಜಗತ್ತಿನ ಕಲ್ಯಾಣಕ್ಕಾಗಿ ಕುಶಲತೆಯಿಂದ ಮಾಡಿದ ಕೆಲಸವದು. ಕರ್ಮಕುಶಲತೆಗೆ ಯೋಗವೆಂದು ಹೆಸರು'[೧] ಎಂದು ಹೇಳಿದ್ದಾರೆ.

ಬೇಂದ್ರೆ ಸಾಹಿತ್ಯ ಅಧ್ಯಯನ ಮಾಡಬೇಕಾದ ರೀತಿ ಮತ್ತು ಪ್ರಾಮುಖ್ಯತೆ ಕುರಿತು ಶಂಕರ ಮೊಕಾಶಿ ಪುಣೇಕರರು ಹೀಗೆ ಹೇಳಿದ್ದಾರೆ:

'ಬೇಂದ್ರೆಯವರ ಇತ್ತೀಚಿನ ಕವನಗಳಲ್ಲಿ ಅವರ ಮೊದಲಿನ ಕವಿತೆಯಲ್ಲಿರುವ ಎಲ್ಲ ಗುಣಗಳನ್ನು ಹುಡುಕಿ, ಕೆಲವನ್ನು ಕಾಣದೆ ಅವರು ವೃದ್ಧರಾದರೆಂದೂ ಕಾವ್ಯದ ಮೇಲಿನ ಅವರ ಹಿಡಿತ ಸಡಿಲವಾಯಿತೆಂದೂ ಹೇಳುವ ಮೊದಲು, ನಾವು ಏನನ್ನು ಹುಡುಕಹೋದೆವೆಂಬುದನ್ನು ಆಲೋಚಿಸುವುದು ವಿವೇಕದ ಲಕ್ಷಣ.

ಬೇಂದ್ರೆಯವರ ಸುದೈವವೆಂದರೆ (ಅದು ಕನ್ನಡದ ಸುದೈವವೂ ಹೌದು) ಅವರು ತಮ್ಮ ಇತ್ತೀಚಿನ ಕಾವ್ಯದಲ್ಲಿ ಅರವಿಂದ ತತ್ತ್ವಜ್ಞಾನದ ಮುಖಾಂತರ ವ್ಯಕ್ತಿ ಸಾಮಾನ್ಯತೆಯ ಅನುಭವದತ್ತ ಹಬ್ಬುಗೆಗೊಂಡಿದ್ದಾರೆ. ಕದಾಚಿತ್ ಅವರು ಫ್ರಾಯಿಡನ, ಯುಂಗನ, ಮಾರ್ಕ್ಸನ ಮುಖಾಂತರ ಈ ದರ್ಶನದತ್ತ ಹೊರಳಿದ್ದರೆ ಇಷ್ಟೊಂದು ಸೌಮ್ಯವಾದ, ಆಳವಾದ, ಸಹಿಷ್ಣುವಾದ, ಏತದ್ದೇಶಿಯವಾದ ಕಾವ್ಯವನ್ನು ಬರೆಯುವದು ಶಕ್ಯವಾಗುತ್ತಿರಲಿಲ್ಲವೆಂಬುದು ಸ್ಪಷ್ಟ. ಫ್ರಾಯಿಡನ ಮುಖಾಂತರ ಹೀಗೆ ಹಬ್ಬಲು ಹೋದ ಆಡೆನ್‌ನಂಥವರು, ಮಾರ್ಕ್ಸನ ಮುಖಾಂತರ ಹಬ್ಬಲು ಹೋದ ಸಿ.ಡೇ.

* #೨೨, ಶ್ರೀಗುರುದತ್ತ ನಿಲಯ, ೧ನೇ ಕ್ರಾಸ್, ನೇತಾಜಿನಗರ, ಮತ್ತಿಕೆರೆ, ಬೆಂಗಳೂರು-೫೬೦೦೫೪. ಮೊ: ೯೯೭೨೧೯೨೯.

ಲ್ಯೂಯಿಸನಂತಹರು ಇಂಗ್ಲಿಷದಲ್ಲಿಯೇ ಪೂರ್ಣ ಯಶಸ್ವಿಯಾಗದೇ ಬೇರೆ ಕಾವ್ಯ ರೀತಿಗಳತ್ತ ಹೊರಳಿದರು. ಅರವಿಂದ ತತ್ತ್ವಜ್ಞಾನವು ಬುದ್ಧಿ-ಭಾವಗಳೆರಡನ್ನೂ ಒಳಗೊಂಡಿದ್ದಲ್ಲದೆ ಕವಿಗೆ ಬೇಕಾಗುವ World-View, a sense of destiny ಇವುಗಳನ್ನು ಆಧುನಿಕ ಪ್ರಜ್ಞೆಯ ಅರಿವಿನಲ್ಲಿಯೇ ಹುಟ್ಟಿಸುತ್ತದೆ.'[೨]

'ಒಂದು ಪೂರ್ಣ ಆಯುಷ್ಯವನ್ನು ಸಫಲವಾಗಿ ಯಾರ ಕಾವ್ಯದ ಅಭ್ಯಾಸಕ್ಕಾಗಿ ಮೀಸಲಿಡಬಹುದೋ ಅಂಥ ಕನ್ನಡ ಕವಿಗಳಲ್ಲಿ ಶ್ರೀಮಾನ್ ಬೇಂದ್ರೆಯವರು ಅತ್ಯಾಧುನಿಕರು.'[೩]

**ಸಮುದಾಯದ ಬಾಲಕನಾಗಿ ಬೆಳೆದ ಬೇಂದ್ರೆ**

ಯಾವುದೇ ವ್ಯಕ್ತಿಯ ವ್ಯಕ್ತಿತ್ವ ರೂಪುಗೊಳ್ಳುವುದು ಬಾಲ್ಯದಲ್ಲಿ. 'ಮೂರು ವರ್ಷದಲ್ಲಿ ಕಲಿತದ್ದು ನೂರು ವರ್ಷದತನಕ' ಎಂಬ ಗಾದೆ ಮಾತಿದೆ. ಬೇಂದ್ರೆಯವರು ಧಾರವಾಡದಲ್ಲಿ ಬಡ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದರು. ಚಿಕ್ಕಂದಿನಲ್ಲಿಯೇ ಅವರ ತಂದೆ ತೀರಿಹೋಗಿ ಅವರ ಬಾಲ್ಯ ಸ್ತ್ರೀ ಪೋಷಿತವಾದುದಾಗಿತ್ತು. ಅದನ್ನು ಅವರು 'ನಮ್ಮ ತಾಯಿಗೆ ಅಜ್ಜಿ, ನಮ್ಮ ಅಜ್ಜಿಗೆ ತಾಯಿ-ಎರಡು ಹೆಣ್ಣು ಜೀವ ಒಂದನ್ನೊಂದು ಅಂಟಿಕೊಂಡು ನಿಂತ'[೪] ಪುಟ್ಟ ಕುಟುಂಬ ಎಂದು ಹೇಳಿಕೊಂಡಿದ್ದಾರೆ. ಅವರು ಧಾರವಾಡದ ಜಾನಪದ ಪರಿಸರದಲ್ಲಿ ಎಲ್ಲ ವರ್ಗ ವರ್ಣದ ಬಾಲಕರೊಡನೆ ಒಂದಾಗಿ ಬೆರೆತು ಸಹಜ ಸ್ನೇಹದ ಸವಿಯಲ್ಲಿ ಬಾಲ್ಯವನ್ನು ಕಳೆದವರು. 'ಕೋಣೆ ಮಕ್ಕಳು ಕೊಳತೊ ಬೀದಿಮಕ್ಕಳು ಬೆಳದೊ' ಎಂಬ ನಾಣ್ಣುಡಿಯಂತೆ ಅವರು ಸಮುದಾಯದ ಬಾಲಕನಾಗಿ ಬೆಳೆದರು.

ಬಡವರ ಮಕ್ಕಳು ಯಾರೂ ಮುಟ್ಟದ ಅಪ್ರಯೋಜಕ ವಸ್ತುಗಳ ಜೊತೆ ಆಟವಾಡುತ್ತಾರೆ. ಅಂತಹ ಬಡ ಗ್ರಾಮೀಣ ಮಕ್ಕಳ ಜೊತೆ ಬೇಂದ್ರೆ ಬೆರತು ಬಾಲ್ಯ ಕಳೆದರು. ಕಸವಾದ ಜೋಳದ ಗರಿ, ರವದಿಯನ್ನು ಊದಿ ಆನಂದಪಟ್ಟರು. ತಿಪ್ಪೆಯಲ್ಲಿ ತಿಂದು ಎಸೆದ ಮಾವಿನ ಓಟೆಯನ್ನು ಹುಡುಕಿ ಅದರಲ್ಲಿ ನಾದ ಹೊಮ್ಮಿಸಿ ಸುಖ ಪಡುತ್ತಿದ್ದರು.

ತೆಯ್ದದ್ದೆ ತೆಯ್ದದ್ದು ತುಟಿಗೆರೆ ಬಿಚ್ಚಿರಲು
ಉಸಿರೆ ಆಗುವದಣ್ಣ ಸಾಕಾರವು !
ಯಾವ ತಿಪ್ಪೆಯ ಬಸಿರ ಬಿರಕಿಗೆ ಮೂಡಿತ್ತೊ
ಮಾವಿನ ಪೀಪಿಯ ಆಕಾರವು?[೫]

ತಿಪ್ಪೆಯಲ್ಲಿ ಚಿಗುರಿದ ಮಾವನ್ನು ತಂದು, ಚಿಗುರಿದ ಕಡೆ ಹಾಗೆ ಬಿಟ್ಟು, ಬುಡದ ಕಡೆ ಓಟೆಯ ಮೇಲಿನ ಕರಟ ಕಿತ್ತು ಕಲ್ಲಿನ ಮೇಲೆ ತೆಯ್ದರೆ ಅದು ತುಟಿಯಂತೆ ಬಾಯಿ ಬಿಟ್ಟುಕೊಳ್ಳುತ್ತದೆ. ಅದನ್ನು ಊದಿದರೆ ಅದ್ಭುತ ನಾದ ಹೊಮ್ಮುತ್ತದೆ. ಅದು ಅವರ ನಾದಶೋಧದಲ್ಲಿ ಜಾಗೃತಗೊಂಡ ಸೃಜನ ಶಕ್ತಿಯಿರಬಹುದೇನೊ!

ಅಂತಹ ನಾದಮಾಧುರ್ಯವನ್ನು ಬಾಲ್ಯದಲ್ಲಿ ಸವಿದ ಬೇಂದ್ರೆಯವರು ನವೋದಯ ಕಾವ್ಯವನ್ನು 'ನಾದಲೀಲೆ'ಯಾಗಿ ರೂಪಿಸಿದರು. ಅವರ ಬಾಲ್ಯ ಕಂಡ ಸತ್ಯದ ವಿಕಸಿತ ರೂಪ ನವೋದಯ ಕಾವ್ಯ.

ವ್ಯಕ್ತಿ ಎಲ್ಲ ಕಷ್ಟ ಸುಖಗಳಲ್ಲಿ ಬದುಕನ್ನು ನಾದಿಕೊಂಡು ಹದಗೊಳ್ಳಬೇಕು.

ಹದಾ ಒಳಗs ಇಲ್ದs ತಮ್ಮಾ!
ಪದಾ ಹೊರಗs ಬರೂದಿಲ್ಲಾ
ಕದಾ ತೆರ್‍ಯೊದಿಲ್ಲಾ ಅಂತಃಕರಣಾ.[೬]

ಬೇಂದ್ರೆ ಕಾವ್ಯದ ಮುಖ್ಯ ಲಕ್ಷಣ ಹದ ಮತ್ತು ಅಂತಃಕರಣ. ಅಂತಃಕರಣದ ಮಿಡಿತದಲ್ಲಿ ಹದಗೊಂಡ ವ್ಯಕ್ತಿ ತಾನೇ ನಾದವಾಗಿ ಹೋಗುವನು ಎಂಬ ಚಿಂತನೆಯನ್ನು 'ನಾದ ಬೇಕು' ಕವನದಲ್ಲಿ ಅವರು ನೀಡಿದ್ದಾರೆ.

ನಾದ ಬೇಕು ನಾದ ಬೇಕು
ನಾದಾನ ನಾದ ಬೇಕು
ನಾದಕ್ಕೆ ಪ್ರತಿನಾದ ಬೇಕು
ನಾದಾನsನ ಆದ ಮ್ಯಾಲೆ ಬ್ಯಾರೆ ಯಾಕ ವಾದ ಬೇಕು.

ಹೊರಗಿನ ದೇವರು ಯಾಕ ಬೇಕು?
ಒಳಗಿನ ದೇವನ ಸಾಕ ಬೇಕು
ಜೋಕಿಯೊಳಗ ಹೊಸ ಝೋಕ ಬೇಕು
ಸಂತೀ ಮಂದಿನ್ನ ನೂಕಬೇಕು ಅನುರಾಗಕ್ಕ ಷೋಕ ಬೇಕು.

ಅಂತರಂಗದಾ ಶೋಧ ಬೇಕು
ಪರ ಬ್ರಹ್ಮದಾ ಬೋಧ ಬೇಕು
ಎಂದಿಗು ಶ್ರೀಗುರುಪಾದ ಬೇಕು
ನಾದ ಬೇಕು ನಾದ ಬೇಕು ತುದಿಮುಟ್ಟಾನು ನಾದ ಬೇಕು.[೭]

ಬೇಂದ್ರೆಯವರು ತಾವು ಆಡಿದ ಆಟಗಳನ್ನು 'ಚಿಣಿ ಫಣಿ, ಚಂಡು, ಬೊಗರೆ, ಗಾಳಿಪಟ, ಆಕಾಶಬುಟ್ಟಿ, ಜಿದ್ದು, ಕಸರತ್ತಿನ ಕೆಲಸ, ಗೋಲಿಗುಂಡು, ತಿಳ್ಳಿ, ಹುಡುತುತ್ತು, ಗಂಗಾಳಮರಗಿ' ಎಂದು ಹೇಳುತ್ತ 'ಹಣ ಎತ್ತುವ ಮೊದಲು ಬಾರಿಸುವ ಹಲಗೆಯಲ್ಲಿಯೂ ನಮಗೊಂದು ಸಲಿಗೆಯಿತ್ತು'[೮] ಎಂದು ಬಾಲ್ಯದ ಮುಕ್ತ ಲಹರಿಯನ್ನು ನೆನೆದಿದ್ದಾರೆ. ಅದರ ದನಿಯನ್ನು ಕಾವ್ಯದಲ್ಲಿ ಹೀಗೆ ನೀಡಿದ್ದಾರೆ :

'ಸತ್ತರೆ ಸತ್ತಿನೀ' ಇದ್ದವರ ಮೆರವಣಿಗೆ
ಹಲಿಗೆ ಸೊಲ್ಲಿಸುತಿತ್ತು ಕೊನೆಯರಿಣಾ.[೯]

ಅವರಿಗೆ ಬಾಲ್ಯದಲ್ಲಿ ಬ್ರಾಹ್ಮಣ ಹೆಣಗಳಿಗಿಂತ ಮುಸಲ್ಮಾನರ ಹೆಣದ ಮೆರವಣಿಗೆ ಬಗ್ಗೆ ತುಂಬಾ ಆಸಕ್ತಿಯಿತ್ತು.

ಹಾರವನು ಸತ್ತರೆ ಬೆನ್ನುಗಂಟ ಅತ್ತರೇ ?
ಹೊತ್ತವರ ಮುಖದಲ್ಲು ಪ್ರೇತಕಳೆ.

'ತಡೆರಹಿತ ಬಾಲ್ಯದಲ್ಲಿ ಕಂಪಿಗೆ, ಸತ್ಯಕ್ಕೆ, ಆನಂದಕ್ಕೆ ಮನಸ್ಸು ತೆರೆದುಕೊಂಡಿರುತ್ತದೆ. ಅಲ್ಲಿ ಜಾತಿ, ಮತ, ಪಂಥದ ಕೆಸರು ಅಂಟಿರುವುದಿಲ್ಲ. ಅಂತಹ ಬಾಲ್ಯದ ಅನುಭವವನ್ನು ಬೇಂದ್ರೆಯವರು ಇಳಿವಯಸ್ಸಿನಲ್ಲಿ ಮೆಲುಕು ಹಾಕುವಾಗ ಚಿತ್ರಿಸಿರುವುದು ಮುಸಲ್ಮಾನರಲ್ಲಿ ತುಂಬಾ ಹಿಂದುಳಿದ ಪಂಗಡದವರೆಂದು ಕರೆಯುವ ಪೆಂಡಾರಿ ಸಾಬನ ಮೆರವಣಿಗೆ. ಅದು ಬೇಂದ್ರೆಯವರು ಸಾಧಾರಣರಲ್ಲಿ ಸಾಧಾರಣರನ್ನು ಪ್ರೀತಿಸುತ್ತಿದ್ದುದರ ದ್ಯೋತಕ. ಅವನ ಘೋರ ಬಡತನ, ಅಸಹಾಯ ಸ್ಥಿತಿಯ ಜೀವನ ರೀತಿ, ಸಾವಿಗೆ ಕಾರಣವಾಗಿರುವುದನ್ನು ಬೇಂದ್ರೆಯವರು 'ಹ್ಯಾಂಗಾರೆ ಸತ್ತರು ಶೃಂಗಾರವಾಗಿದ್ದ ಪೆಂಡಾರಿಸಾಬನು ಕೊನೆಯದಿನ' ಎಂದಿದ್ದಾರೆ. 'ಹ್ಯಾಂಗಾರೆ ಸತ್ತರು' ಎಂಬ ನುಡಿಯಲ್ಲಿ ಅವನ ಜೀವನದ ಎಲ್ಲಾ ದೈನ್ಯ ಮಡುಗಟ್ಟಿದೆ.'[೧೧]

ಅವರು ಹುಟ್ಟು ವೈದಿಕರಾದರೂ ಮಡಿ ಮೈಲಿಗೆಗೆ ಅಂಟಿಕೊಳ್ಳದೆ ಸಮುದಾಯದ ಬಾಲಕನಾಗಿ ಬೆಳೆದು ಜಾತ್ಯತೀತ ಮನೋಭಾವ ಬೆಳೆಸಿಕೊಂಡಿದ್ದರು. ಯಾವುದೇ ಮತಧರ್ಮದ ಕಟ್ಟುಪಾಡಿಗೆ ಒಳಗಾಗದೆ ಅನಂತಶಕ್ತ ಭಗವಂತನನ್ನು ಹೀಗೆ ಪ್ರಾರ್ಥಿಸಿದರು: 'ನನ್ನ ಹರಣ ನಿನಗೆ ಶರಣ ಸಕಲ ಕಾರ್ಯಕಾರಣ
ನಿನ್ನ ಮನನದಿಂದ ತನನವೆನುತಿದೆ ತನುಪಾವನ'
(ನನ್ನ ಹಾಡು : ಗರಿ)

**ಜಾನಪದ ಪ್ರಭಾವ**

ಬೇಂದ್ರೆಯವರು ಧಾರವಾಡದವರಾಗಿ ಸರಳ ನಿರಾಡಂಬರ ಜೀವನ ನಡೆಸಿ. ಗ್ರಾಮೀಣರಂತೆ ಸಾಧಾರಣ ಉಡುಪು ಧರಿಸಿ ಜಾನಪದ ವ್ಯಕ್ತಿತ್ವವನ್ನು ಹೊಂದಿದ್ದರು.

ಪೂನಾದ ಫರ್ಗುಸನ್ ಕಾಲೇಜಿನಿಂದ ಬಿ.ಎ ಪಾಸು ಮಾಡಿದ್ದ ಬೇಂದ್ರೆಯವರು ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆ ಪ್ರಭಾವಗಳಿಗೆ ಒಳಗಾಗಿ ಅಲ್ಲಿನ ಆಲೋಚನಾ ರೀತಿಗಳನ್ನು ಅರಗಿಸಿಕೊಂಡಿದ್ದರು. ಅದನ್ನು ಅಭಿವ್ಯಕ್ತಿಸುವಾಗ ಅದು ಪೂರ್ತಿ ಈ ನೆಲದಿಂದ ಹೊಮ್ಮಿದ್ದು ಎಂಬಂತೆ ಸೃಷ್ಟಿಸಿದರು. ನವೋದಯದ ಪ್ರಮುಖ ಮಾರ್ಗ (Classic) ಕವಿಯಾದರು. 'ಸ್ಕಾಟ್, ಬರ್ನ್ಸ್, ವರ್ಡ್ಸ್‌ವರ್ತ್ ಮೊದಲಾದ ಆಂಗ್ಲ ಕವಿಗಳ ಕಾವ್ಯಗಳಲ್ಲಿ ನಾಡಹಾಡುಗಳ, ಜನಪದ ಗೀತಗಳ ಸಂಸ್ಕಾರವನ್ನು ಕಾಣಬಹುದು. ಅದರಿಂದ ಅವರ ಕಾವ್ಯದಲ್ಲಿ ಒಂದು ಬಗೆಯಾದ ನಾವೀನ್ಯ ಉಂಟಾಯಿತು. ನಮ್ಮ ಈಗಿನ ಕನ್ನಡ ಸಾಹಿತ್ಯಕ್ಕೆ ಆ ಸಂಸ್ಕಾರವು ಅವಶ್ಯವಿದೆ.[೧೨] ಎಂಬ ಅರಿವಿನಲ್ಲಿ ಜನಪದವನ್ನು ಶಿಷ್ಟ ಕಾವ್ಯಕ್ಕೆ ಕಸಿಗೊಳಿಸಿದರು.

'ಬೇಂದ್ರೆಯವರ ಪ್ರಥಮ ಪ್ರಕಟಿತ ಕವನಗಳು 'ತುತ್ತೂರಿ' ಮತ್ತು 'ಸರಸ್ವತಿ'. ಅವು 'ಪ್ರಭಾತ' ಪತ್ರಿಕೆಯ ೧೯೧೮ ಆಗಸ್ಟ್‌ನ ಪ್ರಥಮ ಸಂಚಿಕೆಯಲ್ಲಿ 'ಅಂಬಿಕಾತನಯದತ್ತ' ಕಾವ್ಯನಾಮದಿಂದ ಪ್ರಕಟವಾದವು. 'ತುತ್ತೂರಿ' ನವೋದಯ ಸಾಹಿತ್ಯದ ಅರುಣೋದಯವನ್ನು ಸೂಚಿಸುತ್ತ ಸ್ವಾತಂತ್ರ್ಯೋದಯದ ಸುಳಿವನ್ನು ನೀಡುವ ಕವನವಾಗಿದೆ.

೧೯೧೯ರ 'ಸ್ವಧರ್ಮ' ಪತ್ರಿಕೆಯಲ್ಲಿ ಬೆಳಕುಕಂಡ ಬೇಂದ್ರೆಯವರ 'ಬೆಳಗು' ಕವನ ನೂತನ ಛದಃ ಪ್ರಯೋಗದಿಂದ ಕೂಡಿ ಹೊಸ ಕಾವ್ಯದ ಉದಯವನ್ನು ಕನ್ನಡದಲ್ಲಿ ಉಂಟು ಮಾಡಿತು. ಅವರು ಆ ಹೊಸತು ಜನಕ್ಕೆ ಮೆಚ್ಚುಗೆ ಆಗುವುದೊ ಇಲ್ಲವೊ ಎಂದು 'ಸದಾನಂದ ಜಂಗಮ' ಎಂಬ ಕಾವ್ಯನಾಮದಲ್ಲಿ ಪ್ರಕಟಿಸಿದ್ದರು. ಅನಂತರ ಅವರ 'ತುತ್ತೂರಿ', 'ಸರಸ್ವತಿ'ಯ 'ಅಂಬಿಕಾತನಯದತ್ತ' ರಾಗಿಯೇ ಉಳಿದರು. ಈ ಜಗತ್ತಿಗೆ ಬೇಕಾಗಿರುವ 'ಶಾಂತಿ' ಮತ್ತು 'ಪ್ರೀತಿ'ಯನ್ನು ಪ್ರತಿದಿನ ಸೂರ್ಯನು ನೀಡುತ್ತಿರುವನು. ಅದರಂತೆ ಈ ನೆಲದ ಜನ ಬಾಳಿ ಎಂಬ ಚಿಂತನೆಯನ್ನು ಬೆಳಗು ಕವನದಲ್ಲಿ ನೀಡಿದರು. ಆ ಕವನದಲ್ಲಿ ಬೇಂದ್ರೆಯವರು ಭಾಷೆ ಮತ್ತು ಭಾವಗಳ ಅದ್ಭುತ ಸಾಮರಸ್ಯವನ್ನು ಸಾಧಿಸಿದರು.

ಅವರು ಹೊಸ ಕಾವ್ಯದಲ್ಲಿ ಪ್ರಯೋಗಿಸಿದ ಹೊಸ ಛಂದಸ್ಸನ್ನು ಕುರಿತು ಹೀಗೆ ಹೇಳಿದ್ದಾರೆ :

'ಭಾವಗೀತೆಗಳಲ್ಲಿ ನಾನು ಗತಾನುಗತಿಕ ಷಟ್ಪದಿಗಳನ್ನು ಬಳಸಿದೆ. ಸಂಗಡವೇ ಹೊಸ ಛಂದಸ್ಸುಗಳ ಪ್ರಯೋಗವನ್ನು ಮಾಡಿದೆ. ಮುಂದೆ ಮಾಸ್ತಿಯವರಿಗೂ ನನಗೂ ಗಹನ ಸ್ನೇಹಕ್ಕೆ ದಾರಿ ಮಾಡಿಕೊಟ್ಟ, ಮೊದಲು 'ಸ್ವಧರ್ಮ'ದಲ್ಲಿ ಬೆಳಕು ಕಂಡು 'ಗರಿ'ಯಲ್ಲಿ ಪ್ರಥಮ ಪದ್ಯವಾಗಿ ಮುದ್ರಿತವಾದ 'ಬೆಳಗು' (ಮೂಡಲ ಮನೆಯಾ ಮುತ್ತಿನ ನೀರಿನ) ಕವಿತೆಯೇ ಬಹುಶಃ ನನ್ನ ಮೊದಲ ಛದಃ ಪ್ರಯೋಗ (೧೯೧೯). ಇದು ಹೊಸ ಛಂದಸ್ಸು....ಬಹುಶಃ ಇಕ್ಕಟ್ಟಾದ ಮಾತ್ರಾಮಿತಿಗಳುಳ್ಳ ಷಟ್ಪದಿಗಳು, ನನ್ನ ಸ್ವಾಭಾವಿಕ ಸ್ವಾತಂತ್ರ್ಯ ಪ್ರಿಯ ಆತ್ಮಕ್ಕೆ ಹಿಡಿಸಿರಲಿಕ್ಕಿಲ್ಲ. ಧಾರವಾಡದಲ್ಲಿ ಯಾವಾಗಲೂ ಕಿವಿದೆರೆದು ಓಡಾಡುವ ನನಗೆ, ದಾಸರ ಪದದಿಂದ, ಗೊಲ್ಲರ ಹಾಡಿನವರೆಗೆ ಎಲ್ಲವನ್ನೂ ಕೇಳಿ, ಕೇಳಿ, ಒಂದು ಸಂಸ್ಕಾರ ಬಂದಿರಬೇಕು. ಸಾಂಗತ್ಯ ಮತ್ತು ಲೋಕಗೀತಗಳ ಅಂಶಗಳು ಕೊಡುವ ಸ್ವಾತಂತ್ರ್ಯ ಮಾಧುರ್ಯಗಳು ರಕ್ತಗತವಾಗಿರಬೇಕು. ಇವೆಲ್ಲ ಸೇರಿ ಛಂದಸ್ಸುಗಳಲ್ಲಿ ನವನವೋನ್ಮೇಷಣೆ ನನಗೆ ಸಾಧ್ಯವಾಗಿರಬೇಕು.[೧೩]

ಬೇಂದ್ರೆಯವರು ಬಾಲ್ಯದಲ್ಲಿ ಕೇಳಿ ನಲಿದ ಚವುಡಿಕೆಯ ಗತ್ತು, ಗೊಂದಲಿಗರ ಸಂಬಾಳಿದ ಧ್ವನಿ, ಲಾವಣಿ, ಗೀಗೀ ಪದ, ಪುರವಂತರ ಹಾಡುಗಳ ಮಟ್ಟುಗಳು ಅವರ ಕಾವ್ಯಭಾಷೆಗೆ ಮುಖ್ಯ ಪ್ರೇರಣೆಗಳು. ಧಾರವಾಡದಲ್ಲಿ ಹುಟ್ಟಿ ಬೆಳೆದು ಉಸಿರಾಡಿದ ಜನಪದ ಸಂಸ್ಕೃತಿ ಮತ್ತು ಪೂನಾದ ಕಾಲೇಜು ವಿದ್ಯಾಭ್ಯಾಸದಲ್ಲಿ ಇಂಗ್ಲಿಷ್ ಓದಿನಿಂದ ಪಡೆದ ನಾಗರಿಕ ಸಂಸ್ಕೃತಿ ಇವುಗಳನ್ನು ಸಮನ್ವಯಿಸಿಕೊಂಡದ್ದು ಬೇಂದ್ರೆ ವ್ಯಕ್ತಿತ್ವ

ಬೇಂದ್ರೆಯವರು ತಮ್ಮ ಕಾವ್ಯದಲ್ಲಿ ಪ್ರತಿಮೆ, ಪ್ರತೀಕ, ರೂಪಕಗಳಾಗಿ ಕನ್ನಡ ಪದಗಳನ್ನು ಬಳಸಿ ಕನ್ನಡ ಕಾವ್ಯದ ಸಿರಿಯನ್ನು ಹೆಚ್ಚಿಸಿದ್ದಾರೆ. ಅವರು ಬಳಸಿರುವ ಉತ್ತರ ಕರ್ನಾಟಕದ ಜನನುಡಿ, ಅದರ ಪ್ರಾಕೃತಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ತಿಳಿದಾಗ ಮಾತ್ರ ಬೇಂದ್ರೆ ಕಾವ್ಯ ಹೆಚ್ಚು ಅರ್ಥವಾಗುತ್ತದೆ. ಅದಕ್ಕಾಗಿ ಒಂದೆರಡು ಉದಾಹರಣೆಗಳನ್ನು ಅಧ್ಯಯನ ಮಾಡಬಹುದು.

೧. ಮಾನಸದ ಮದಗವೆ

ಕುವೆಂಪು ಅವರು 'ರಸೋವೈಸಃ' ಕೃತಿಯಲ್ಲಿ ರೂಪಕ ಸೃಷ್ಟಿಯನ್ನು ಕುರಿತು 'ರೂಪಕ ಪ್ರತಿಮಾ ವಿಧಾನದ ಸರ್ವ ಲಕ್ಷಣಗಳಿಂದಲೂ ಸಂಪನ್ನವಾಗಿರುತ್ತದೆ. ಅದೊಂದು ಸೌಂದರ್ಯ ವಿಶೇಷ ಮಾತ್ರವಲ್ಲ, ಶಕ್ತಿ ವಿಶೇಷವೂ ಹೌದು. ಅದೊಂದು ಶಬ್ದದ ಪ್ರಕಾರ ಮಾತ್ರವಲ್ಲ ; ಅರ್ಥ ಪ್ರಕಾರ ಮಾತ್ರವಲ್ಲ ; ಅನುಭವ ಪ್ರಕಾರವೂ ಆಗಿದೆ. ಅದು ರಸಶಕ್ತಿಯ ಸಂಚಾರಕ್ಕೆ ಪ್ರಣಾಳಿಕೆ ಮಾತ್ರವಾಗಿರದೆ ರಸಶಕ್ತಿಯ ಉದ್ಭವಕ್ಕೆ ಆಕರವೂ, ಸ್ಥಾನವೂ ಆಗಿರುತ್ತದೆ. ಇದ್ದುದು ಯಾವುದನ್ನಾದರೂ ತೀಕ್ಷ್ಣವಾಗಿ ಹೇಳುವುದಷ್ಟೆ ಅದರ ಕೆಲಸವಲ್ಲ ; ಅದುವರೆಗೂ ಇಲ್ಲದಿದ್ದುದನ್ನು ಸೃಷ್ಟಿಸುವುದೂ ಅದರ ಕರ್ತವ್ಯ....ಅಲ್ಲಿ ಉಕ್ತಿ ಪ್ರಕಾರವೆ ಅನುಭವ ಪ್ರಕಾರ. ಆಗ ಅದು ಅಲಂಕಾರವೂ ಅಲ್ಲ, ಚಮತ್ಕಾರವೂ ಅಲ್ಲ, ಅದೊಂದು ಅಪರೋಕ್ಷ ಸಾಕ್ಷಾತ್ಕಾರ.'[೧೪] ಎಂದು ಹೇಳಿದ್ದಾರೆ.

ಬೇಂದ್ರೆಯವರು 'ಅಲೌಕಿಕ' ಕವನದಲ್ಲಿ ರೂಪಕವಾಗಿ ಬಳಸಿರುವ ಪದ 'ಮದಗ'ವು ಕುವೆಂಪು ಅವರ ನುಡಿಗೆ ಸಾಕ್ಷಿಯಂತಿದೆ.

ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ,
ನನ್ನ ಪಂಕಜವೆ !
ನನ್ನ ನೀರಲ್ಲಿ ಬೆಳೆದು ನೀರಾಳದಲ್ಲಿರುವೆ,
ನನ್ನ ನೀರಜವೆ !
ಒಡೆಯಲು ಬಾರದ ಒಡಪಿನಂತಿರುವೆ,
ಬಿಡಿಸಲು ಬಾರದ ತೊಡಕಿನಂತಿರುವೆ,
ನನ್ನ ಮಾನಸದ ಮದಗವೆ
ಮುಳುಗಿ ನೋಡಿದೆ, ಮುದ್ದಿಸಿ ನೋಡಿದೆ,
ಮೂಸಿ ನೋಡಿದೆ,
ಮುಟ್ಟಿ ನೋಡಿದೆ, ದಿಟ್ಟಿಸಿ ನೋಡಿದೆ,
ನಿನ್ನಳವು ಅಸದಳವು. (ಅಲೌಕಿಕ : ಉಯ್ಯಾಲೆ)

ಕೀರ್ತಿನಾಥ ಕುರ್ತಕೋಟಿಯವರು ಈ ಕವನವನ್ನು ವಿಮರ್ಶಿಸುತ್ತ 'ತಾಯಿ ಮತ್ತು ಮಗುವಿನ ಸಂಬಂಧದಲ್ಲಿಯ ರಹಸ್ಯಮಯತೆಯನ್ನು ಈ ಕವಿತೆಯಲ್ಲಿ ನಿರೂಪಿಸಲಾಗಿವೆ. ಮಗು ತಾಯಿಯ 'ಮಾನಸದ ಮದಗಜ' ನಿಜ. ಆದರೂ ಮಗು

ಅವಳಿಗೆ ಒಡೆಯಲು ಬಾರದ ಒಡಪಿನಂತೆ ಮತ್ತು ಬಿಡಿಸಲು ಬಾರದ ತೊಡಕಿನಂತೆ'[೧೫] ಎಂದು ಹೇಳಿದ್ದಾರೆ.

ಈ ಕವನದ 'ನನ್ನ ಮಾನಸದ ಮದಗವೆ' ಎಂಬ ರೂಪಕವನ್ನು ಕುರಿತು ನನ್ನ ಅಭಿಪ್ರಾಯ ಹೀಗಿದೆ : ಆ ಮಗುವನ್ನು ಒಡೆಯಲು ಬಾರದ ಒಡಪು, ಬಿಡಿಸಲು ಬಾರದ ತೊಡಕು ಎಂದು ಹೇಳುತ್ತ ಬೇಂದ್ರೆಯವರು 'ನನ್ನ ಮಾನಸದ ಮದಗವೆ' ಎಂದಿದ್ದಾರೆ. ಇದು ತಾಯಿ ತನ್ನ ಮಗುವನ್ನು ಕುರಿತು ವ್ಯಕ್ತಪಡಿಸಿದ ಬೇಂದ್ರೆ ಪ್ರತಿಭೆಯ ಅಪೂರ್ವ ರೂಪಕವಾಗಿದೆ. 'ಮದಗ' ಎಂದರೆ ಕೆರೆ ತುಂಬಿ ಹರಿದು ಹೊರಚೆಲ್ಲಿದ ತೂಬಿನ ನೀರು. 'ನನ್ನ ಮಾನಸದ ಮದಗವೆ' ಎಂದಾಗ ತಾಯಿ ತನ್ನ ಮಗುವನ್ನು ಕುರಿತು ತನ್ನ ಮನ ಹಾಗೂ ಜೀವ ತುಂಬಿ ಹರಿದ ಭಾವ ವ್ಯಕ್ತವಾಗಿದೆ. ಅವಳ ಚೇತನವಾದ, ಅವಳ ರೂಹು ಆದ, ಅವಳ ಜೀವದ ಭಾಗವಾದ ಅವಳ ಒಡಲಿಂದ ಹೊರ ಬಂದ ಅವಳೇ ಆದ 'ಮದಗ' ಅದು.

ಹೀಗೆ ತಾಯಿತನವನ್ನು ಆವಿರ್ಭವಿಸಿಕೊಂಡ ಬೇಂದ್ರೆಯವರನ್ನು ಕಂಡಾಗ, ತಾಯಿತನ ಹೆಣ್ಣಿನಲ್ಲಿ ಉಂಟು ಮಾಡುವ ಇಂದ್ರಿಯಾತೀತವಾದ ಅನುಭವವನ್ನು ಇಂದ್ರಿಯಾನುಭವವನ್ನಾಗಿಸುವ ರೂಪಕಶಕ್ತಿ ಅಚ್ಚರಿಯನ್ನುಂಟುಮಾಡುತ್ತದೆ. ಹೆಣ್ಣು ಫಲವತಿಯಾಗಿ ಮಗುವನ್ನು ಪಡೆಯುವ ಅನುಭವ ಅವಳಲ್ಲಿ 'ಅಲೌಕಿಕ' ಶಕ್ತಿಯಾಗಿ ಅರಳುತ್ತದೆ.

ಅಂತಹ 'ಅಲೌಕಿಕ' ಅನುಭವ ಸ್ತ್ರೀಗೆ ಮಾತ್ರ ಸಾಧ್ಯ, ಪುರುಷನಿಗೆ ಸಾಧ್ಯವಿಲ್ಲ ಎಂಬುದನ್ನು ಬೇಂದ್ರೆ ಈ ಕವನದಲ್ಲಿ ಸಂಕೀರ್ಣ ಭಾವ ಸೂಕ್ಷ್ಮದಲ್ಲಿ ವ್ಯಕ್ತಪಡಿಸಿದ್ದಾರೆ.

ಈ ಕವನದಲ್ಲಿ ಬೇಂದ್ರೆ ಚಿಂತನೆ ಇನ್ನೂ ಮುಂದುವರಿದು ತಾಯಿಯ ಅಲೌಕಿಕ ಭಾವ ಮತ್ತೂ ಮೂರ್ತಗೊಳ್ಳುತ್ತದೆ.

'ಯಕ್ಷಾಂಗುಲಿಕೆಯಂತೆ ನಿನ್ನ ತೊಟೂಟ
ನಿನ್ನೆಲ್ಲ ಗುಟ್ಟರಿಯೆ ನಾನು
ನವೋನವ ಚಮತ್ಕಾರವೆ ನೀನಾವಲೋಕದ ಜೀವಿ ?'

ಹೀಗೆ ಮಗುವು ತಾಯಿಗೆ 'ಅಲೌಕಿಕ' ವಾಗಿ ಅಧ್ಯಾತ್ಮ ಯೋಗದ ಅನುಭಾವವನ್ನು ನೀಡುತ್ತದೆ.[೧೬]

**೨. ಚಳಿಯಾಕೆ**

ಧಾರವಾಡದ ಪ್ರಕೃತಿಯ ವಿಲಾಸ 'ಚಳಿಯಾಕೆ' ಕವನದಲ್ಲಿ ಬಳುಕಾಡಿದೆ. ಸೀಗೆ ಹುಣ್ಣಿಮೆ ಮತ್ತು ಅದರ ನಂತರ ಚಳಿ ಅವರನ್ನು ತಬ್ಬುವ ಅನುಭವ ಧಾರವಾಡದ ಜನರದು. ಸೀಗೆಹುಣ್ಣಿಮೆಯ ಹಿಂದು ಮುಂದು ಯಾವುದೇ ಚಳಿಯ ಸ್ಪರ್ಶವಿರುವುದಿಲ್ಲ. ಅದರ ಅನಂತರ ಚಳಿಯೆಂಬುದು ಸೋಗಿನ ಚಂದ್ರಮ ಬರುವಂತೆ ಬರುತ್ತದೆ.

ಸೀಗೆಹುಣ್ಣಿಮೆ ಮುಂದೆ
ಸೋಗಿನ ಚಂದ್ರಮ
ಸಾಗಿ ಬರುವೊಲು ಬರುವ ಚಳಿಯಾಕೆ. (ಚಳಿಯಾಕೆ : ಗರಿ)

ಚಂದ್ರ, ಸೋಗು, 'ಹೊಳೆಹೊಂಡದುಸಿರನ್ನೆ ನಯವಾಗಿ ನೆಯ್ದಂಥ ಮಂಜಿನ ಮೇಲ್ಸೆರಗು ಮೈತುಂಬ'ದ ಚಳಿಗಾಲದ ಅಮೂರ್ತಾನುಭವ ಇಲ್ಲಿ ಮೂರ್ತಗೊಂಡಿದೆ. ಇದೊಂದು ಕವಿಯ ಕುಶಲಕರ್ಮ. ಪ್ರಕೃತಿ ನುಡಿಕಂಪಾಗಿ ತಬ್ಬಿದ ದಿವ್ಯಾನುಭವ.

**ಸಾಂಸ್ಕೃತಿಕ ಹಿನ್ನೆಲೆ ಹಾಗೂ ರಾಷ್ಟ್ರಾಭಿಮಾನ**

ಬೇಂದ್ರೆಯವರು ಹುಟ್ಟಿ ಬೆಳೆದ ಕಾಮನಕಟ್ಟೆ ಅಂದಿಗೆ ಧಾರವಾಡದ ಕೇಂದ್ರ ಸ್ಥಾನವಾಗಿತ್ತು. ಅಲ್ಲಿ ನಡೆಯುತ್ತಿದ್ದ ದೊಡ್ಡಾಟ, ಬಯಲಾಟ, ಕಾಮನಹಬ್ಬ, ಅಲಾಬಿಯ ಮೆರವಣಿಗೆ, ಪುರವಂತರ ಮೇಳ, ಹೆಜ್ಜೆ ಮೇಳ, ಹಬ್ಬ ಹರಿದಿನ ಅವರನ್ನು ಜಾನಪದ ಸಂಸ್ಕೃತಿಯ ಭಾಗವಾಗಿ ಬೆಳೆಸಿತು. ಕಾಮನಕಟ್ಟೆಯಲ್ಲಿ ಸಾಹಿತ್ಯಕ, ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಚಿಂತನೆಯನ್ನು ಹೊತ್ತ ಶಾಂತಕವಿ, ಕಾವ್ಯಾನಂದ (ನರಸಿಂಹಾಚಾರ್ಯ) ಪುಣೇಕರ, ವೆಂಕಟರಂಗೋಕಟ್ಟಿ, ಗಂಗಸಿದ್ಧ ಗಂಗಪ್ಪ, ಸೋಂಡಿಲಕ್ಷಾಧೀಶ, ರಾವಸಾಹೇಬ ಮಾಳಾಪುರ, ನಾ. ಶ್ರೀ. ರಾಜಪುರೋಹಿತ, ಕಡಪಾ ರಾಘವೇಂದ್ರರಾವ್ ಮುಂತಾದವರು ವಾಸಿಸುತ್ತಿದ್ದರು. ಅದು ಆಲೂರು ವೆಂಕಟರಾಯರ ರಾಷ್ಟ್ರೀಯ ಚಳವಳಿಯ ಕೇಂದ್ರವಾಗಿತ್ತು. ಆಲೂರರು ಸ್ಥಾಪಿಸಿದ 'ಕರ್ನಾಟಕ ನೂತನ ರಾಷ್ಟ್ರೀಯ ವಿದ್ಯಾಲಯ' ಬೇಂದ್ರೆಯವರ ಮನೆಯ ಎದುರಿನಲ್ಲಿತ್ತು. 'ಈ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗೆ ಅತಿರಥಿ ಮಹಾರಥಿಗಳಾದ ರಾಷ್ಟ್ರೀಯ ಮುಖಂಡರು ಮೇಲಿಂದ ಮೇಲೆ ಭೇಟಿಯನ್ನು ಕೊಡುತ್ತಿದ್ದರು. ಈ ಉಜ್ವಲವಾದ ರಾಷ್ಟ್ರೀಯ ವಾತಾವರಣವು, ಬಾಲಕರಾದ ಬೇಂದ್ರೆಯವರ ಕೋಮಲವಾದ ಅಂತಃಕರಣದ ಮೇಲೆ ಸಂಸ್ಕಾರವನ್ನುಂಟು ಮಾಡದೆ ಬಿಡಲಿಲ್ಲ'[೧೭] ಎಂದು ಅವರ ಶಿಕ್ಷಕರಾದ ನಾ.ಶ್ರೀ. ರಾಜಪುರೋಹಿತರು ತಿಳಿಸಿದ್ದಾರೆ.

ಲಾವಣಿ ಹಾಗೂ ಗೀ ಗೀ ಪದಗಳಲ್ಲಿ ಗಾಯಕರು ಕಿತ್ತೂರು ಚನ್ನಮ್ಮ, ಸಂಗೊಳ್ಳಿರಾಯಣ್ಣ, ಸುರಪುರ ವೆಂಕಟಪ್ಪನಾಯಕ, ಮುಂಡರಗಿ ಭೀಮರಾಯರ ಹೋರಾಟದ ಸಾಹಸಗಳನ್ನು ಹಾಡುತ್ತಿದ್ದರು. ಅದು ಬೇಂದ್ರೆಯವರ ಮನದ ಹಾಡಾಗಿ ಸ್ವಾತಂತ್ರ್ಯಾಭಿಮಾನವನ್ನು ಮೂಡಿಸಿತು.

ಬೇಂದ್ರೆಯವರು ಬಿ.ಎ. ಅಭ್ಯಾಸ ಮಾಡಲು ಪುಣೆಗೆ ಹೋದಾಗ ಅಲ್ಲಿ ತಿಲಕ್, ಗೋಖಲೆ, ರಾನಡೆ ಅವರ ತೀವ್ರ ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಚಿಂತನೆಯ ಅರಿವಿಗೆ ಒಳಗಾದರು. ಅವರು ಐರಿಶ್ ಕವಿ ಜೋರ್ಜ್ ರಸೆಲ್ (ಎ.ಈ), ಖಲೀಲ್ ಜಿಬ್ರಾನ್, ಯೋಗಿ ಅರವಿಂದ ಮತ್ತು ಕವಿ ರವೀಂದ್ರನಾಥ ಠಾಗೂರ್ ಅವರನ್ನು ತನ್ನ ಗುರುಗಳೆಂದು ಹೇಳಿಕೊಂಡಿದ್ದಾರೆ. ಆ ಗುರುಗಳನ್ನು ಅವರು ನೆನೆದಿರುವ ರೀತಿ ಅನನ್ಯವಾಗಿದೆ.

'ಏ.ಈ' ಕವಿ ನನ್ನ ಜೀವನದ ಲೋಲಕದಲ್ಲಿ ಕಿರಣದಂತೆ ಸೇರಿದ್ದಾನೆ; ಜಿಬ್ರಾನನಗೆ ಎಣ್ಣೆ ಮಜ್ಜನ ಮಾಡಿಸಿ ಎರೆದು, ತೊಟ್ಟಿಲ ನಿದ್ರೆಯಲ್ಲಿಯೇ ಕನಸಿನ ಆಕಾಶಕ್ಕೆ ಎತ್ತೆತ್ತಿ ಒಯ್ದಿದ್ದಾನೆ.'[೧೮]

'ಉಭಯವು ಅಭಯವಾದುದನ್ನು ನನ್ನಿಬ್ಬರು ಗುರುಗಳಲ್ಲಿ ಕಂಡೆ. ಎರಡು ಕಣ್ಣು ಒಂದು ನೋಟ. ರವಿ ಉದಯದಿಂದ ಅರವಿಂದ ಅರಳಿತು.'[೧೯]

ಇಂಗ್ಲಿಷ್ ಶಿಕ್ಷಣ ಪಡೆದ ವಿದ್ಯಾವಂತರಲ್ಲಿ ಜಾಗೃತವಾದ ರಾಷ್ಟ್ರೀಯ ಚಿಂತನೆಯೆ ಭಾರತೀಯ ನವೋದಯ. ಅದು ನಮ್ಮ ಭಾರತೀಯ ಸಂಸ್ಕೃತಿಯನ್ನು ಚೆನ್ನಾಗಿ ತಿಳಿಯುತ್ತ, ಅದನ್ನು ಅದರ ಅರೆಕೊರೆಗಳಿಂದ ಮುಕ್ತಗೊಳಿಸಿ ಪುನರ್ ರಚಿಸುವುದಾಗಿತ್ತು. ಅದು ರಾಷ್ಟ್ರಾಭಿಮಾನವನ್ನು ಮೂಡಿಸಿ ಭಾರತವನ್ನು ಬ್ರಿಟೀಷರಿಂದ ಸ್ವಂತ್ರಗೊಳಿಸುವುದರ ಜೊತೆಗೆ ನಾಡು ನುಡಿಯ ಅಭಿಮಾನವನ್ನು ಜಾಗೃತಗೊಳಿಸುವುದಾಗಿತ್ತು. ಹಾಗೆ ಜಾಗೃತಗೊಂಡ ಬೇಂದ್ರೆ ಆದರ್ಶದ ದೀಪ್ತಿಯಿಂದ ಬ್ರಿಟೀಷರ ಅಡಿಯಲ್ಲಿ ಕೆಲಸ ಮಾಡುವುದಿಲ್ಲ ಎಂದು ನಿರ್ಧರಿಸಿದರು.

'ಬ್ರಿಟೀಷ್ ವಸಾಹತಿನ ವಿರೋಧಿ ಶಾಂತ ಕವಿಗಳು ಅವರ ಗುರುಗಳಾಗಿ, ಆ ಚಿಂತನೆಯ ಕಾವ್ಯದುರಿಯನ್ನು ಅವರಲ್ಲಿ ಹೊತ್ತಿಸಿದ್ದರು. ರಾಷ್ಟ್ರೀಯ ಚಳುವಳಿ ಧಾರವಾಡದಲ್ಲಿ ರೂಪುಗೊಂಡ ಕಾಮನಕಟ್ಟೆಯಲ್ಲಿಯೇ ಬೆಳೆಯುತ್ತಿದ್ದ ಬೇಂದ್ರೆಯವರು ರಾಷ್ಟ್ರೀಯ ಚಿಂತಕರಿಂದ ಪ್ರೇರಣೆಗೊಂಡು ವಸಾಹತು ವಿರೋಧಿ ಮೂಲಭಾವಗಳನ್ನು ತಿಳಿಯುತ್ತ ಅದರ ಮೂಲೋತ್ಪಾಟನೆಗೆ ಜನಾಂಗವನ್ನು ರೂಪಿಸಿ ಬೇಕಾದ ಶಿಕ್ಷಕ ವೃತ್ತಿ ಹಾಗೂ ಕಾವ್ಯ ಮಾಧ್ಯಮದತ್ತ ತಮ್ಮನ್ನು ತೊಡಗಿಸಿಕೊಂಡರು. ಬಿ.ಎ. ಪದವೀಧರನಾಗಿ ಉತ್ತಮವಾದ ಲೌಕಿಕ ಜೀವನ ನಿರ್ವಹಣೆಗೆ ಸಾಧನಾ ಮಾರ್ಗವಾಗಿಸಿಕೊಳ್ಳಬಹುದಾದ ವಿದ್ಯೆಯನ್ನು ಬೇಂದ್ರೆಯವರು ನಾಡಿನ ವಿದ್ಯಾರ್ಥಿಗಳನ್ನು ರೂಪಿಸುವ ಶಿಕ್ಷಕ ವೃತ್ತಿಗೆ ಮೀಸಲಾಗಿರಿಸಿಕೊಂಡರು. ಅವರ ಮಾನಸಿಕ ಪ್ರಪಂಚವನ್ನು ಹಣ ಸಂಪಾದನೆಗೆ ವಿದ್ಯೆ ಒಂದು ಮಾರ್ಗ ಎಂಬ ಭೌತಿಕ ಲಾಲಸೆ ಪ್ರವೇಶಿಸಲಿಲ್ಲ. ಅವರು ಜನಸಮೂಹದಿಂದ ದೂರವಾಗಿ ವೈಯಕ್ತಿಕ ಆಸೆಗಳ ಭೌತಿಕ ಸಮೃದ್ಧಿಗೆ ಮನಸ್ಸು ಕೊಡದೆ, ಜನಸಂವಹನದ ಮೂಲ ನೆಲೆ ಶಾಲಾ ಶಿಕ್ಷಣದತ್ತ ಮನಸ್ಸು ಮಾಡಿದ್ದು, ಅವರ ಮನುಷ್ಯ ಚೇತನದ ಎಚ್ಚರಗೊಳಿಸುವ ಮೂಲಭಾವವನ್ನು ಪರಿಚಯಿಸುತ್ತದೆ. ಬಾಲ ಮನಸ್ಸುಗಳನ್ನು ಸೃಜನಶೀಲಗೊಳಿಸುವ ಬೇಂದ್ರೆಯವರ ಆಲೋಚನೆಗಳು ಅವರ ಸೃಜನಶೀಲ ವ್ಯಕ್ತಿತ್ವವಾಗಿದೆ. ಅದೇ ಅವರ ಕಾವ್ಯ ಸೃಷ್ಟಿಯ ಮೂಲ ಆಂತರಿಕ ಶಕ್ತಿಯಾಗಿದೆ.[೨೦]

೧ನೇ ವರ್ಗದಿಂದ ಬಿ.ಎ. ವರೆಗೆ ಬೇಂದ್ರೆಯವರ ಜೊತೆಯಲ್ಲಿಯೇ ಶಾಲಾ ಕಾಲೇಜುಗಳಲ್ಲಿ ಅಭ್ಯಾಸ ಮಾಡಿದ ಗೆಳೆಯ ಹಾಗೂ ನವೋದಯದ ಕವಿ ಶ್ರೀಧರ ಖಾನೋಳಕರ ಅವರು 'ಆಗಿನ ಕಾಲದಲ್ಲಿ ಅಂದರೆ ೧೯೧೭–೧೮ರಲ್ಲಿ ಸರಕಾರೀ ನೌಕರಿ ಹಿಡಿದಿದ್ದರೆ ಅವರಿಗೆ ಈಗ ಐನೂರರಷ್ಟು ಸಂಬಳವು ದೊರೆಯುವಷ್ಟು

ಸೌಕರ್ಯವು ಇತ್ತು. ಅವರಿಗೆ ಒಂದೇ ಧ್ಯೇಯ ಕರ್ನಾಟಕದ ಸಂಸ್ಕೃತಿಯ ಉನ್ನತಿ. ಆ ಧ್ಯೇಯವನ್ನು ಸಾಧಿಸುವುದು ಇನ್ನೆಲ್ಲಿಯೂ ಅಲ್ಲ. ಕರ್ನಾಟಕದಲ್ಲಿ ಅದೂ ಅಧ್ಯಾಪಕರಾಗಿ ಅಂದರೆ ಎಳೆಮಕ್ಕಳಿಗೆ ಕರ್ನಾಟಕಾಭಿಮಾನವನ್ನು ಕಲಿಸಿ ಅದನ್ನು ಬೇರೂರುವಂತೆ ಮಾಡುವುದು’[೨೧] ಎಂದು ತಿಳಿಸಿದ್ದಾರೆ.

‘ಅಹಹ ಸ್ವಾತಂತ್ರ್ಯದೇವಿ’, ‘ತರುಣ ತಪಸ್ವಿ’, ‘ಕನಸಿನೊಳಗೊಂದು ಕನಸು’, ‘೨೨,೦೦,೦೦,೦೦೦’, ‘ನರಬಲಿ’, ‘ಹಂಪಿ ವಿಜಯನಗರ ದರ್ಶನ’ ಮುಂತಾದ ರಾಷ್ಟ್ರದ ಸ್ವಾತಂತ್ರ್ಯ ಹೋರಾಟ ಮತ್ತು ಕನ್ನಡ ನಾಡಿನ ಅಭಿಮಾನ ಕುರಿತ ಕವನಗಳನ್ನು ರಚಿಸಿದರು.

‘A poet is a man speaking unto other men’ ಎಂಬ ರೊಮ್ಯಾಂಟಿಕ್ ಕವಿ ವರ್ಡ್ಸ್‌ವರ್ತ್‌ನ ನುಡಿಯಂತೆ ತಮ್ಮ ಕಾವ್ಯವನ್ನು ಜನಪರವಾಗಿ ರಚಿಸಿದರು. ಬೇಂದ್ರೆಯವರು ತಮ್ಮ ಅಂತರಂಗದ ಸತ್ಯದಂತೆ ಆದರ್ಶವನ್ನು ಜೀವನದ ವ್ರತವಾಗಿಸಿಕೊಂಡರು. ನಿಜ, ಚೆಲುವು, ನಲಿವು, ಒಳಿತುಗಳನ್ನು ಕಾವ್ಯದಲ್ಲಿ ಮೂಡಿಸಿ ನವೋದಯ ಕಾವ್ಯವನ್ನು ಶ್ರೀಮಂತಗೊಳಿಸಿದರು.

ನಿಜದಲ್ಲೆ ಒಲವಿರಲಿ
ಚೆಲುವಿನಲೆ ನಲಿವಿರಲಿ
ಒಳಿತಿನಲೆ ಬಲವಿರಲಿ ಜೀವಕಳೆಯಾ
ದೇವ ಜೀವನ ಕೇಂದ್ರ
ಒಬ್ಬೊಬ್ಬನೂ ಇಂದ್ರ
ಏನಿದ್ದರೂ ಎಲ್ಲ ಇಲ್ಲೆ ತಿಳಿಯಾ.

(ಬದುಕು ಮಾಯೆಯ ಮಾಟ–ಗಂಗಾವತರಣ)

ಸಾಹಿತ್ಯ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ‘ಗೆಳೆಯರ ಗುಂಪು’ ಕಟ್ಟಿದರು. ೧೯೩೦ರಲ್ಲಿ ‘ಜಯ ಕರ್ನಾಟಕದಲ್ಲಿ’ ಪ್ರಕಟವಾದ ‘ನರಬಲಿ’ ಕವನದಿಂದ ಆಕ್ರೋಶಗೊಂಡ ಬ್ರಿಟೀಷರು ಅವರನ್ನು ೧೯೩೨ರಲ್ಲಿ ಬಂಧಿಸಿ ಬೆಳಗಾವಿಯ ಹಿಂಡಲಗಾ ಜೇಲಿನಲ್ಲಿ ಸೆರೆಯಲ್ಲಿಟ್ಟರು. ಆಗ ಅವರು ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನ ಶಿಕ್ಷಕ ವೃತ್ತಿ ಕಳೆದುಕೊಂಡರು. ಯಾರೂ ಅವರಿಗೆ ಕೆಲಸ ಕೊಡಬಾರದು ಎಂದು ಬ್ರಿಟೀಷರು ಆಜ್ಞೆ ಹೊರಡಿಸಿದ್ದರಿಂದ ಎಂ.ಎ. ಉನ್ನತ ವಿದ್ಯಾಭ್ಯಾಸಕ್ಕಾಗಿ ಪುಣೆಗೆ ಹೋದರು. ಆ ಸಂದರ್ಭವನ್ನು ‘ಸಖೀಗೀತ’ದಲ್ಲಿ ಹೀಗೆ ಹೇಳಿಕೊಂಡಿದ್ದಾರೆ:

‘ನರಬಲಿ’ ಕವನವು ಬಲಿ ಮಾಡಿತೆನ್ನನು
ಹೆಳವನಿದ್ದಲ್ಲಿಗೆ ಹೊಳೆ ಬಂದಿತು.
ಮನೆಯನು ಮುರಿದಿತು ಹಾರು ವಿಹಂಗಮ !
ಜಂಗಮ ದೀಕ್ಷೆಯು ನಿನಿಗೆಂದಿತು.’ (ಸಖೀಗೀತ)

## ಸಾಂಸಾರಿಕ ಜೀವನ

ಬೇಂದ್ರೆಯವರಿಗೆ ೧೯೩೬ರಿಂದ ೧೯೪೪ರವರೆಗೆ ನೌಕರಿಯಿಲ್ಲದೆ ಜೀವನ ದುರ್ಬರವಾಗಿತ್ತು. ಅವರ ಆದರ್ಶ ಹೆಂಡತಿ ಮಕ್ಕಳಿಗೆ ಸುಖಜೀವನದ ನೆಮ್ಮದಿ ತರುವುದಾಗಿರಲಿಲ್ಲ. ಅದು ಅವರಿಗೂ ಗೊತ್ತಿತ್ತು. ಅದನ್ನು ಅವರು ಕಾವ್ಯದಲ್ಲಿ, ತನ್ನ ಪತ್ನಿಗೆ ಹೀಗೆ ಹೇಳಿದ್ದಾರೆ :

'ಹರಿವ ನೀರಿನ ಮೇಲೆ ಹರಗೋಲ-ಮನೆ ಕಟ್ಟಿ
ಗೊತ್ತಿಲ್ಲವೆನಲ್ಲೆ ! ಹೊರಟಿಹೆವು ?
ನೆಲವೆಂದು ಸ್ಥಿರವೆಂದು ಅಸ್ತಿವಾರವ ಹಾಕಿ
ನಾಡಾಡಿಜನ, ಮನೆ ಕಟ್ಟಿಹುದು.' (ಸಖೀಗೀತ)

ಬೇಂದ್ರೆಯವರು ಆದರ್ಶದ ಬೆಂಕಿಯಲ್ಲಿ ಕನಸುಗಳ ಬೆನ್ನತ್ತಿ ಹೋದರು. ನಿರುದ್ಯೋಗದ ದಿನಗಳಲ್ಲಿ ಸಂಸಾರ ನಿರ್ವಹಣೆ ಕುಂಟುತ್ತ ಸಾಗಿತ್ತು. 'ನರಬಲಿ' ಕವನ ರಚನೆಯ ಕಾರಣದಿಂದ ಅವರ ಪುಟ್ಟ ಕುಟುಂಬ ಬಿರುಗಾಳಿಗೆ ತತ್ತರಿಸಿ ಹಾಳಾದ ತೋಟದಂತಾಯಿತು. ಆ ನೆಲೆಗೆಟ್ಟ ಸ್ಥಿತಿಯಲ್ಲಿ ಅವರ ದಾಂಪತ್ಯ ನೇಹವು ಪ್ರೀತಿ ದೂರವಾಗಿ ರಸವಿಂಗಿಸಿಕೊಂಡಿತು. ಆ ದಂಪತಿಗಳು ತಮ್ಮೊಳಗಿನ ತಪ್ಪಿಲ್ಲದೆ ಕಿಡಿಗೇಡಿ ದೈವದ ಆಟದಿಂದ ಒಡೆದ ಮನದವರಾಗಿ ಪರಸ್ಪರರು ಮುಖಭಂಗಿಸಿ ನಡೆವ ಆಘಾತ ಅವರಿಗೆ ಸಹಿಸಲು ಅಸಾಧ್ಯವಾಗಿತ್ತು. ಅದನ್ನು ಅವರು ಪ್ರತಿಮಾತ್ಮಕವಾಗಿ ಹೀಗೆ ಹೇಳಿಕೊಂಡಿದ್ದಾರೆ:

ಗಾಣಿಗಗೆ ಸಿಟ್ಟಾಗಿ ಒಣರೊಟ್ಟಿ ತಿಂದಂತೆ
ಅಸಮಾಧಾನಕೆ, ರಸವಿಂಗಿಸಿ
ಹಾದಿಯ ದೆವ್ವವ ಮನೆಯೊಳಗೆ ಕರೆದಂತೆ
ಒಬ್ಬರನೊಬ್ಬರು ಮುಖ ಭಂಗಿಸಿ (ಸಖೀಗೀತ)

ದಿನ ದಿನ ಮಕ್ಕಳ ತುತ್ತಿನ ಚೀಲ ತುಂಬಿಸಲಾಗದ ಹತಾಶ ಬದುಕಿನ ನಿರಾಶ ಪತ್ನಿ ಲಕ್ಷ್ಮೀಬಾಯಿಯ ಉರಿಗಣ್ಣನ್ನು, ತಮ್ಮದೇನೂ ತಪ್ಪಿಲ್ಲದ ಮುಗ್ಧ ಮಕ್ಕಳ ಅಸಹಾಯ ನೋವಿನ ಬೇಗೆಯನ್ನು ಬೇಂದ್ರೆಯವರು ಪ್ರತಿಮಾತ್ಮಕವಾಗಿ ಹೇಳಿರುವ ರೀತಿಯು-ಕನ್ನಡ ಕಾವ್ಯದಲ್ಲಿ ಓರ್ವ ಅಸಹಾಯಕ ತಂದೆಯ ಒಳತುಮುಲದ ಅಪೂರ್ವ ಅಭಿವ್ಯಕ್ತಿಯಾಗಿದೆ. ಜೊತೆಗೆ ಅದು ಸ್ವಸಾಮರ್ಥ್ಯವಿಲ್ಲದ ನಿಷ್ಪಾಪದ ಮಕ್ಕಳ ದುರಂತಕ್ಕೆ ಕನ್ನಡಿ ಹಿಡಿದಂತಿದೆ.

ಉರಿ ಮೋರೆ ಬಿರಿಗಣ್ಣು ಮನೆಯ ಹೊತ್ತಿಸುತಿರಲು
ಕಾಡ-ಬೇಗೆಗೆ ಸಿಕ್ಕ ಮರಿಗಳೊಲು
ಪಕ್ಕಗಳು ಬಲಿತಿಲ್ಲ, ಹಾರಿಕೆ ಕಲಿತಿಲ್ಲ
ಮುಗಿಲನ್ನೆ ಮೊರೆಹೊಕ್ಕು ನೋಡುವವು (ಸಖೀಗೀತ)

'ಉರಿಗಣ್ಣು' ಪ್ರತಿಮೆಯು ಅವರ ಮನೆಯಲ್ಲಿ ಒಲೆ ಹೊತ್ತಿ ಬೇಯಿಸಲು ಏನೂ ಇಲ್ಲದೆ ಇರುವ ಸೀತಿಯನ್ನು, ಪತ್ನಿಯ ಕೋಪ ತಾಪ ಮತ್ತು ಉಪವಾಸದಿಂದ ಉರಿವ ಕುಟುಂಬದ ಬೇಗೆಯನ್ನು ಧ್ವನಿಸುತ್ತದೆ.

ಸೆರೆವಾಸದ ನಂತರದ ಸ್ಥಿತಿ ಅವರಿಗೆ 'ಕಾಳರಾತ್ರಿ'ಯಾಗಿತ್ತು. ಅದನ್ನು ಅವರು 'ಹನ್ನೆರಡು ವರುಷದ ತಪ ವಿಫಲವಾಯಿತೋ!' 'ನಿಂತಂಥ ನೆಲವೆಲ್ಲ ನೀರಾಯಿತೋ' ಎಂದು ನೆಲೆಯಿಲ್ಲದ ಸ್ಥಿತಿಯನ್ನು ರೂಪಾಕತ್ಮಕವಾಗಿ ಬಣ್ಣಿಸಿದ್ದಾರೆ. ಅಂತಹ ಪರಿಸ್ಥಿತಿಯಲ್ಲಿ ಅವರನ್ನು ಕಾಪಾಡಿದ್ದು ಮಾಸ್ತಿಯಂಥಹ 'ಕೆಲವೊಬ್ಬ ಗೆಳೆಯರ ವಿಶ್ವಾಸ, ಒಬ್ಬಿಬ್ಬ ಗೆಳೆಯರ ನೆರೆಯೊಲವು.' ಅವರ ದುಃಖವನ್ನು ಹಗುರ ಮಾಡಿದ್ದು ಸಖಿಯ ನಸುನಗು.

ಇದು ನವೋದಯ ಕಾವ್ಯ ಶಿಲ್ಪಿ ಬೇಂದ್ರೆ ತನ್ನ ಉರಿವ ಬದುಕನ್ನು ಕಾವ್ಯದಲ್ಲಿ ಕೆಂಡವಾಗಿ ನೀಡಿರುವುದು. ಇದು ಈ ನೆಲದಲ್ಲಿ ಆದರ್ಶದ ಬೆಂಕಿಯಿಂದ ಬೆಂದ ಕವಿಯ ಪಾಡು. ಹಾಗಾಗಿ ಆತ ಹಾಡಿದ :

'ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ! ನಿನಗೆ !
ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ !

(ಪೀಠಿಕಾಪದ್ಯ : ನಾದಲೀಲೆ)

ಅವರಿಗೆ ಹುಟ್ಟಿದ ಒಂಬತ್ತು ಮಕ್ಕಳಲ್ಲಿ ಉಳಿದವರು ಮೂರು ಜನ ಮಾತ್ರ. ಅವರು ಹುಟ್ಟು-ಸಾವುಗಳ ಅಂತರ್ಯವನ್ನು ಶೋಧಿಸುತ್ತ ಬದುಕಿಗೆ ಆಶಿಸಿದ ಕವಿಯಾಗಿದ್ದರು. ಅವರ ಜೀವನ ಶ್ರದ್ಧೆ, ಬದುಕಿನ ಏಳುಬೀಳಿನಲ್ಲಿ ಉಳಿಯಬೇಕು ಎಂಬ ಛಲ ಅವರಿಂದ 'ಸಾವಿಗಿಂತ ಬೀಳುಮೇಲು' ಎಂಬ ಚಿಂತನೆಯನ್ನು ಹೊಮ್ಮಿಸಿತು. ಸುಖದ ದಿನ ಬರುವುದೆಂಬ ಆಶಾಭಾವದಲ್ಲಿ ಅವರಿದ್ದರು.

'ಕತ್ತಲೆಯ ಮನೆಯಿಂದ ಬೆಳಕಿಂಡಿಯೊಳಗಿಂದ
ಗಗನದ ನೀಲಿಮೆಯನು ಕಂಡೆವು.' (ಸಖೀಗೀತ)

ಬೇಂದ್ರೆಯವರು ಮನೆಗೆ ಬಂದವರಿಗೆ ನೀಡಲು ಏನೂ ಇಲ್ಲದ ಪರಿಸ್ಥಿತಿಯಲ್ಲಿ 'ಗಗನದ ನೀಲಿಮೆಯನು ಕಾಣುತ್ತ' ಕಾವ್ಯದ ಸವಿಯ ಜೊತೆಗೆ ಒಂದು ಚಿಟಿಕೆ 'ಸಕ್ಕರಿ' ನೀಡುತ್ತಿದ್ದರು !

ಅಂತಹ ಪರಿಸ್ಥಿತಿಯಲ್ಲಿ 'ಜೀವನ' ಪತ್ರಿಕೆಯ ಸಂಪಾದಕರನ್ನಾಗಿ ನೇಮಿಸಿಕೊಂಡು ಬೇಂದ್ರೆಯವರನ್ನು ಪೋಷಿಸಿದವರು ಕನ್ನಡದ ಆಸ್ತಿ ಮಾಸ್ತಿ. ಮಾಸ್ತಿಯವರ ಸಾಹಿತ್ಯ ಪೋಷಕ ನಡೆ ಇಡೀ ನಾಡಿಗೆ ಒಂದು ಮಾದರಿ. ಅವರು ಬೇಂದ್ರೆಯವರಿಗೆ ಅಣ್ಣನಂತಿದ್ದರು.

ಬೇಂದ್ರೆಯವರ ಸಾಧನ ಕೇರಿಯ ಮನೆ ಅವರ ಚಿಕ್ಕಪ್ಪ ಬಂಡೋಪಂತ ಬೇಂದ್ರೆಯವರು ನೀಡಿದ್ದು. ಅದನ್ನು 'ಸಖೀಗೀತ'ದಲ್ಲಿ ಬೇಂದ್ರೆ ಹೀಗೆ ನೆನೆದಿದ್ದಾರೆ:

'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು
ಮಮತೆಯ ಕುರುಹಾಗಿ ತಾ ದೊರಕಿತು.'

ಬೇಂದ್ರೆಯವರು 'ಸುಖದುಃಖ ಸಂಗಮವಾದ ಹೃದ್ರಂಗವು ಪಾವನವೆಂಬೆನು ಯಾವಾಗಲು' ಎಂದು ತಿಳಿದು, 'ಬಡತನ ಒಡೆತನ ಕಡೆತನ ಕುಳಿದಾವೇನ ಎದೆ ಹಿಗ್ಗು ಕಡೆ ಮುಟ್ಟ' ಎಂಬ ಹಿಗ್ಗಿನಿಂದ ಇದ್ದ ವರ ಕವಿ. ಅವರು ರಚಿಸಿದ 'ಸಖೀಗೀತ' ಮತ್ತು 'ಬಾಲ್ಯಕಾಂಡ' ಖಂಡಕಾವ್ಯಗಳು ಜಗತ್ತಿನ ಕಾವ್ಯದ ಇತಿಹಾಸದಲ್ಲಿ ಓರ್ವ ಶ್ರೇಷ್ಠ ಕವಿ ಕಾವ್ಯ ರೂಪದಲ್ಲಿ ರಚಿಸಿದ ಅತ್ಯುತ್ತಮ 'ಆತ್ಮಕಥೆ' ಗಳಾಗಿವೆ.

ಬೇಂದ್ರೆಯವರು ಅಸ್ಥಿರವಾದ ಬಣ್ಣ, ಹೊಳಪು, ಮೆರುಗುಗಳಿಗಿಂತ ಹೃದಯದಲ್ಲಿ ಶಾಶ್ವತವಾಗಿರುವ ಸತ್ಯ, ಶಾಂತಿ, ಪ್ರೀತಿಗಳಿಗೆ ತಮ್ಮ ಕಾವ್ಯದಲ್ಲಿ ಸ್ಥಾನವನ್ನು ಕೊಟ್ಟರು. ಅವುಗಳನ್ನು ಆಪ್ಯಾಯಮಾನವಾಗಿ ಬಂದು ಮಧುರ ಭಾವದಂತೆ ಚಿತ್ರಿಸುತ್ತಲೇ ಅದು ನೀಡುವ ಮಾನವತಾವಾದದ ಕಡೆಗೆ ಸಹೃದಯರನ್ನು ಕೊಂಡೊಯ್ದರು. ಪ್ರಾಪಂಚಿಕವಾದ ಸುಖ ಸಂತೋಷದಲ್ಲಿಯೇ ಶಾಶ್ವತವಾದ ಜೀವನ ಮೌಲ್ಯಗಳನ್ನು ಅತಿ ಸೂಕ್ಷ್ಮವಾಗಿ ಕಾವ್ಯದಲ್ಲಿ ಹೆಣೆದರು. ಆ ಒಂದು ವಿಶಿಷ್ಟ ಕಾವ್ಯಶೈಲಿ ಅವರ ಆಧ್ಯಾತ್ಮಿಕ ಮನೋಲಹರಿಯ ಭಾವವು ಆಗಿತ್ತು. ಅದು ಜಗದ ಹೆಣ್ಣು ಗಂಡುಗಳನ್ನು ತಮ್ಮ ನಿಜ ನೆಲೆಯ ಅರಿವಿನಲ್ಲಿ ವಿಕಾಸ ಪಥದತ್ತ ಕೊಂಡೊಯ್ಯುವುದಾಗಿತ್ತು. ಆಕರ್ಷಣೆ, ಮೋಹ, ಪ್ರಲೋಭನೆಗಳ ಪರಿಧಿಯಲ್ಲಿಯೇ ಚಿತ್ರಣವನ್ನು ನೀಡುತ್ತ, ಅದರಿಂದ ಛಂಗನೆ ಏರಿ ಪ್ರೀತಿ ಪ್ರೇಮದ ಆತ್ಮೀಯ ಭಾವದಲ್ಲಿ ಸ್ಥಿರಗೊಳ್ಳುವಂತೆ ಮಾಡುವ ಬೇಂದ್ರೆ ಕನ್ನಡ ಕಾವ್ಯಲೋಕದ ಅಚ್ಚರಿ.

'ಪ್ರೇಮಾನಃ ಪಲ್ಲವಿಸದಃ ಕಾಮದ ಕಾವಿನ್ಯಾಗ
ದೇವ-ದಾನವ-ಮಾನವರೆಲ್ಲಾ ಬೂದಿ.
ಎಷ್ಟು ಓದಿ, ಏನು ಓದಿ, ಊದುಗೊಳವೀ ಗಾಳೀ ಬಾಳು
ಕೊಳಲಿನ ದನಿ ಬರಲಿ ಸನಿ'

(ಯಾವೂರಾಕಿ ನೀ ಮಾಯಾಕಾರತಿ ? –ಪರಾಕಿ)

**ನಾಕುತಂತಿ**

'ನಾಕುತಂತಿ' ಕವನವು ಈ ನೆಲದಲ್ಲಿ ಬಾಳಿ ಬದುಕುವ ಮಾನವ ತಿಳಿದು ನಡೆಯಬೇಕಾದ ಅಧ್ಯಾತ್ಮ ಭಾವದ ಜೀವನ ತತ್ತ್ವವನ್ನು ತಿಳಿಸುತ್ತದೆ. ನಾನು, ನೀನು, ಆನು, ತಾನು ಎಂಬ ನಾಕು ಪದಗಳ ಅರ್ಥವನ್ನು ವಿದ್ವಾಂಸರು ಹಲವು ರೀತಿ ಗ್ರಹಿಸಿದ್ದಾರೆ.

'ನಾಕುತಂತಿ' ಕನ್ನಡ ಜನನುಡಿ, ಗ್ರಾಮೀಣ ಜನರ ನಂಬಿಕೆ, ನಮ್ಮ ಭಾರತೀಯ ಪರಂಪರೆಯ ಆಧ್ಯಾತ್ಮಿಕ ಯೋಗ ಮಾರ್ಗವನ್ನು ಪ್ರತಿಮಾತ್ಮಕವಾಗಿ ತಿಳಿಸಿದೆ. ಈ ಕವನದ ನಾಲ್ಕು ಭಾಗಗಳಲ್ಲಿಯ ಮೊದಲ ಭಾಗದ ಪ್ರಾರಂಭದ ನುಡಿ ಹೀಗಿದೆ :

'ಆವು ಈವಿನ
ನಾವು ನೀವಿಗೆ
ಆನು ತಾನದ
ತನನನಾಃ'

ಇಲ್ಲಿ ಕನ್ನಡ ನುಡಿ 'ಆವು' ಈ ಕವನದ ಕೀಲಿಕೈ. ಅದು ಅರ್ಥವಾಗದಿದ್ದರೆ ಈ ಕಾವ್ಯ ಅರ್ಥವಾಗುವುದಿಲ್ಲ. 'ಆವು' ಎಂದರೆ ಹಸು, ಕಾಮಧೇನು. ಈ ವಿಶ್ವವೆಂಬ ಕಾಮಧೇನು ಜನ್ಮ ಕೊಟ್ಟದ್ದರಿಂದ ನಾವು, ನೀವು ಆಗಿದ್ದೇವೆ ಎಂಬ ಸತ್ಯ. ನನ್ನ ತಂದೆ ನಾನು ಕುಳಿತುಕೊಳ್ಳುವಾಗ ಆನಿಕೊಂಡು ಕೂತುಕೊ ಎಂದು ಹೇಳುತ್ತಿದ್ದರು. ಇಡೀ ಜಗತ್ತಿಗೆ 'ಆನು' ಎಂಬ ಅನಂತ ಶಕ್ತನ ಆಧಾರ ಇದೆ. ಅದರ ಅರಿವಿನಲ್ಲಿ ನಾವು ಇದ್ದರೆ ಆಗ ಜೀವನ ತನನನಾಃ ಎಂಬ ಸಂಗೀತದಂತೆ ಮಧುರವಾಗುತ್ತದೆ.

ಈ ಕವನದ ಎರಡನೆಯ ಭಾಗದ ಮೊದಲ ನುಡಿ ಹೀಗಿದೆ :

'ಗೋವಿನ ಕೊಡುಗೆಯ
ಹಡಗದ ಹುಡುಗಿ
ಬೆಡಗಿಲೆ ಬಂದಳು
ನಡು ನಡುಗಿ'

ಕೀರ್ತಿನಾಥ ಕುರ್ತಕೋಟಿಯವರು 'ಹಡಗದ ಹುಡುಗಿ'ಯನ್ನು 'ದೂರದ ನಾಡಿನಿಂದ ಹಡಗಿನಿಂದ ಬಂದ ಹುಡುಗಿ. ಬತ್ತಲೆಯಿಂದಲೆ ತನ್ನ ಸೌಂದರ್ಯವನ್ನು ಮುಚ್ಚಿಕೊಂಡವಳು''[೨೨] ಎಂದು ವಿಮರ್ಶಿಸಿದ್ದಾರೆ. ನಾನು ಈ ಭಾಗವನ್ನು ಕುರಿತು ಚಿಂತಿಸಿದಾಗ ಬೇಂದ್ರೆಯವರು 'ಹಡಗದ ಹುಡುಗಿ'ಯನ್ನು ಪ್ರತಿಮಾತ್ಮಕವಾಗಿ ಬಳಸಿದ್ದಾರೆ ಎನಿಸಿತು. ಈ ಕವನದ ಮೂರನೆಯ ಭಾಗದ ಸಾವಿ ಮಗಳನ್ನು ಜ್ಞಾನ ಕನ್ಯೆಯೆಂದು, ಭಾವಿ ಮಗಳನ್ನು ಮೋಕ್ಷ ಕನ್ಯೆಯೆಂದು ವ್ಯಾಖ್ಯಾನಿಸಿರುವ ನನಗೆ ಕೀರ್ತಿನಾಥ ಕುರ್ತಕೋಟಿಯವರ ಅಭಿಪ್ರಾಯ ಸರಿಯಲ್ಲ ಎನಿಸಿತು. ನಮ್ಮಮ್ಮ ಹೇಳುತ್ತಿದ್ದ ನುಡಿಗಟ್ಟು ಗಂಡ ಕೊಡವಿ ಹೋದ ರಂಬೆ ಅಂಗವ್ನೆ, ಹೆಂಡ್ತಿ ಹಡಗು ಇದ್ದಂಗವ್ಳೆ' ಎಂಬ ಹಡಗಿನಂತವಳನ್ನು ಕುರಿತು ಬೇಂದ್ರೆ ಹೇಳಿದ್ದಾರೆ ಎಂಬುದು ಸ್ಪಷ್ಟವಾಯಿತು. ಸುಭದ್ರವಾದ, ಕಟ್ಟುಮಸ್ತಾದ ಎತ್ತರ ನಿಲುವಿನ ಹೆಣ್ಣು–ಜ್ಞಾನಕನ್ಯೆ. ಅವಳು ಹಡಗದ ಹುಡುಗಿ.

ಬೇಂದ್ರೆಯವರು ಷಟ್‌ಚಕ್ರಗಳ ಉಲ್ಮೀನಗೆ ಒಳಗಾಗಿ ಸಹಸ್ರಾರದಲ್ಲಿ ಬೆಳಕು ಕಾಣುವ ಯೋಗಿಯ ಚಿತ್ರಣವನ್ನು ಪ್ರತಿಮಾತ್ಮಕವಾಗಿ ಈ ಭಾಗದಲ್ಲಿ ನೀಡಿದ್ದಾರೆ.

'ನಾಡಿಯ ನಡಿಗೆಯ
ನಲುವಿನ ನಾಲಿಗೆ
ನೆನೆದಿರೆ ಸೋಲುವ
ಸೊಲ್ಲಿನಲ್ಲಿ'

ಮೂಲಾಧಾರ, ಅಧಿಷ್ಠಾನ, ಮಣಿಪುರ, ಅನಾಹತಿ, ವಿಶುದ್ಧಿ, ಆಜ್ಞಾಚಕ್ರಗಳನ್ನು ಜಾಗೃತಗೊಳಿಸಿಕೊಂಡ ಯೋಗಿಯ ಬೆನ್ನುಹುರಿಯಲ್ಲಿ ಸಹಸ್ರಾರಕ್ಕೆ ಸಾಗಿದ ಸಿದ್ಧಿ ಇದು. ಆಗ ಆಗುವ ಅನುಭಾವ ಎಂಥಹದು ಎಂದರೆ,

'ಮುಟ್ಟುದ ಮಾಟದ
ಹುಟ್ಟದ ಹುಟ್ಟಿಗೆ
ಜೇನಿನ ಥಳಿಮಳಿ
ಸನಿಹ ಹನಿ'

ಅದು 'ಜೇನಿನ ಥಳಿಮಳಿ' ಅರ್ಥಾತ್ ಅಮೃತ ವರ್ಷ. ಅದು ಹತ್ತಿರದಲ್ಲಿಯೆ 'ಸನಿಹ ಹನಿ'ಯಾಗಿ ಅಮೃತಧಾರೆಯ ಬಿಂದುಗಳನ್ನು ತೊಟ್ಟಿಕ್ಕುವ ಆನಂದವೃಷ್ಟಿ. ಅಂತಹ ಬ್ರಹ್ಮಸೃಷ್ಟಿಯಲ್ಲಿ ಬೆಸುಗೆಗೊಂಡ ಜೀವಾತ್ಮದ ಚಿತ್ರಣ :

'ಬೆಚ್ಚಿದ ವೆಚ್ಚವು
ಬಸುರಿನ ಮೊಳಕೆ
ಬಚ್ಚಿದ್ದಾವುದೊ
ನಾ ತಿಳಿಯೆ'

ಆ ನೆಲೆಗೆ ಏರಿದ ಯೋಗಿಯ ಸ್ಥಿತಿಯನ್ನು ಬೇಂದ್ರೆಯವರು ಈ ಕವನದ ಮೂರನೆಯ ಭಾಗದಲ್ಲಿ ಹೀಗೆ ವರ್ಣಿಸಿದ್ದಾರೆ :

'ಚಿತ್ತೀಮಳಿ, ತತ್ತಿ ಹಾಕತಿತ್ತು
ಸ್ವಾತಿ ಮುತ್ತಿನೊಳಗ
ಸತ್ತಿsಯೊ ಮಗನ
ಅಂತ ಕೂಗಿದರು
ಸಾವೀ ಮಗಳು, ಭಾವಿ ಮಗಳು ಕೂಡಿ'

ಚಿತ್ತೆಮಳೆ ಬಿದ್ದಾಗ ಸ್ವಾತಿ ಮುತ್ತಿನ ಚಿಪ್ಪಿನಲ್ಲಿ ಹನಿ ಬಿದ್ದು ಮುತ್ತಾಗುವುದು ಕವಿಸಮಯ. ಈ ಕವಿಸಮಯ ತಿಳಿಯದವರು ತಪ್ಪು ವ್ಯಾಖ್ಯಾನ ಮಾಡಿದ್ದಾರೆ. ಸಾಧಾರಣ ಮನುಷ್ಯನಾಗಿದ್ದವನು ಯೋಗಿಯಾದ ಮೇಲೆ ಮುತ್ತಾಗಿಹೋಗಿದ್ದಾನೆ. ಅದು ಮತ್ತೆ ನೀರಿಗೆ ಬಿದ್ದರೆ ನೀರಾಗುವುದಿಲ್ಲ. ಆತ್ಮಸಾಕ್ಷಾತ್ಕಾರ ಹೊಂದಿದ ಆತ ಸತ್, ಚಿತ್, ಆನಂದದ 'ಸತ್' ಆಗಿಹೋಗಿದ್ದಾನೆ.

ಈ ಕವನದ ನಾಲ್ಕನೆಯ ಭಾಗದ ಪ್ರಾರಂಭದ ನುಡಿ ಹೀಗಿದೆ :

'ನಾನು' 'ನೀನು'
'ಆನು' 'ತಾನು'
ನಾಕೇ ನಾಕು ತಂತಿ.

ಅರಿಸ್ಟಾಟಲ್‌ನಿಂದ ಹಿಡಿದು ರಾಧಾಕೃಷ್ಣನ್ ತನಕ ಜಗತ್ತಿನ ಚಿಂತಕರು ಈ ನೆಲದಲ್ಲಿ ಜನ್ಮ ತಾಳಿರುವ ಮನುಷ್ಯ ಜೀವನದ ಅರ್ಥವೇನು ? ಅವನು ಯಾವ ಅರಿವಿನಲ್ಲಿ ತನ್ನ ಜನ್ಮ ಸಾರ್ಥಕಪಡಿಸಿಕೊಳ್ಳಬೇಕು–ಎಂದು ಹಲವು ಬಗೆಯಲ್ಲಿ ಆಲೋಚಿಸಿ ತಮ್ಮ ಚಿಂತನೆಯನ್ನು ನೀಡಿದ್ದಾರೆ. ಬೇಂದ್ರೆಯವರು ಅದರ ಬಗ್ಗೆ ಕನ್ನಡ ನುಡಿಯಲ್ಲಿ ಕೊಟ್ಟಿರುವ ಚಿಂತನೆ ಇದು :

ನಾನು–ಅಹಂಕಾರ, ಅಹಂ; ನೀನು–ದೇಹದ ಮಮತೆ; ತಾನು–ಆತ್ಮ; ಆನು–ಪರಮಾತ್ಮ.

ಅಹಂ ಅನ್ನು ಸೋರಿಸಿಕೊಂಡು, ದೇಹದ ಮಮತೆಯನ್ನು ಬಿಟ್ಟು, ತಾನು ಎಂಬ ಆತ್ಮನಿಂದ ಆನು ಎಂಬ ಪರಮಾತ್ಮನನ್ನು ಕಾಣುವುದೆ 'ನಾಕುತಂತಿ'.[೨೩]

**ವಿಶ್ವ ಚಿಂತನೆಯ ವರಕವಿ**

ಬೇಂದ್ರೆಯವರ ವ್ಯಕ್ತಿತ್ವ ಬಾಲ್ಯದಿಂದಲೇ ಉತ್ತಮ ನಡೆ ನುಡಿಯಿಂದ ಆದರ್ಶದ ಬಾಳಿನ ಕಡೆ ಸಾಗುತ್ತ ವಿಕಾಸಗೊಂಡಿತ್ತು. ಸಾವು ನೋವು, ಕಷ್ಟ ಸುಖ, ಸಿಹಿಕಹಿ, ಜೇಲುವಾಸ ನಿರುದ್ಯೋಗಗಳಿಂದ ಗಟ್ಟಿಗೊಳ್ಳುತ್ತ ಹತಾಶರಾಗದೆ ಸ್ಥಿರಚಿತ್ತದಿಂದ ಬಾಳಿ 'ಬೆಂದು ಬೇಂದ್ರೆಯಾದರು.' ಜೀವನ ಮೌಲ್ಯಗಳ ಸಮಾಜಮುಖಿ ಚಿಂತನೆಯನ್ನು ಕಾವ್ಯದಲ್ಲಿ ನೀಡಿದರು. ಅವರಿಗೆ ಕಾವ್ಯರಚನೆ 'ಸಂತೃಪ್ತವಾದ ಸುಖದೊಂದು ತಕ್ಕೆ'ಯಾಗಿ ಜೀವನ ಮತ್ತು ಕಾವ್ಯ ಒಂದೇ ಆಗಿತ್ತು. ಅವರು 'ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ ಅಂಬಿಕಾತನಯನಿವನು' ಎಂಬ ಚಿಂತನೆಯಲ್ಲಿ ಕಾವ್ಯ ರಚಿಸಿದರು.

ಅವರ ಸಾಮಾಜಿಕ ಚಿಂತನೆಯ ಕವನಗಳು ಇಡೀ ವಿಶ್ವದೆಲ್ಲ ದೀನ ದಲಿತರ, ಅಸಹಾಯಕ ಶೋಷಿತರ ದನಿಯಾಗಿವೆ. 'ಕುರುಡು ಕಾಂಚಾಣ' ಹಣವಂತ ಬಂಡವಾಳ ಷಾಹಿಗಳ ಬರ್ಬರ ಶೋಷಣೆಯನ್ನು ಪ್ರತಿಮಾತ್ಮಕವಾಗಿ ಹಿಡಿದಿಟ್ಟ ಅತ್ಯುತ್ತಮ ಕವನ. 'ಕುರುಡು ಕಾಂಚಾಣ ಒಂದು ಅದ್ಭುತವಾದ ಪ್ರತಿಮಾ ಭಾವಗೀತೆ' ಎಂದು ಹೇಳುತ್ತ ಪ್ರಭುಶಂಕರ ಅವರು 'ಪಾಶ್ಚಾತ್ಯ ಸಾಹಿತ್ಯವನ್ನು ಬಲ್ಲವರು ಹೇಳುತ್ತಾರೆ, ಅಲ್ಲಿಯೂ ಇಷ್ಟು ಕಿರಿದರಲ್ಲಿ ಈ ತತ್ತ್ವ ಇಷ್ಟು ಶಕ್ತಿಪೂರ್ಣವಾಗಿ ರಸವ್ಯಂಜಕವಾಗಿ ನಿರೂಪಿತವಾಗಿಲ್ಲ.'[೨೪]

ವಿಶ್ವದ ಹಲವಾರು ಬಂಡವಾಳಷಾಹಿ ಬ್ಯಾಂಕುಗಳು, ಕಂಪನಿಗಳು ಮೋಸ ವಂಚನೆಯ ವ್ಯವಹಾರದಿಂದ ಮನಸೋಇಚ್ಛೆ ಕುಣಿದು ವಿಶ್ವ ವಾಣಿಜ್ಯ ವ್ಯವಸ್ಥೆ ಕುಸಿಯಲು ಕಾರಣವಾದವು. ನಮ್ಮ ದೇಶದಲ್ಲಿ ಹೇಗಾದರೂ ಹಣ ಮಾಡುವ ಪ್ರವೃತ್ತಿಗೆ ಒಳಗಾದ ಸತ್ಯಂ ಕಂಪ್ಯೂಟರ್ ಕಂಪನಿಯು 'ಹ್ಯಾಂಗಾರೆ ಕುಣಿ ಕುಣಿದು ಮಂಗಾಟ ನಡೆಸಿದಾಗ'

ಅದು ತಾನೇ ತಾನಾಗಿ ಕುಸಿದು ಅಂಗಾತ ಬಿತ್ತು. ಆಗ ಅದನ್ನು ಎತ್ತಿ ಒಗೆಯಬೇಕಾಯಿತು. ಈ ಹಿನ್ನೆಲೆಯಲ್ಲಿ, ಹಸಿವು ಮತ್ತು ಅನ್ನವನ್ನು ಹಿಡಿತದಲ್ಲಿಟ್ಟುಕೊಂಡ ಶೋಷಕರ ಮರ್ಮ ಅರಿತಿದ್ದ ವಿಶ್ವಾತ್ಮಕ ಚಿಂತನಶೀಲ ವ್ಯಕ್ತಿತ್ವವುಳ್ಳ ಬೇಂದ್ರೆಯವರು ಶೋಷಕರು ತಮ್ಮ ತೋಲತಪ್ಪಿದ ವರ್ತನೆಯಿಂದ ತಾವೇ ಕುಸಿದು ನಾಶವಾಗುವುದನ್ನು ಸಮರ್ಥವಾಗಿ ಆ ಕವನದ ಕೊನೆಯ ನುಡಿಯಲ್ಲಿ ಬಿಂಬಿಸಿದ್ದಾರೆ:

ಹ್ಯಾಂಗಾರೆ ಕುಣಿಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೊ, ಹೆಗಲಲಿ ಎತ್ತೋ. (ಕುರುಡು ಕಾಂಚಾಣಾ: ನಾದಲೀಲೆ)

ಬೇಂದ್ರೆಯವರು ಭೂಮಿತತ್ತ್ವದ ಚಿಂತನೆಯ ಹಲವಾರು ಕವನಗಳನ್ನು ರಚಿಸಿದ್ದಾರೆ. ಅವರಿಗೆ ತನ್ನ ತಾಯಿ ಅಂಬವ್ವನಂತೆ ಪವಿತ್ರಳಾದವಳು ಭೂಮಿತಾಯಿ. ಅವಳು ಅವರಿಗೆ 'ಚಿಗರಿಗಂಗಳ ಚೆಲುವಿ'. ಆ ಮುಗ್ಧ ಸುಂದರ, ಉಸಿರಿದ್ದ ಒಡಲನ್ನು ಆಳುವವರು ಬಂಡವಾಳಷಾಹಿಗಳು ಹಿಂಸಿಸಿ ಶೋಷಿಸುತ್ತಿರುವುದರ ಬಗ್ಗೆ ೧೯೩೯ರಲ್ಲಿಯೇ ನೊಂದ ಬೇಂದ್ರೆಯವರು 'ಚಿಗರಿಗಂಗಳ ಚೆಲುವಿ' ಕವನ ಬರೆದರು. ಭೂಮಿತಾಯಿಯ ನಾಶದಲ್ಲಿ ಸಕಲ ಜೀವಜಂತುಗಳ ನಾಶವಾಗಿ ಮನುಷ್ಯ ಇನ್ನಿಲ್ಲದಂತಾಗುವನು ಎಂದು ಎಚ್ಚರಿಸಿ, ಅದನ್ನು ಉಳಿಸುವ ಜಾಗೃತಿ ಮೂಡಲಿ ಎಂದು ಆಶಿಸಿದರು. ಈ ಜಗದಲ್ಲಿ 'ಗೆದ್ದವರ ಇದ್ದವರ ಹಾರಾಟ'. ಅದರ ಹೊಡೆತಕ್ಕೆ ಸಿಕ್ಕು 'ಅರೆಸತ್ತ ಜೀವ ಕೊಳತಾವೊ' ಎಂದು ಜಗದೆಲ್ಲ ಶೋಷಿತರ ಕೊಳೆತು ಹೋಗುವ ಬದುಕನ್ನು ಕಾವ್ಯವಾಗಿ ನೀಡಿದರು. ಶೋಷಕರನ್ನು 'ಬ್ಯಾಟಿನಾಯಿ' ಎಂದು ಕರೆದು ಭೂಮಿತಾಯಿಯ ನೋವನ್ನು ಪ್ರತಿಮಾತ್ಮಕವಾಗಿ ಹೀಗೆ ಚಿತ್ರಿಸಿದರು :

ಬ್ಯಾಟಿ ನಾಯೊದರ್‍ಯಾವೊ
ಹಸುಜೀವ ಬೆದರ್‍ಯಾವೋ
ಗಳಗಳನೆ ಗಿಡದೆಲಿ ಉದರ್‍ಯಾವೊ
ಗೆಣೆಯಾ ಉದರ್‍ಯಾವಽ
ದಿನ್ನಿ ಮಡ್ಡಿಗುಡ್ಡ ಅದರ್‍ಯಾವ ;
ಅದನ ತಾ ಕಂಡು ನೊಂದಾಽಳೊ
ಬೆಂದಾಽಳೊ
ಅಂದಾಽಳೊ
ಇದು ಎಂಥಾ ಜೀವದ ಬ್ಯಾಟಿ ಹಾಡೇ ಹಗಲಽ ॥

(ಚಿಗರಿಗಂಗಳ ಚೆಲುವಿ : ಸಖೀಗೀತ)

## ಸಂಖ್ಯಾ ಟಿಪ್ಪಣಿಗಳು

೧. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೪, ಪು. ೧೮೩.

೨. ಶಂಕರ ಮೊಕಾಶಿ ಪುಣೇಕರ, 'ಓ ತಾಯಿ ಮಾಯಿ', ಬುದ್ದಣ್ಣ ಹಿಂಗಮಿರೆ (ಸಂ.), ಇಳಿದು ಬಾ ತಾಯಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೭, ಪು. ೪೫೯, ೪೬೭.

೩. ಶಂಕರ ಮೊಕಾಶಿ ಪುಣೇಕರ, ಶ್ರೀ ಬೇಂದ್ರೆಯವರ ಕಾವ್ಯಮೀಮಾಂಸೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೨, ಪು. ೬೫.

೪. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೪೨.

೫. ದ.ರಾ ಬೇಂದ್ರೆ, ಮತ್ತೆ ಶ್ರಾವಣಾ ಬಂತು, ಸಮಾಜ ಪುಸ್ತಕಾಲಯ, ಧಾರವಾಡ, ೧೯೭೩, ಪು. ೯.

೬ ದ.ರಾ. ಬೇಂದ್ರೆ, ಮರ್ಯಾದೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೬, ಪು. ೫೨.

೭. ದ.ರಾ. ಬೇಂದ್ರೆ, ಅರಳು ಮರಳು, ಸಮಾಜ ಪುಸ್ತಕಾಲಯ, ಧಾರವಾಡ, ೧೯೫೭, ಪು. ೨೭೪.

೮. ದ.ರಾ. ಬೇಂದ್ರೆ, 'ಆತ್ಮಕಥನ', ಜಿ.ಬಿ. ಜೋಶಿ, ಕೆ.ಡಿ. ಕುರ್ತಕೋಟಿ (ಸಂ.), ಪುಟ ಬಂಗಾರ (ಸಂಪುಟ ಐದು) ಶ್ರಾವಣ ಪ್ರತಿಭೆ, ಮನೋಹರ ಗ್ರಂಥಮಾಲೆ, ಧಾರವಾಡ, ೧೯೮೭, ಪು. ೪೨೪.

೯. ದ.ರಾ. ಬೇಂದ್ರೆ, ಮತ್ತೆ ಶ್ರಾವಣ ಬಂತು, ಪೂರ್ವೋಕ್ತ, ಪು. ೧೩.

೧೦. ಅದೇ, ಪು. ೧೩.

೧೧. ಡಾ. ಜಿ. ಕೃಷ್ಣಪ್ಪ, ಬರೆಹದಲ್ಲಿ ಬೇಂದ್ರೆಯವರ ಬದುಕು, ದ.ರಾ. ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ, ೨೦೦೮, ಪು. ೩೫.

೧೨. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೧೬೭.

೧೩. ದ.ರಾ. ಬೇಂದ್ರೆ, 'ನನ್ನ ನಾ ಕಂಡಂತೆ', ವಾಮನ ಬೇಂದ್ರೆ, ಬೇಂದ್ರೆ ಜೀವನ ಪರಿಚಯ, ಶ್ರೀ ಮಾತಾ ಪ್ರಕಾಶನ, ಧಾರವಾಡ, ೧೯೯೦, ಪು. ೧೦೫.

೧೪. ಕುವೆಂಪು, ರಸೋವೈಸಃ, ಉದಯರವಿ ಪ್ರಕಾಶನ, ಮೈಸೂರು, ೧೯೮೯, ಪು. ೬೦.

೧೫. ಡಾ. ಕೀರ್ತಿನಾಥ ಕುರ್ತಕೋಟಿ, ಅಲೌಕಿಕ, ಪುಟಬಂಗಾರ (ಸಂಪುಟ ೫), ಶ್ರಾವಣ ಪ್ರತಿಭೆ, (ಸಂ.) ಜಿ.ಬಿ. ಜೋಶಿ, ಕೀರ್ತಿನಾಥ ಕುರ್ತಕೋಟಿ, ಮನೋಹರ ಗ್ರಂಥಮಾಲಾ, ಧಾರವಾಡ, ೧೯೮೭, ಪು. ೪೮.

೧೬ ಹೆಚ್ಚಿನ ವಿವರಗಳಿಗೆ ನೋಡಿ : ಡಾ. ಜಿ. ಕೃಷ್ಣಪ್ಪ, ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ ಒಂದು ಅಧ್ಯಯನ, ಶ್ರೀರಂಗ ಪ್ರಕಾಶನ, ಮೈಸೂರು.

೧೭. ನಾ.ಶ್ರೀ. ರಾಜಪುರೋಹಿತ, 'ಮುಮುಕ್ಷು ಬೇಂದ್ರೆ', ಚುಳಕಿಗೋವಿಂದರಾಯರು (ಸಂ.), ಕವಿವರ ಬೇಂದ್ರೆ, ಲಲಿತ ಸಾಹಿತ್ಯಮಾಲೆ, ಧಾರವಾಡ, ೧೯೪೬, ಪು. ೯೧.

೧೮. ದ.ರಾ. ಬೇಂದ್ರೆ, ಸಾಹಿತ್ಯದ ವಿರಾಟ್ ಸ್ವರೂಪ, ಪೂರ್ವೋಕ್ತ, ಪು. ೯೮.

೧೯. ಅದೇ, ಪು. ೧೦೭.

೨೦. ಡಾ. ಜಿ. ಕೃಷ್ಣಪ್ಪ, ಬರೆಹದಲ್ಲಿ ಬೇಂದ್ರೆಯವರ ಬದುಕು, ಪೂರ್ವೋಕ್ತ, ಪು. ೫೨.

೨೧. ಶ್ರೀಧರ ಖಾನೋಳಕರ, 'ಗೆಳೆಯ ಬೇಂದ್ರೆ', ಕವಿವರ ಬೇಂದ್ರೆ, ಪೂರ್ವೋಕ್ತ, ಪು. ೧೫.

೨೨. ಡಾ. ಕೀರ್ತಿನಾಥ ಕುರ್ತಕೋಟಿ, ಬೇಂದ್ರೆಯವರ ಕಾವ್ಯದಲ್ಲಿ ಶ್ರುತಿ ಮತ್ತು ಕೃತಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೪, ಪು. ೪.

೨೩. ವಿವರಗಳಿಗೆ ನೋಡಿ. ಡಾ. ಜಿ. ಕೃಷ್ಣಪ್ಪ, ನಾಕುತಂತಿ, ಒಂದು ಟಿಪ್ಪಣಿ, ಕಾಮಧೇನು ಪುಸ್ತಕ ಭವನ, ಬೆಂಗಳೂರು.

೨೪. ಡಾ. ಪ್ರಭುಶಂಕರ, 'ಕನ್ನಡದಲ್ಲಿ ಭಾವಗೀತೆ', ಮೈಸೂರು, ೧೯೮೧, ಪು. ೩೩೪.



ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೫. ಹೊಸಕೆರೆ ಚಿದಂಬರಯ್ಯನವರು

–ಡಾ. ಆರ್. ಲಕ್ಷ್ಮೀನಾರಾಯಣ*

ಎಷ್ಟೆಲ್ಲ, ಯಾವೆಲ್ಲ ವ್ಯಕ್ತಿಗಳು ಕನ್ನಡವನ್ನು ಕಟ್ಟಿದ್ದಾರೆ ಎಂಬುದನ್ನು ನೆನೆದಾಗ ನಮ್ಮ ಮನಸ್ಸು ಕೃತಜ್ಞತೆಯಿಂದ ತನಗೆ ತಾನೆ ಬಾಗುತ್ತದೆ. ಇದರಲ್ಲಿ ಕೆಲವರಿಗೆ ಅಪಾರವಾದ ಯಶಸ್ಸು ಸಿಕ್ಕಿದರೆ, ಹಲವರಿಗೆ ಹೆಸರಿನ ಉಲ್ಲೇಖದ ಭಾಗ್ಯವೂ ಸಿಗದೆ ವಿಸ್ಮೃತಿಗೆ ಸಂದು ಹೋಗಿರುವುದೂ ಉಂಟು. ಹಾಗೆ ವಿಸ್ಮೃತಿಗೆ ಗುರಿಯಾದ, ಆದರೆ ಅಂಥ ವಿಸ್ಮೃತಿಗೆ ಎಷ್ಟು ಮಾತ್ರವೂ ತಕ್ಕವರಲ್ಲದ ಹಿರಿಯ ಬರೆಹಗಾರರು ಶ್ರೀ ಹೊಸಕೆರೆ ಚಿದಂಬರಯ್ಯನವರು. ಕಥೆ, ಕಾದಂಬರಿ, ನಾಟಕ, ಪ್ರಬಂಧ, ಕಾವ್ಯ, ವೇದಾಂತ, ಜೀವನ ಚರಿತ್ರೆ, ಕೀರ್ತನೆ, ಹರಿಕಥೆ, ಹಾಡುಗಳು ಹೀಗೆ ಹಲವು ಬೇರೆ ಬೇರೆ ಪ್ರಕಾರಗಳಲ್ಲಿ ಸುಮಾರು ೪೦ ಗ್ರಂಥಗಳನ್ನು ರಚಿಸುವುದು ಎಂದರೆ, ಅದರಲ್ಲೂ ಕನ್ನಡದ ಮುಂಬೆಳಗಿನ ಆ ದಿನಗಳಲ್ಲಿ – ಅದೇನೂ ಒಂದು ಜೀವಮಾನಕ್ಕೆ ಕಡಿಮೆ ಸಾಧನೆಯಲ್ಲ.

ನಾನು ಮಿಡ್ಲ್ ಸ್ಕೂಲ್, ಹೈಸ್ಕೂಲ್‌ನಲ್ಲಿ ಓದುತ್ತಿದ್ದಾಗ ನಮ್ಮ ತಂದೆಯವರ ಪುಸ್ತಕ ಸಂಗ್ರಹದಲ್ಲಿದ್ದ ಎರಡು ಪುಸ್ತಕಗಳು ನನ್ನ ನೆನಪಿನಲ್ಲಿ ಇನ್ನೂ ಹಸಿರಾಗಿವೆ. ಅವುಗಳೆಂದರೆ 'ಶ್ರೀಮದ್ ಭಗವದ್ಗೀತಾರ್ಥ ಚಂದ್ರಿಕೆ' ಮತ್ತು 'ಆತ್ಮಶಕ್ತಿಯ ತೇಜಸ್ಸು'. ಇದರಲ್ಲಿ ಮೊದಲನೆಯದು ಭಗವದ್ಗೀತೆಯ ಶ್ಲೋಕಗಳ ತಾತ್ಪರ್ಯ ಮತ್ತು ವ್ಯಾಖ್ಯಾನ. ಅದೂ ತಿಳಿಯಾದ ಕನ್ನಡ ಗದ್ಯದಲ್ಲಿ. ಜೊತೆಗೆ ಕನ್ನಡ ಲಿಪಿಯಲ್ಲಿ, ಸಂಸ್ಕೃತ ಶ್ಲೋಕಗಳ ಲಿಪ್ಯಂತರ. ಅವುಗಳ ಸ್ವಲ್ಪ ಭಾಗವನ್ನಾದರೂ ನಾನು ಓದಿದ್ದೆ. ಇನ್ನೊಂದು ಪುಸ್ತಕದ ಶೀರ್ಷಿಕೆ ಮಾತ್ರ ತಿಳಿದಿತ್ತು. ಆದರೆ ಅಷ್ಟರ ಮೇಲಿಂದಲೇ ಹೇಳಬಹುದಾದ್ದು ಆ ವ್ಯಾಖ್ಯಾನ – ತಿಳಿಯಾದ, ಸರಳ ಸುಂದರಗದ್ಯ ಎಂದು.

* ನಂ. ೧೨, ೨ನೇ ಕ್ರಾಸ್, ಶಿವಾನಂದನಗರ, ಮೂಡಲಪಾಳ್ಯ, ಬೆಂಗಳೂರು – ೫೬೦ ೦೭೨
ಮೊ : ೯೪೪೯೦೨೪೯೯೬

ಹೊಸಕೆರೆ ಚಿದಂಬರಯ್ಯನವರು ಸಾಹಿತ್ಯ ಕೃಷಿ ಮಾಡಿದ್ದು ಈಗ್ಗೆ ಹತ್ತಿರ ಹತ್ತಿರ ಒಂದು ನೂರು ವರ್ಷಗಳ ಹಿಂದೆ ಅಂದರೆ ಇಪ್ಪತ್ತನೇ ಶತಮಾನದ ಎರಡು ಮೂರನೇ ದಶಕಗಳಲ್ಲಿ. ಅವರ ಭಗವದ್ಗೀತಾರ್ಥ ಚಂದ್ರಿಕೆ ಪ್ರಕಟವಾದ್ದು ೧೯೧೭ರಲ್ಲಿ. ಅಂದರೆ ಶ್ರೀಯವರ ಇಂಗ್ಲಿಷ್ ಗೀತೆಗಳು ಪ್ರಕಟವಾಗುವುದಕ್ಕಿಂತ ನಾಲ್ಕು ವರ್ಷಗಳ ಮುನ್ನ. ಇದೀಗ ಹತ್ತಿರ ಹತ್ತಿರ ೯೦ ವರ್ಷಗಳ ನಂತರ ಮರು ಮುದ್ರಣಗೊಂಡಿರುವ 'ಆರ್ಯಧರ್ಮ ಪ್ರದೀಪ' ಪ್ರಕಟವಾದ್ದು ೧೯೨೪ರಲ್ಲಿ. ಅವರ ಇನ್ನೊಂದು ಗದ್ಯಗ್ರಂಥ 'ಭರತ ಖಂಡದ ಜೀವಜ್ಯೋತಿಗಳು' ಪ್ರಕಟವಾದ್ದು ೧೯೨೩ರಲ್ಲಿ, ಮಾಸ್ತಿಯವರ ಮೊದಲ ಸಣ್ಣ ಕಥೆಗಳು ಪ್ರಕಟವಾದ್ದು೧೯೧೮-೧೯ರಲ್ಲಿ. ಸಾಹಿತ್ಯ ದೃಷ್ಟಿಯಿಂದ ಮೊದಲನೇ ಕಾದಂಬರಿ ಎಂದು ಹೇಳಬಹುದಾದ "ಮಾಡಿದ್ದುಣ್ಣೋ ಮಹಾರಾಯ" ಪ್ರಕಟವಾದ್ದು ೧೯೧೫ರಲ್ಲಿ. ದಿವಾನ್ ರಂಗಾಚಾರ್ಲು ಪ್ರಕಟವಾದದ್ದು ೧೯೧೭ರಲ್ಲಿ. ಕನ್ನಡದ ಮೊದಲ ಕಾದಂಬರಿಗಳು ಪ್ರಕಟವಾದದ್ದು ಹೆಚ್ಚು ಕಡಿಮೆ ಇದೇ ಸುಮಾರಿನಲ್ಲಿ. ಕನ್ನಡ ಕಾವ್ಯದಲ್ಲಿ ಅನೇಕ ರೀತಿಯ ಪ್ರಯೋಗಗಳು ನಡೆದದ್ದೂ ೧೮೭೦-೧೯೨೦ರ ಎಸ್.ಜಿ.ಎನ್, ಹಟ್ಟಿಯಂಗಡಿ ನಾರಾಯಣರಾಯರು, ಪಂಜೆಯವರು ಇವರೆಲ್ಲ ಕಾವ್ಯದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಾ ಇದ್ದದ್ದೂ ಇದೇ ಕಾಲಮಾನದ ಘಟ್ಟದಲ್ಲಿ ಅಂದರೆ ಹೊಸಕೆರೆ ಚಿದಂಬರಯ್ಯನವರ ಗದ್ಯ-ಪದ್ಯಗಳ ರಚನೆಗಳು ನಡೆದದ್ದೂ ಹೊಸಗನ್ನಡ ನವೋದಯದ ಮುಂಬೆಳಗಿನ ಈ ದಿನಗಳಲ್ಲೇ ಎಂಬುದನ್ನು ನೆನೆದಾಗ, ಅವು ಎಷ್ಟು ಸೊಗಸಾದ, ತಿಳಿಯಾದ ರಚನೆಗಳು ಎಂಬುದು ಮನದಟ್ಟಾಗುತ್ತದೆ.

ಅವರ ಕೃತಿ ಸಮುದಾಯದಲ್ಲಿ ಗದ್ಯಗ್ರಂಥಗಳದೇ ಸಿಂಹಪಾಲು. ಕೇವಲ ಅಪ್ಪರ್ ಸೆಕೆಂಡರಿಯವರೆಗೆ ಕ್ರಮವಾದ ವಿದ್ಯಾಭ್ಯಾಸ ಮಾಡಿದ್ದ ಹೊಸಕೆರೆಯವರು ಕನ್ನಡ, ಸಂಸ್ಕೃತ, ಮರಾಠಿ, ಹಿಂದಿ ಭಾಷೆಗಳಲ್ಲಿ ಆಳವಾದ ಪರಿಶ್ರಮವಿದ್ದವರು ಇಂಗ್ಲಿಷ್ ಭಾಷೆಯಲ್ಲಿ ಕೂಡ ಸಾಕಷ್ಟು ತಿಳಿವುವುಳ್ಳವರು. ಸಾಹಿತ್ಯ, ಇತಿಹಾಸ, ಧಾರ್ಮಿಕ ವಿಷಯಗಳು ಇವುಗಳಲ್ಲಿ ಅಪಾರವಾದ ಆಲೋಚನೆ ಇದ್ದವರು. ಅವರ ಎರಡೂ ಗ್ರಂಥಗಳಲ್ಲಿ ಇದಕ್ಕೆ ಹೆಜ್ಜೆ ಹೆಜ್ಜೆಗೆ ಪುರಾವೆ ದೊರೆಯುತ್ತದೆ. ಅವರ ವಿಷಯ ವಿಶ್ಲೇಷಣಾ ಕ್ರಮ, ಕನ್ನಡ ಗದ್ಯ ಬರೆಹದ ಮೇಲೆ ಅವರಿಗಿರುವ ಅಸಾಧಾರಣ ಪ್ರಭುತ್ವ, ಅವರ ವಿವಿಧ ವಿಷಯಗಳ ಅಪಾರವಾದ ಓದು, ಲಲಿತವಾದ ಪದ್ಯಗಳ ರಚನೆ ಇವು ನಮ್ಮನ್ನು ಬೆರಗುಗೊಳಿಸುತ್ತವೆ. ವಸಾಹತುಶಾಹೀ ಸಂದರ್ಭದಲ್ಲಿ, ಆಧುನಿಕ ಪಾಶ್ಚಾತ್ಯ ಶಿಕ್ಷಣಕ್ಕೆ ತಮ್ಮನ್ನು ತೆರೆದುಕೊಂಡ ಯುವ ಸಮೂಹ, ತನ್ನ ಪರಂಪರೆಯ ಬಗ್ಗೆ ಅವಜ್ಞೆ ತಾಳುತ್ತಿದೆಯೇನೋ ಆರ್ಷೇಯವಾದದ್ದರ ಬಗ್ಗೆ ಒಂದು ರೀತಿಯ ತಿರಸ್ಕಾರ ತಾಳುತ್ತಿದೆಯೇನೋ, ಎಂಬಂಥ ಅಳುಕು ಹಿರಿಯ ತಲೆಮಾರಿನವರನ್ನು ಕಾಡುತ್ತಿದ್ದ ಸಂದರ್ಭ ಅದಾಗಿತ್ತು. ನವೋದಯದ ಕಥೆ ಕಾದಂಬರಿಗಳು ಕೂಡ ಆಧುನಿಕ ಶಿಕ್ಷಣ ಯುವಜನರನ್ನು ದಾರಿ ತಪ್ಪಿಸುತ್ತಿದೆ ಎಂಬಂಥ ಭಾವನೆಗಳನ್ನೇ ಬಿಂಬಿಸುತ್ತಿದ್ದ ಸಂದರ್ಭ ಅದು. ಉದಾಹರಣೆಗೆ ಕಾರಂತರ ಮರಳಿ ಮಣ್ಣಿಗೆಯ 'ಲಚ್ಚ'. ಕೈಲಾಸ ಅವರ ಟೊಳ್ಳು ಗಟ್ಟಿಯ 'ಮಾಧು'. ಅದೂ ಅಲ್ಲದೆ ವಿವೇಕಾನಂದ, ರಾಮಕೃಷ್ಣ ಪರಮಹಂಸ,

ಅರವಿಂದರು ಮೊದಲಾದ ಭಾರತೀಯ ವಿಭೂತಿಗಳು ಹಿಂದೂ ಪುನರುತ್ಥಾನದ ಕಹಳೆಯನ್ನು ಮೊಳಗಿಸಿದ್ದ ಕಾಲ. ಭಾರತೀಯರಿಗೂ ತಮ್ಮ ಧರ್ಮ ಸಂಸ್ಕೃತಿಗಳು 'ಯಾವ ಧರ್ಮ ಸಂಸ್ಕೃತಿಗಳಿಗೂ ಕಡಿಮೆಯಲ್ಲ' ಎಂದು ಘಂಟಾಘೋಷವಾಗಿ ಸಾರಿ ಎದೆ ಸೆಟೆಸಿ ನಿಲ್ಲುವಂಥ ಸಂದರ್ಭವದು. ಅದೂ ಅಲ್ಲದೆ ಧಾರ್ಮಿಕ ಶಿಕ್ಷಣ, ಶಾಲಾ ಕಾಲೇಜು ಶಿಕ್ಷಣದ ಭಾಗವಾಗಿದ್ದ ಕಾಲ. ಆ ಉದ್ದೇಶವನ್ನು ಗುರಿಯಾಗಿಟ್ಟುಕೊಂಡು ರಚಿತವಾದ ಗ್ರಂಥ 'ಆರ್ಯ ಧರ್ಮ ಪ್ರದೀಪ'. ಹಾಗಾಗಿ ಹಿಂದೂ ಧಾರ್ಮಿಕ ತತ್ತ್ವ ಸಿದ್ಧಾಂತ, ಆಚರಣೆ, ನಂಬಿಕೆ ಇತ್ಯಾದಿಗಳ ಬಗ್ಗೆ ಮೈದುಂಬಿ, ಆವೇಶಪೂರ್ಣವಾಗಿ ಸಾರುವ ಸಂದರ್ಭವೇ ಅದಾಗಿದ್ದರೂ ಈ ಗ್ರಂಥದಲ್ಲಿ ಬಹುಮಟ್ಟಿಗೆ ನಾವು ಕಾಣುವುದು, ಸಮಚಿತ್ತದ, ಆವೇಶರಹಿತವಾದ ಉದಾರವಾದೀ ಹಿಂದೂ ಧಾರ್ಮಿಕ ದೃಷ್ಟಿಕೋನ. ತನ್ನ ಧರ್ಮ ಸಿದ್ಧಾಂತ, ಆಚರಣೆಗಳಲ್ಲಿ ಗಾಢವಾದ ಶ್ರದ್ಧೆ ನಂಬಿಕೆಗಳುಳ್ಳದ್ದಾದರೂ ಬೇರೆ ಯಾವುದೇ ಧರ್ಮದ ಬಗ್ಗೆ ಕಿಂಚಿನ್ಮಾತ್ರವೂ ಅಸಹನೆ, ಅಸೂಯೆ, ಸಂಕುಚಿತತೆ, ದ್ವೇಷಗಳಿಲ್ಲದೆ ಅವರನ್ನು ಸೌಹಾರ್ದ, ವಿಶ್ವಾಸಗಳಿಂದ ಕಾಣುವಂಥ ಮನೋಧರ್ಮ ಪಶ್ಚಿಮ ಮುಖಿಯಾಗಿರುವ ಜನತೆಯನ್ನು ಮತ್ತೆ ಪೂರ್ವಾಭಿಮುಖಗೊಳಿಸಬೇಕೆಂಬ ಆಶಯ ಇದರ ಹಿಂದಿರುವುದು. ಇದು ಅಡಿಗರು ಹೇಳುವಂತೆ-

'ಪುರೋಹಿತರನಂಬಿ ಪಶ್ಚಿಮ ಬುದ್ಧಿಯಾದೆವೊ'

ಇನ್ನಾದರೂ ಬಗೆಯ ಬೇಕು ಪೂರ್ವಮೀಮಾಂಸೆ ಖಂಡಗಳ' – ಎಂಬದೃಷ್ಟಿ ಹೊಂದಿರುವಂಥದು. ಇದರಲ್ಲಿ ದೇವರು, ಧರ್ಮ, ಜಗತ್ತು, ಅವತಾರ ಮತ್ತು ಜನ್ಮಾಂತರ, ವಿದ್ಯಾರ್ಥಿ ವೃತ್ತಿ, ಗೃಹಸ್ಥ ವೃತ್ತಿ, ರಾಜಯೋಗ, ಭಕ್ತಿಯೋಗ ಮತ್ತು ಜ್ಞಾನಯೋಗಗಳೆಂಬ ಶೀರ್ಷಿಕೆಗಳ ಅಡಿಯಲ್ಲಿ ಹಿಂದೂ ಧಾರ್ಮಿಕ ವಿಚಾರಗಳನ್ನು ಚರ್ಚಿಸಲಾಗಿದೆ. ಇದು ಸುಧಾರಣಾವಾದಿ ನೆಲೆಯಿಂದ ಹೊರಟ ವಿಚಾರಧಾರೆಯಲ್ಲ. ಕೆಲವೊಂದು ವಿಚಾರಗಳನ್ನು ಗೃಹೀತ ಹಿಡಿದು ಆ ದೃಷ್ಟಿಕೋನದಿಂದಲೇ ವಿಷಯ ಮಂಡನೆ ಮಾಡಲಾಗಿದೆ. ಆ ಕಾರಣದಿಂದಾಗಿಯೇ ಕೆಲವೊಂದು ಮಿತಿಗಳೂ ಈ ಬರೆಹಕ್ಕೆ ಬಂದು ಬಿಟ್ಟಿವೆ.

ಈ ಗ್ರಂಥದ ಓದನ್ನು ಅತ್ಯಂತ ಸ್ವಾರಸ್ಯಪೂರ್ಣವಾಗಿ ಮಾಡಿರುವ ಅಂಶಗಳೆಂದರೆ ಇದರ ಲಲಿತವೂ, ಮನೋಹರವೂ ಆಗಿರುವ ಗದ್ಯಶೈಲಿ ಮತ್ತು ಅದಕ್ಕೆ ಪುಟಗೊಡುವ ಹಾಗೆ ಇಲ್ಲಿ ನಿರೂಪಿಸಲಾಗಿರುವ ಸಂಗತಿಗಳನ್ನು ಮನವರಿಕೆ ಮಾಡಲು ವೇದಗಳು, ಉಪನಿಷತ್ತುಗಳು, ಪುರಾಣಗಳು ಇವುಗಳಿಂದ ಹೇರಳವಾಗಿ ಸಂಸ್ಕೃತ ಶ್ಲೋಕಗಳನ್ನು ಉಲ್ಲೇಖಿಸುತ್ತಾರೆ. ರಾಮಾಯಣ, ಮಹಾಭಾರತ ಹಾಗೂ ಇನ್ನಿತರ ಕಥೆಗಳು, ಉಪಕಥೆಗಳಿಗಂತೂ ಲೆಕ್ಕವೇ ಇಲ್ಲ. ಅದರಲ್ಲಿ ಪಂಚತಂತ್ರ, ಕಥಾ ಸರಿತ್ಸಾಗರಗಳೂ ಸೇರಿವೆ. ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ವಿಚಾರಗಳ ಪುಷ್ಟೀಕರಣಕ್ಕೆ ಕನ್ನಡದ ಉಪನಿಷತ್ತುಗಳೆನಿಸಿದ ಬಸವ, ಅಕ್ಕ, ಅಲ್ಲಮ, ಸಿದ್ಧರಾಮ, ದೇವರದಾಸಿಮಯ್ಯ ಮುಂತಾದ ವಚನಕಾರರ ಅರ್ಥಪೂರ್ಣ ವಚನಗಳನ್ನು, ಶ್ರೀ ಸರ್ಪಭೂಷಣ ಶಿವಯೋಗಿಗಳ ಹಾಡುಗಳನ್ನು, ಕನಕ, ಪುರಂದರ, ವಿಜಯದಾಸರೇ ಮೊದಲಾದ

ದಾಸವರ್ಯರ ಕೀರ್ತನೆಗಳು ಇವುಗಳನ್ನು ಅತ್ಯಂತ ಔಚಿತ್ಯಪೂರ್ಣವಾಗಿ ಹೆಜ್ಜೆ ಹೆಜ್ಜೆಗೆ ಬಳಸಿಕೊಳ್ಳುತ್ತಾರೆ. ಶ್ರೀ ರಾಮಕೃಷ್ಣ ಪರಮಹಂಸರ ಮಾತುಗಳನ್ನು, ಅವರ ದೃಷ್ಟಾಂತ ಕಥೆಗಳನ್ನು ಅದೇ ರೀತಿಯಲ್ಲಿ ವಿಚಾರ ವಿಶದತೆ ಮತ್ತು ವಿಚಾರ ಸಮರ್ಥನೆಗೆ ಬಳಸಿಕೊಳ್ಳುತ್ತಾರೆ. ಮರಾಠಿಯಿಂದ ಹಾಗೂ ಹಿಂದಿಯಿಂದ ಭಜನೆಗಳನ್ನು ತಾವೇ ಅನುವಾದಿಸಿಕೊಡುತ್ತಾರೆ. ಇವೆಲ್ಲದರ ಜೊತೆಗೆ ತಮ್ಮದೇ ರಚನೆಯಾದ ಭಕ್ತಿಗೀತಾವಳಿಯ ಸೊಗಸಾದ ಹಾಡುಗಳನ್ನು ಸಂದರ್ಭವರಿತು ಉಲ್ಲೇಖಿಸುತ್ತಾರೆ. ಇನ್ನು ಕಾಳಿದಾಸ, ರತ್ನಾಕರವರ್ಣಿ, ಸರ್ವಜ್ಞ ಮುಂತಾದ ಸಂಸ್ಕೃತ-ಕನ್ನಡ ಕವಿಗಳ ಕೃತಿಗಳಿಂದ ಸಂದರ್ಭವರಿತು ಉಲ್ಲೇಖಿಸುವುದಂತೂ ಇದ್ದೇ ಇದೆ.

ಇಲ್ಲಿ ಗಮನಿಸಬೇಕಾದ ಮಾತೆಂದರೆ, ವಚನಗಳನ್ನು ಅನ್ಯಜಾತಿಗಳವರು ಸಾಹಿತ್ಯ ದೃಷ್ಟಿಯಿಂದ ಓದುವುದು ವ್ಯಾಖ್ಯಾನಿಸುವುದು ಶುರುವಾದದ್ದೇ ೨೦ನೇ ಶತಮಾನದಲ್ಲಿ. ಅದಕ್ಕಿಂತ ಮುಂಚೆ ವಚನಶಾಸ್ತ್ರ ಎಂದು ಹೇಳಿ ಅವನ್ನು ಧಾರ್ಮಿಕ ಸಾಹಿತ್ಯ ಎಂದು ತೀರ್ಮಾನಿಸಿ ವೀರಶೈವೇತರರು ಓದುವ ಗೊಡವೆಗೆ ಹೋಗುತ್ತಿರಲಿಲ್ಲ. ಎಂ.ಆರ್.ಶ್ರೀ ಅವರು ೧೯೪೪ರಲ್ಲಿ ತಮ್ಮ 'ವಚನಧರ್ಮಸಾರ' ಮತ್ತು 'ಬಸವಣ್ಣನವರು' - ಗ್ರಂಥಗಳಲ್ಲಿ ಇವುಗಳ ಸ್ವಾರಸ್ಯವನ್ನು ವಿಶದ ಪಡಿಸಿದ ಮೇಲೆ ವಿದ್ಯಾವಂತರು ಹಾಗೂ ಜನಸಾಮಾನ್ಯರು ಆ ಕಡೆಗೆ ಹೆಚ್ಚು ಹೆಚ್ಚು ಆಕರ್ಷಿತರಾದರು. ಆದರೆ ೧೯೨೪ರಷ್ಟು ಹಿಂದೆಯೇ ವಚನಗಳ ಸಾಹಿತ್ಯ ಸೌಂದರ್ಯವನ್ನು ಮನಗಂಡ ಹೊಸಕೆರೆಯವರು ಅವುಗಳನ್ನು ವಿಪುಲವಾಗಿ ಉಲ್ಲೇಖಿಸುವುದನ್ನು ನೋಡಿದಾಗ ಸಾಹಿತ್ಯ ಸಂವೇದನೆ ಮತ್ತು ಜಾತ್ಯತೀತವಾದ ದೃಷ್ಟಿ ಒಮ್ಮೆಗೇ ಲಕ್ಷ್ಯಕ್ಕೆ ಬರುತ್ತದೆ.

ದೇವರು, ಭೂಮಿ, ಆಕಾಶಗಳನ್ನೆಲ್ಲಾ ಮೀರಿ ಸರ್ವವ್ಯಾಪಿಯಾಗಿದ್ದಾನೆಂದು ಹೇಳುತ್ತ ಬಸವಣ್ಣನವರ ಈ ವಚನವನ್ನು ಉಲ್ಲೇಖಿಸುತ್ತಾರೆ.

"ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ, ಸಕಲ ವಿಸ್ತಾರದ ರೂಹು ನೀನೇ ದೇವಾ. ವಿಶ್ವತೋಚಕ್ಷು ನೀನೇ ದೇವಾ. ವಿಶ್ವತೋಮುಖ ನೀನೇ ದೇವಾ. ವಿಶ್ವತೋ ಬಾಹು ನೀನೇ ದೇವಾ. ವಿಶ್ವತೋ ಪಾದ ನೀನೇ ದೇವಾ ಕೂಡಲ ಸಂಗಮದೇವ". ಅದೇ ರೀತಿ ಭಗವತ್ತತ್ತ್ವದ ಜ್ಞಾನವಾಗುವ ಕಾಲಕ್ಕೆ ಪ್ರಾಪಂಚಿಕ ವಿಷಯಗಳು ತಮ್ಮಿಷ್ಟಕ್ಕೆ ತಾವೇ ನಮ್ಮ ಮುಂದೆ ಬಂದು ಕರೆಯುವವು. ಚೇತನರಾದ ನಾವು ಅವುಗಳ ಮುಂದೆ ನಾಲಿಗೆಯನ್ನು ನೀಡುವುದು ನಾಚಿಕೆಗೇಡು. ಶಿವಶರಣರ ಇಚ್ಛೆ ಹೇಗಿರುವುದೆಂಬುದನ್ನು ನೋಡಿರಿ ಎಂದು ಹೇಳಿ ಈ ವಚನವನ್ನು ಉಲ್ಲೇಖಿಸುತ್ತಾರೆ:-

"ವಿಷಯವೆಂಬಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯ, ಪಶುವೇನ ಬಲ್ಲುದು. ಹಸುರೆಂದೆಳಸುವುದಲ್ಲದೆ? ವಿಷಯರಹಿತನ ಮಾಡಿ, ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿ ಎಂಬ ಉದಕವನೆರೆದು ನೋಡಿ ಸಲಹಯ್ಯಾ ಕೂಡಲ ಸಂಗಮದೇವಾ".

ಪ್ರೇಮ ಭಾವದ ಭಕ್ತಿ ತುಂಬಿರುವ ಭಕ್ತರು ತಮ್ಮ ಆರಾಧ್ಯ ದೈವದ ವಿಷಯ ಹಂಬಲಿಸುವ ಬಗೆ ಹೇಗೆಂದು ಹೇಳುವಾಗ

"ಅರಿಸಿನವನೆ ಮಿಂದು ಹೊಂದುಡುಗೆಯನೆ ತೊಟ್ಟ ಪುರುಷಬಾಣ ಪುಣ್ಯರತ್ನವೆ ನೀ ಬಾ. ನಿನ್ನ ಬರವೆನ್ನಸುವಿನ ಬರವು ಬಾರಯ್ಯ, ಚನ್ನಮಲ್ಲಿಕಾರ್ಜುನಯ್ಯ ಬಂದಾನೆಂದು ಬಟ್ಟೆಗಳ ನೋಡಿ ಬಾಯಾರುತ್ತಿಹೆನು".

"ಕಳವಳದ ಮನವು ತಲೆಕೆಳಗಾಯಿತವ್ವಾ, ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವಾ, ಬೆಳದಿಂಗಳು ಬಿಸಿಲಾಯಿತ್ತು ಕೆಳದಿ. ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವಾ ತಿಳಿಹೌ ಬುದ್ಧಿಯ ಹೇಳಿತದೆತಾರೆಲಗವ್ವಾ ಚನ್ನಮಲ್ಲಿಕಾರ್ಜುನಗೆ.

ಹೊಸಕೆರೆ ಅವರ ಅನೇಕ ವಿಚಾರಗಳನ್ನು ನಾವು ಒಪ್ಪದೆ ಹೋಗಬಹುದು. ಆದರೆ ಅತ್ಯಂತ ತಾರ್ಕಿಕವಾಗಿ ವಿಚಾರ ಸರಣಿಯನ್ನು ಬೆಳೆಸುವ ಕ್ರಮವನ್ನು ಮರೆಯಲು ಸಾಧ್ಯವಿಲ್ಲ. ಉದಾಹರಣೆಗೆ, (೧) ಆಧ್ಯಾತ್ಮ ವಿದ್ಯೆಯೇ ನಿಜವಾದ ವಿದ್ಯೆ ಎಂದು ಹೇಳುತ್ತ (೨) ಭೌತಿಕ ವಿದ್ಯೆಯ ಮಿತಿ, ಕೊರತೆಗಳನ್ನು ಎತ್ತಿ ತೋರಿಸುತ್ತಾರೆ. (೩) ಭೌತಿಕ ಸಂಪತ್ತು ಮತ್ತು ಜ್ಞಾನದಿಂದ ತೃಪ್ತಿ ದೊರೆಯುವುದಿಲ್ಲ ಎಂದು ಸ್ಥಾಪಿಸುತ್ತಾರೆ. ಅದರ ಜೊತೆಗೇ ಅದು ನಿರುಪಯೋಗಿಯಲ್ಲ ಎಂಬುದನ್ನು ಹೇಳುವುದನ್ನು ಕೂಡ ಮರೆಯುವುದಿಲ್ಲ.

(೪) ಆದರೆ ಅದು ವ್ಯವಹಾರಕ್ಕಷ್ಟೇ ಮುಗಿಯದೆ ನಮಗೆ ತೃಪ್ತಿಯನ್ನು ತಂದು ಕೊಡುವಂಥ ಧರ್ಮಜ್ಞಾನವೇ ನಿಜವಾದ ವಿದ್ಯೆ ಎಂಬುದನ್ನು ಮನದಟ್ಟು ಮಾಡುತ್ತಾರೆ. ಭಕ್ತಿಯೋಗವನ್ನು ವಿವರಿಸುತ್ತ ಪರಹಿತದ ಉದ್ದೇಶವಿಟ್ಟುಕೊಂಡು ಮಾಡಿದ ನಿಷ್ಕಾಮಕರ್ಮ ಅತ್ಯಂತ ಶ್ರೇಯಸ್ಕರ ಎಂದು ಅದನ್ನು ಎತ್ತಿ ಹಿಡಿಯುತ್ತಾರೆ.

"ಹಣ್ಣಿಗಾಗಿ ಬಾಳೆಯ ಗಿಡವನ್ನು ಬೆಳೆಸಿದರೆ, ಊಟಕ್ಕೆ ಅನುಕೂಲವಾಗಿ ಬಾಳೆಯ ಎಲೆಯೂ ಸಿಕ್ಕುವಂತೆ, ಪರಿಹಿತದ ಇಚ್ಛೆಯನ್ನು ಮಾಡಿದರೆ, ತನ್ನ ದೇಹೇಂದ್ರಿಯಾದಿಗಳ ಪೋಷಣೆಯೂ ಅದರೊಳಗೇ ಸೇರುವುದು."

ವೇದಧರ್ಮ ಉದಾರವಾದ್ದು, ಅದರಲ್ಲಿ ಸರ್ವಧರ್ಮಗಳ ವಿಷಯಕ್ಕೂ ಸಹಾನುಭೂತಿ ಎಂದು ಅದರ ಹಿರಿಮೆಯನ್ನು ಎತ್ತಿ ಹಿಡಿಯುವ ಸಂದರ್ಭದಲ್ಲಿ–

ಪಾರ್ಸಿ, ಮುಸಲ್ಮಾನ್, ಕ್ರಿಶ್ಚಿಯನ್ ಈ ಯಾವ ಧರ್ಮದವರಿಗೂ ಅದು ಎಂದಿಗೂ ಧಕ್ಕೆ ತಂದಿಲ್ಲ. "ಹಿಂದೂಗಳು ಪರಧರ್ಮದವರ ಮೇಲೆ ಕೈ ಮಾಡಿದ್ದರೆ ಅದು ಆ ಪರದೇಶೀಯರ ಧರ್ಮಘಾತಕತನವ ಪರಿಹಾರಕ್ಕಾಗಿಯೇ ಹೊರತು ಅವರ ಧರ್ಮಕ್ಕೆ ಧಕ್ಕೆಯನ್ನು ತರುವುದಕ್ಕಲ್ಲ – ಸರ್ವೇ ಲೋಕಾಃ ಸುಖಿನೋ ಭವಂತು."

"ಪರಧರ್ಮದವರ ಧರ್ಮವನ್ನು ಹೊಲಸುಗೆಡಿಸುವ ಕುಹಕ ಯೋಚನೆಯು ಎಂದು ಹಿಂದೂಗಳಿಗೆ ಬರುವುದೋ ಅಂದು ಹಿಂದೂಗಳು ಹಿಂದುಗಳೇ ಅಲ್ಲ."

ಅವರ ಶೈಲಿ ಎಷ್ಟು ಪಾರದರ್ಶಕವಾದ್ದು, ತಿಳಿಯಾದ್ದು ಎಂಬುದಕ್ಕೆ ಇದರ ಪುಟ ಪುಟವೂ ಸಾಕ್ಷಿ. ಒಂದು ಉದಾಹರಣೆ:

ಮನುಷ್ಯನ ವಿದ್ಯಾರ್ಥಿ ವೃತ್ತಿಯ ಕಾಲವು ಮುಗಿಯುವ ಹೊತ್ತಿಗೆ ತಕ್ಕ ಕಾಲವು ಬರುತ್ತದೆ. ಗೃಹಸ್ಥನೆಂದರೆ ಮನೆಯಲ್ಲಿರುವವನೆಂದರ್ಥ. ಇದುವರೆಗೆ ವಿದ್ಯಾರ್ಥಿಯು ವಿದ್ಯೆಯನ್ನು ಸಂಪಾದಿಸುವುದಕ್ಕಾಗಿ ಮನೆಯನ್ನು ಬಿಟ್ಟು ಗುರುಗಳೆಡೆಯಲ್ಲಿದ್ದು ಹೊರಗೆ ಕಾಲವನ್ನು ಕಳೆಯುತ್ತಿರುತ್ತಾನೆ. ವಯಸ್ಸು ಬರುತ್ತ ಬರುತ್ತ ಮನುಷ್ಯನಿಗೆ ಸಹಜವಾಗಿ ತಾನಿನ್ನು ಗೃಹಸ್ಥನಾಗಿ ವ್ಯವಹಾರವನ್ನು ಮಾಡಬೇಕೆಂಬ ಬಯಕೆಯುಂಟಾಗುತ್ತದೆ.

**ಉಪಮಾ ವೈವಿಧ್ಯ:**

ಮನುಷ್ಯನಿಗೆ ಪರಮಧ್ಯೇಯವಾದ ಪಾರಮಾರ್ಥಿಕ ವೃತ್ತಿಗೆ ಬೇಕಾದ ಸಾಮರ್ಥ್ಯವನ್ನು ಸಂಪಾದಿಸುವುದಕ್ಕೆ ಇದೇ ಗರಡಿಯ ಮನೆ. ಮನುಷ್ಯನು ತನ್ನಲ್ಲಿರುವ ಪಶು ಸ್ವಭಾವವನ್ನು ಹಿಡಿತದಲ್ಲಿಟ್ಟುಕೊಳ್ಳುವುದನ್ನು ಕಲಿಯುವುದಕ್ಕೆ ಇದೇ ಶಿಕ್ಷಣ ಶಾಲೆ. ಮನುಷ್ಯನು ತನ್ನ ಇಂದ್ರಿಯಾರ್ಥಗಳನ್ನು ಧರ್ಮಕ್ಕೆ ವಿರುದ್ಧವಾಗದಂತೆ ಉಪಭೋಗ ಮಾಡುವುದಕ್ಕೆ ಇದೇ ಭೋಗ ಭೂಮಿ. ಪ್ರಾಪಂಚಿಕ ಸುಖವೆಂಬ ತಿರುಳಿನ ತೂಕವೆಷ್ಟೆಂಬುದನ್ನು ತಿಳಿಯುವುದಕ್ಕೆ ಇದೇ ಅಳೆಯುವ ಪಾತ್ರ.

"ಜನತಾ ಸೇವೆಯೇ ಜನಾರ್ಧನ ಸೇವೆ":

ಗೃಹಸ್ಥ ವೃತ್ತಿಯ ಪ್ರಾಮುಖ್ಯವನ್ನು ವಿವರಿಸುತ್ತ– ನಿಜವಾಗಿ ವಿಚಾರ ಮಾಡಿದರೆ, ಸಾರ್ವಜನಿಕ ಸೇವೆಗೂ, ಭಗವತ್ ಸೇವೆಗೂ ವ್ಯತ್ಯಾಸವೇ ಇಲ್ಲ. ಜನತೆಯೇ ಜನಾರ್ಧನ. ಜನಾರ್ಧನನು ನಮ್ಮ ಕೈಗೆ ಸಿಕ್ಕುವುದಿಲ್ಲ. ಜನತೆಯು ನಮ್ಮ ಕಣ್ಣೆದುರಿಗಿದೆ. ಆದ್ದರಿಂದ ಜನತಾರೂಪಿಯಾದ ಜನಾರ್ಧನನ ಸೇವೆಯು ಮನುಷ್ಯನಿಗೆ ಉತ್ತಮ ಸಾಧನ"– ಎಂಬ ಮಾತುಗಳಲ್ಲಿ, ಹಿಂದೂ ಜೀವನದೃಷ್ಟಿ ಅಷ್ಟೇ ಅಲ್ಲ ಹೊಸಕೆರೆಯವರ ಲೋಕಹಿತಕಾರಿ ದೃಷ್ಟಿಯೂ ಒಟ್ಟಿಗೇ ವ್ಯಕ್ತವಾಗುತ್ತವೆ.

ವಿಗ್ರಹ ಪೂಜೆಯ ಹಿಂದಿರುವ ವಿವೇಕವನ್ನು ಅತ್ಯಂತ ತಾರ್ಕಿವಾಗಿ ವಿಶ್ಲೇಷಿಸುತ್ತಾರೆ. ಪರದೇಶದಲ್ಲಿಯೂ ಮೂರ್ತಿ ಪೂಜೆ ಇದೆ ಎಂದು ಕ್ರಿಶ್ಚಿಯನ್ ಶಿಲುಬೆ, ಮಹಮ್ಮದೀಯರ ಹಸ್ತ ಚಿಹ್ನವನ್ನು ಉಲ್ಲೇಖಿಸುತ್ತಾರೆ. "ಅವಕ್ಕೆ ಕೈ, ಕಾಲು, ಮುಖ ಇಲ್ಲದಿರಬಹುದು. ಆದರೆ ಅದೂ ಒಂದು ಆಕಾರ. ಅವರಿಟ್ಟುಕೊಂಡಿರುವುದು ನೆನಪಿಗಾಗಿ ನಾವಿಟ್ಟುಕೊಂಡಿರುವುದೂ ನೆನಪಿಗಾಗಿ, ಅಲ್ಲದೆ ವಿಗ್ರಹಗಳ ಸ್ವರೂಪದಲ್ಲಿ (ಕಲ್ಲು, ಮಣ್ಣು, ಕಟ್ಟಿಗೆ) ಮೇಲು ಕೀಳುಗಳಿರಬಹುದು. ಅವುಗಳಿಂದ ನೆನಪಾಗುವ ಅಂತರ್ಯಾಮಿಯ ಸ್ವರೂಪದಲ್ಲಲ್ಲ. ಯೋಗಿಗಳು ಈ ವಿಗ್ರಹಗಳನ್ನೇ ಬಯಸದೆ ತಮ್ಮ ಹೃದಯದಲ್ಲಿ ತಾವು ಪರಮಾತ್ಮನನ್ನು ಕಾಣುವರು – ಹಾಗೆ ಕಾಣಲಾರದ ಶ್ರೀ ಸಾಮಾನ್ಯರಿಗಾಗಿ ಈ ವಿಗ್ರಹ ಕಲ್ಪನೆ.

ಆರ್ಯಧರ್ಮದವರು ವಿಗ್ರಹಗಳನ್ನು ಪೂಜಿಸುವಾಗ ಈ ಮಣ್ಣು ಮೈತೊಳೆಯಲಿ, ಈ ಕಲ್ಲು ಉಣ್ಣಲಿ, ಈ ಕಟ್ಟಿಗೆ ಉಡಲಿ–ಇವು ನಮಗೆ ಶ್ರೇಯಸ್ಸನ್ನುಂಟು ಮಾಡಲಿ ಎಂದು ಹೇಳುವುದಿಲ್ಲ. ಅವು ಜಡವೆಂದು ಅವರಿಗೆ ತಿಳಿದಿದೆ – ಅವರು ಮಾಡುವುದು ಮೂರ್ತಿಪೂಜೆಯಲ್ಲ ದೇವರ ಪೂಜೆ.

ಮೂರ್ತಿ ಪೂಜಕರಾದರೆ, ಪೂಜೆಯಾದ ಮೇಲೆ ಗಣಪತಿ ಕೋಟಿಲಿಂಗಗಳನ್ನೇಕೆ ನೀರಿಗೆ ಒಗೆಯುತ್ತಾರೆ? ಪ್ರಾಣಪ್ರತಿಷ್ಠೆ ಮಾಡುವ ಮುನ್ನ ಏಕೆ ಪೂಜಿಸುವುದಿಲ್ಲ? ಇದನ್ನೆಲ್ಲ ನೋಡಿದರೆ ಮೂರ್ತಿಪೂಜೆಯ ಗಂಧವೇ ಅವರಲ್ಲಿಲ್ಲ. ಮೂರ್ತಿಪೂಜೆಯ ಮಾತೃಭೂಮಿ ಪರದೇಶ.

ಇತ್ತೀಚಿನ ದಿನಗಳಲ್ಲಿ ಗೋಹತ್ಯಾ ನಿಷೇಧದ ಪರ–ವಿರೋಧವಾಗಿ ಭಾರಿ ಭಾರಿವಾಗ್ಯುದ್ಧಗಳಾಗಿವೆ. ನಾನು ಗೋಹತ್ಯಾ ನಿಷೇಧವನ್ನು ಸಮರ್ಥಿಸುತ್ತೇನೆಂದಲ್ಲ. ಆದರೆ ಈಗ್ಗೆ ಹತ್ತಿರ ಹತ್ತಿರ ಒಂದು ಶತಮಾನದ ಹಿಂದೆ ಈ ಸರಳ ಸಜ್ಜನರು ಈ ಹೊತ್ತು ಗೋ ಹತ್ಯಾ ನಿಷೇಧವನ್ನು ಬಲವಾಗಿ ವಿರೋಧಿಸುತ್ತಿರುವ ಕ್ರಿಶ್ಚಿಯನ್ ಮತ್ತು ಇಸ್ಲಾಂ ಧರ್ಮಗಳನ್ನು ಅಭ್ಯಸಿಸಿ, ಅವುಗಳು ಕೂಡಾ ಹಿಂಸೆಯ ವಿರುದ್ಧವಾಗಿವೆ ಎಂದು ತೋರಿಸಿಕೊಟ್ಟಿರುವುದು ನಿಜಕ್ಕೂ ರೋಮಾಂಚನಕಾರಿ. ಇದು ಅವರ ಧಾರ್ಮಿಕ, ಉದಾರವಾದಿ ಮತ್ತು ಸಹಿಷ್ಣುತಾ ಮನೋಭಾವವನ್ನು ತೋರಿಸುತ್ತೆ.

ಕುರಾನ್ ವಾಕ್ಯಗಳನ್ನು ಉದ್ಧರಿಸುತ್ತಾ..
"ನಸಾ ಇನೀಮ ಕಾಮೇಶಿಕ್ ಪರಾತುಗೂರ್
ಜೆಬೆಹರೆ ಬಹಾಮಯ್ ಜೆಬೆಹರೆ ತುಯೂರ್"

"ಹಸು ಮೊದಲಾದ ನಾಲ್ಕು ಕಾಲಿನ ಪಶುಗಳು ಮನುಷ್ಯನ ಆಹಾರಕ್ಕಾಗಿ ಹುಟ್ಟಿಲ್ಲ. ಭಾರವನ್ನು ಹೊರುವುದು ಮೊದಲಾದ ಕೆಲಸಕ್ಕಾಗಿ ಹುಟ್ಟಿವೆ" – ಎಂದು ಅದರ ಅರ್ಥ ವಿವರಿಸಿ ಇಂಥ ಅಹಿಂಸಾಪರವಾದ ವಾಕ್ಯಗಳು ಕುರಾನಿನಲ್ಲಿಯೂ ಎಷ್ಟೋ ಇವೆ. ಮುಸಲ್ಮಾನರ ಬಕ್ರೀದ್ ಹಬ್ಬದಲ್ಲಿ ಗೋವನ್ನು ವಧಿಸುತ್ತಾರಷ್ಟೇ ಎಂದು ಹೇಳಿ ಈ ಹಬ್ಬದ ಮೂಲ ವೃತ್ತಾಂತ ವಿವರಿಸುತ್ತಾರೆ. (ಬಕರ್+ಇ+ಈದ್) ಇಬ್ರಾಹಿಂ ಪೈಗಂಬರನೆಂಬ ಸಾಧು ಭಗವದ್ಭಕ್ತಿಯನ್ನು ಮಾಡುತ್ತಿರುವಾಗ ಅವನ ಭಾವವನ್ನು ಪರೀಕ್ಷಿಸಬೇಕೆಂದು ಅಲ್ಲಾಹು – "ನಿನ್ನ ಅತ್ಯಂತ ಪ್ರಿಯವಸ್ತುವನ್ನು ನನಗರ್ಪಿಸು" ಎಂದು ಕೇಳಿದನು. ಆಗ ಪೈಗಂಬರನು ತನ್ನ ಪ್ರಿಯ ಪುತ್ರನಾದ ಇಸ್ಮಾಯಿಲನೆಂಬ ಮಗನನ್ನು ದೇವನಿಗೆ ಅರ್ಪಿಸುವುದಕ್ಕಾಗಿ ಅವನನ್ನು ತನ್ನ ಕೈಯಿಂದಲೇ ಕೊಲ್ಲುವುದಕ್ಕೆ ಹೊರಟು ಮುಂದೇನಾದರೂ ತನ್ನ ಮನಸ್ಸು ಹಿಂದೆಗೆದೀತೆಂದು ಕಣ್ಣುಗಳನ್ನು ಕಟ್ಟಿಕೊಂಡು ಕತ್ತಿಯನ್ನು ಬೀಸಿದನು. ಅಷ್ಟರಲ್ಲಿ ದೈವಯೋಗದಿಂದ ಆ ಮಗನ ಸ್ಥಾನದಲ್ಲಿ ಒಂದು ಕುರಿ ಬಂದು ನಿಂತಿತ್ತು. ಹೀಗಾಗಿ ಆ ಕುರಿಯ ವಧೆಯಾಗಿ ಮಗನ ಜೀವವು ಉಳಿಯಿತು. ಆಮೇಲೆ ದೇವರು ಆ ಕುರಿಯನ್ನೂ ಬದುಕಿಸಿದನು. ಆದ್ದರಿಂದ ಅದು ಬಕ್ರೀದ್ ಆಯಿತು. ಎಲ್ಲ ದೇವರೂ ಒಂದೇ. ದೇವರು ಹಿಂಸೆಯನ್ನೆಂದೂ ಮೆಚ್ಚುವುದಿಲ್ಲ.

ಅದು ನಿಜವಾಗಿ ಕುರಿಯು ಬದುಕಿದ ಹಬ್ಬವಾಗಿರುವಾಗ ಆಸ್ಥಾನಕ್ಕೆ ಹೇಗೋ ಗೋವಧೆ ಬಂದು ನಿಂತಿದೆ.

ಅಹಿಂಸಾ ಪ್ರಧಾನವಾದ ಹಿಂದುಗಳಲ್ಲಿ ಪ್ರಾಣಿವಧೆ ಹೇಗೋ ಬಂದಿರುವಂತೆ ಮುಸಲ್ಮಾನರಲ್ಲಿ ಕಾಲ ಕರ್ಮ ಸಂಯೋಗದಿಂದ ಗೋವಧೆ ಪ್ರಚಾರಕ್ಕೆ ಬಂದಿರಬೇಕೆನ್ನುತ್ತಾರೆ.

ಬೈಬಲ್‌ನ ಹಳೇ ಒಡಂಬಡಿಕೆಯಲ್ಲಿಯೂ ಅಹಿಂಸಾ ಪರವಾದ ಭಾವನೆಯೇ ಇದೆ ಎಂದು ಅದನ್ನು ಉದ್ಧರಿಸಿಕೊಟ್ಟಿದ್ದಾರೆ.

(1) Thou shall not kill and who so ever shall kill, shall be in danger of Judgement. St Matiew - 57

(2) And God said, behold, I have given every herb bearing seed which is upon the face of all the earth; and every free, in which is the fruit of a free hielding seed to you shall it be for meat.

spenin ಜನ – ಕ್ರಿಸ್ತ ಹುಟ್ಟಿದಾಗ ಅವನ ಮೈಮೇಲೆ ಉಸಿರು ಬಿಡುತ್ತ ಅವನ ಶರೀರದಲ್ಲಿ ಉಷ್ಣತೆ ಹುಟ್ಟಿಸಿ ಅವನನ್ನು ರಕ್ಷಿಸಿತೆಂದು ಆ ಜನ ಕ್ರಿಸ್ಮಸ್‌ನಂದು ಹಸುಗಳ ಮೇಲೆ ಬಹಳ ಪ್ರೀತಿತೋರಿಸುತ್ತಾರೆ.

ತಮ್ಮ ತಮ್ಮ ದೈವದಲ್ಲಿಡಬೇಕಾದ ಪೂಜ್ಯ ಬುದ್ಧಿಯನ್ನು ಪತಿವ್ರತೆಯ ಪತಿಭಕ್ತಿಗೆ ಹೋಲಿಸುತ್ತ – "ಪತಿವ್ರತೆಗೆ ಪುರುಷನೆಂದರೆ ತನ್ನ ಗಂಡ. ಅವರಂತೆ ಭಕ್ತನಿಗೆ ಲೋಕದಲ್ಲಿ ತನ್ನ ದೇವರೇ ದೇವರು. ಆದರೆ ಪತಿವ್ರತೆಯು ಉಳಿದ ಗಂಡಸರನ್ನೆಲ್ಲಾ ನಪುಂಸಕರೆಂದು ಹೀಯಾಳಿಸುವುದಿಲ್ಲ. ಅವರೂ ಗಂಡಸರೇ. ಆದರೆ ಆಕೆ ಅವರ ವಿಚಾರವನ್ನು ಮನಸ್ಸಿಗೆ ತಂದುಕೊಳ್ಳುವುದಿಲ್ಲ. ತನ್ನೆದುರಿಗೆ ಅವರು ಬಂದರೆ, ಅವರ ಮುಂದೆ ಆಕೆ ತಲೆಯನ್ನು ಬಗ್ಗಿಸಿಕೊಂಡೇ ಹೋಗುವಳು. ಇದರಂತೆ ಭಕ್ತನು ಇತರರ ಇಷ್ಟದೇವತೆಯನ್ನು ದೇವರಲ್ಲವೆಂದು ಹೀಯಾಳಿಸಬಾರದು. ಅವೂ ದೇವತಾ ಸ್ವರೂಪವೇ. ಆದರೆ ಅವುಗಳ ವಿಚಾರವನ್ನು ಇವನು ತೆಗೆದುಕೊಳ್ಳದಿದ್ದರಾಯಿತು. ಎಲ್ಲರೊಡನೆ ಸೇರಿದ ಸಮಯದಲ್ಲಿ ಇತರರ ದೇವತೆಗಳಿಗೂ ಗೌರವ ಕೊಡಲೇಬೇಕು. ಹೀಗೇ ಮಾಡಿದರೆ ಮಾತ್ರ ಭಕ್ತಿ ಬೆಳೆಯುತ್ತೆ.

"ಶ್ರದ್ಧಾಂ ಭಾಗವತೇ ಶಾಸ್ತ್ರೇ, ಪ್ಯನ್ಯತ್ರಜಾಪಿ ಹಿ"

ಇದು ಅತ್ಯಂತ ಆರೋಗ್ಯಕರವಾದ, Secular ಎಂದು ಹೇಳಬಹುದಾದ ಧಾರ್ಮಿಕ ಸಹಿಷ್ಣುತೆಯನ್ನು ಎತ್ತಿ ಹಿಡಿಯುವ ಮನೋಧರ್ಮ.

ಈ ಗ್ರಂಥದ ಅತ್ಯಮೂಲ್ಯವಾದ ಭಾಗವೆಂದರೆ, ಗ್ರಂಥದ ಕೊನೆಯಲ್ಲಿ ಪ್ರಪಂಚದ ಎಲ್ಲ ಪ್ರಮುಖ ಧರ್ಮಗಳ ತತ್ತ್ವ ಸಿದ್ಧಾಂತಗಳನ್ನು ಆಯಾ ಧರ್ಮದ ಪ್ರಮುಖರಿಂದ ಬರೆಸಿ ಸೇರಿಸಿರುವುದು. ಹಲವನ್ನು ಸ್ವತಃ ಲೇಖಕರೇ ಅನುವಾದಿಸಿದ್ದಾರೆ. ಇನ್ನು

ಕೆಲವನ್ನು ಪ್ರಕಾಶಕರಾದ ಸುರೇಂದ್ರ ಶಿವರಾವ್ ದೇಸಾಯಿಯವರು ಅನುವಾದಿಸಿದ್ದಾರೆ. ನಿಜಕ್ಕೂ ಇದು ಸರ್ವಧರ್ಮ ಸಮನ್ವಯ ಸಿದ್ಧಾಂತಕ್ಕೆ ಬರೆದ ಭಾಷ್ಯ.

ತನ್ನ ಧರ್ಮದ ಕುರಿತಾದ ಸರಿಯಾದ ಜ್ಞಾನ ಮತ್ತು ಅನ್ಯ ಧರ್ಮಗಳ ಕುರಿತಾದ ಮೂಲತತ್ತ್ವಗಳ ಅರಿವು ನಮ್ಮನ್ನು ವಿಶ್ವ ಭ್ರಾತೃತ್ವದೆಡೆಗೆ ಕೊಂಡೊಯ್ಯುವ ಮಹಾನ್ ಸಾಧನ ಎಂಬ ಕಾರಣಕ್ಕಾಗಿಯಾದರೂ ಸರ್ವಧರ್ಮ ಸಮನ್ವಯ ಸಿದ್ಧಾಂತಕ್ಕೆ ಬರೆದ ಭಾಷ್ಯದಂತಿರುವ “ಆರ್ಯಧರ್ಮ ಪ್ರದೀಪ”ದಂಥ ಕೃತಿಗಳು ಜಾತ್ಯತೀತ ಭಾರತದಲ್ಲಿ ಇಂದಿಗೂ ಪ್ರಸ್ತುತವೆನಿಸುತ್ತವೆ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೬. ಭಕ್ತಿ ಚಳುವಳಿ ಮತ್ತು ಮಹಿಳೆ

-ಡಾ. ವಿಜಯಾ ಸುಬ್ಬರಾಜ್*

ಬಹುಮುಖ ಸಂಸ್ಕೃತಿಯ ಭಾರತ ತನ್ನ ಸಾಂಸ್ಕೃತಿಕ ಶ್ರೀಮಂತಿಕೆಯಿಂದ ಮತ್ತು ಸನಾತನ ಪರಂಪರೆಯಲ್ಲಿನ ಧರ್ಮ ದರ್ಶನ, ತತ್ತ್ವ, ಆಧ್ಯಾತ್ಮ ಅನುಭಾವಗಳಿಂದಾಗಿ ಜಗತ್ತಿನಲ್ಲಿಯೇ ಅನನ್ಯವಾದ ಸ್ಥಾನವನ್ನು ಪಡೆದಿದೆ. ಅನೈಕ್ಯತೆಯಲ್ಲಿಯೂ ಐಕ್ಯತೆಯನ್ನು ಸಾಧಿಸಿದೆಯೆಂಬ ಹೆಗ್ಗಳಿಕೆ ಈ ದೇಶದ್ದಾಗಿದೆ. ಭಾರತದಾದ್ಯಂತ ಸಾಂಸ್ಕೃತಿಕ ವೈವಿಧ್ಯತೆ, ಪ್ರಾದೇಶಿಕ ಭಿನ್ನತೆಗಳಿಂದ ಕೂಡಿದ್ದರೂ ಭಾರತೀಯ ಸಮಾಜದ ದೃಷ್ಟಿಯಲ್ಲಿ ಹೆಣ್ಣು ಯಾವುದೇ ಪ್ರದೇಶಕ್ಕೆ ಯಾವುದೇ ಸಂಸ್ಕೃತಿಗೆ ಸೇರಿರಲಿ, ನಿಕೃಷ್ಟಳು, ಎರಡನೆಯ ದರ್ಜೆಯವಳು.

ಗಂಡ, ಕುಟುಂಬ, ಮಕ್ಕಳ ಲಾಲನೆ ಪಾಲನೆಗಷ್ಟೇ ಸೀಮಿತವಾಗಿದ್ದ ಬದುಕಿನಲ್ಲಿ, ಆತ್ಮ ವಿಕಾಸ, ಬೌದ್ಧಿಕ ವಿಕಾಸ, ಸಾರ್ವಜನಿಕ ಬದುಕು, ವಿಚಾರ, ತರ್ಕಗಳಿಗೆ ಅವಕಾಶವೇ ಇರಲಿಲ್ಲ. ಆದರೆ ವೇದ ಪೂರ್ವ ಕಾಲದಲ್ಲಿ ಹೆಣ್ಣಿಗೆ ಮುಕ್ತ ಅವಕಾಶಗಳಿದ್ದು, ವಿದ್ವತ್ತು, ಪ್ರತಿಭೆಗಳ ಅಭಿವ್ಯಕ್ತಿ ಸಾಧ್ಯವಿತ್ತು. ಅಲ್ಲದೆ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಿದ್ದುದರಿಂದಾಗಿ ಕುಟುಂಬ ನಿರ್ವಹಣೆ, ನಿಯಂತ್ರಣ, ಯಜಮಾನಿಕೆಗಳು ಅವಳದಾಗಿದ್ದು ಸಾಕಷ್ಟು ಸ್ವತಂತ್ರಳಾಗಿದ್ದಳು. ನಮ್ಮ ಪುರಾಣ ಮಹಾಕಾವ್ಯಗಳಲ್ಲಿ ಹೆಣ್ಣಿನ ವೈಭವೀಕರಣವಾಗಿ, ಆಕೆಯನ್ನು ಆದರ್ಶ ಸತಿ, ಪತಿಭಕ್ತಿ ಪರಾಯಣೆ, ವಾತ್ಸಲ್ಯಮಯಿ, ಶಕ್ತಿ ಸ್ವರೂಪಿಣಿ, ಆದಿಶಕ್ತಿ, ಆದಿಮಾಯೆ, ಅಸುರ ಧ್ವಂಸಿನಿ ಎಂದೆಲ್ಲ ಹಾಡಿ ಹೊಗಳಿ ದೈವತ್ವಕ್ಕೆ ಏರಿಸಿರುವ ಪುರುಷ ಸಮಾಜ ಕಾಲಾಂತರದಲ್ಲಿ ಅವಳನ್ನು ನಡೆಸಿಕೊಂಡ ಬಗೆ, ಅವಳ ವಿಚಾರವಾಗಿ ತಳೆದ ಧೋರಣೆಗಳು ನಡೆಸಿದ ಅತ್ಯಾಚಾರ, ಮಾಡಿದ ಶೋಷಣೆ ಇವುಗಳನ್ನೆಲ್ಲ ಕಂಡಾಗ ಭಾರತೀಯ ಸಮಾಜದ ದ್ವಂದ್ವ ನೀತಿಯ ಸ್ಪಷ್ಟ ಕಲ್ಪನೆಯಾಗುತ್ತದೆ.

---

* #೫೧, 'ಹಂಸಿ', ೧ನೇ 'ಎ' ಕ್ರಾಸ್, ೩೫ನೇ ಮುಖ್ಯರಸ್ತೆ. ಬನಗಿರಿನಗರ. ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫. ಮೊ : ೯೯೮೬೯ ೨೮೮೭೬

ಸ್ತ್ರೀ ಸಮುದಾಯದ ಬಗ್ಗೆ ಕೇವಲ ಭಾರತವರ್ಷವೇ ಅಲ್ಲದೆ ಜಗತ್ತಿನ ಇತರ ರಾಷ್ಟ್ರಗಳಲ್ಲಿ, ಧಾರ್ಮಿಕ ಪಂಥಗಳಲ್ಲಿ ಅತ್ಯಂತ ನಿಕೃಷ್ಟವೆನ್ನುವಂತೆ ಚಿತ್ರಿಸಲಾಗಿದೆ. ಮಾತೃತ್ವದ ಮೂಲಕ ಪಡೆದ ಗೌರವ ಅಷ್ಟಕ್ಕೆ ಸೀಮಿತಗೊಂಡು ಮಿಕ್ಕೆಲ್ಲ ರೀತಿಯಿಂದ ತಿರಸ್ಕಾರಕ್ಕೆ ಒಳಗಾಗಿದ್ದಾಳೆ. ಜೋರಾಸ್ಟರ್ ಧರ್ಮದಲ್ಲಿ ಹೆಣ್ಣು ಅಶುಭ. ಅದು ಹೇಳುವುದೂ ಕೂಡ "ನಿಮ್ಮ ಹೆಂಗಸರಲ್ಲಿ ನಂಬಿಕೆ ಇಡಬೇಡಿ. ಇಟ್ಟರೆ ನೀವು ನಾಚಿಕೊಳ್ಳುವ, ಪಶ್ಚಾತ್ತಾಪ ಪಡುವ ಸಂದರ್ಭ ಬಂದೀತು ಎಂದು ಯಹೂದ್ಯರು ತಾವು ಹೆಣ್ಣಾಗಿ ಹುಟ್ಟದಿರುವುದರಿಂದ ಧನ್ಯರೆಂದು ಭಾವಿಸುತ್ತಾರೆ. ಇನ್ನು ಕ್ರೈಸ್ತಧರ್ಮದಲ್ಲಿ ಆ್ಯಡಂ ಅಥವಾ ಮೂಲ ಪುರುಷನ ಪತನಕ್ಕೆ ಹೆಣ್ಣೇ (ಈವ್) ಕಾರಣವೆಂಬುದು ಪ್ರಬಲ ನಂಬಿಕೆ. ಗ್ರೀಕ್ ಸಂಸ್ಕೃತಿಯಲ್ಲಿಯೇ ಹೆಣ್ಣಿಗೆ ಮಾನ್ಯತೆಯಿಲ್ಲ ಅರಿಸ್ಟಾಟಲನಾದರೋ, ಪುರುಷನಿಗೆ ಅಧೀನವಾಗಿ ಬಾಳುವುದು ಹೆಣ್ಣಿನ ಧರ್ಮವೆನ್ನುತ್ತಾನೆ. ಮತ್ತೊಬ್ಬನಿಗೆ ಅವಳು ಅಪರಿಪೂರ್ಣಳು ಎನಿಸುತ್ತದೆ. ಇನ್ನು ಇಸ್ಲಾಂ ಮೂಲಭೂತವಾದಿತ್ವದಲ್ಲಿ ಹೆಣ್ಣಿನ ಸ್ಥಿತಿ ಮತ್ತುಷ್ಟು ಶೋಚನೀಯವಾಗಿದೆ.

ಭಾರತೀಯ ಪರಿಸರದಲ್ಲಿ ಇತಿಹಾಸದ ವಿವಿಧ ಹಂತಗಳಲ್ಲಿ ನಡೆದ ಧಾರ್ಮಿಕ ಚಳುವಳಿಗಳು ಮನುಷ್ಯನ ಬದುಕನ್ನು ಹಸನುಗೊಳಿಸಲು ಅನಿವಾರ್ಯವೆನಿಸಿದ ಆತ್ಮ, ಪರಮಾತ್ಮ ಚಿಂತನೆ, ಜಗತ್ತು, ಮಾಯೆ, ಅಧ್ಯಾತ್ಮ, ಅನುಭವ ಇತ್ಯಾದಿಗಳ ಬಗ್ಗೆ ಗಂಭಿರವಾಗಿ ಆಲೋಚಿಸಲು ಮುಂದಾದವು. ಧರ್ಮ, ಅರ್ಥ, ಕಾಮ, ಮೋಕ್ಷಾದಿಗಳ ಸಾಧನೆಗೆ ಹೆಣ್ಣಿನ ಅಗತ್ಯ ಪುರುಷನಿಗೆ ಬೇಕೇ ಬೇಕೆನಿಸಿದರೂ, ಹೆಣ್ಣಿಗೆ ಸ್ವತಃ ಆತ್ಮೋದ್ಧಾರಕ್ಕೆ, ಮೋಕ್ಷಕ್ಕೆ ಪರವಾನಗಿ ಇಲ್ಲದೆ ಹೋದದ್ದು ಒಂದು ದುರಂತ ವ್ಯಂಗ್ಯವೆನಿಸುತ್ತದೆ. ವೇದ ಶಾಸ್ತ್ರ ಪುರಾಣಗಳ ಓದಿಗೂ ನಿಷೇಧವಿದ್ದು ಶೂದ್ರ ಜಾತಿಯೊಂದಿಗೆ ಅವಳನ್ನು ಸಮೀಕರಿಸಲಾಗುತ್ತಿತ್ತು. ಜೈನಧರ್ಮ, ಬೌದ್ಧ ಧರ್ಮಗಳೂ ಹೆಣ್ಣಿಗೆ ಮೋಕ್ಷ ಪ್ರಾಪ್ತಿ, ಆತ್ಮಜ್ಞಾನ ಪ್ರಾಪ್ತಿಯ ಅವಕಾಶಗಳನ್ನು ನಿರಾಕರಿಸಿದವಾದರೂ, ನಂತರ ಕೆಲವು ಪ್ರತಿಬಂಧಕಗಳೊಂದಿಗೆ, ಪ್ರವೇಶಾವಕಾಶ ಲಭ್ಯವಾಯಿತು. ಆದರೆ ಬೌದ್ಧಧರ್ಮದಲ್ಲಿ ಬೌದ್ಧ ಸನ್ಯಾಸಿನಿಯರು ಎರಡನೆಯ ದರ್ಜೆಯಲ್ಲಿಯೇ ಉಳಿದರು. ಜೈನಧರ್ಮದಲ್ಲಿ ದಿಗಂಬರ ಪಂಥವು ಸ್ತ್ರೀ ಜನ್ಮಕ್ಕೆ ಮೋಕ್ಷವು ಸಾಧ್ಯವೇ ಇಲ್ಲವೆಂಬ ನಿಲುವನ್ನು ಪುರಸ್ಕರಿಸಿತು. ಶ್ವೇತಾಂಬರ ಪಂಥದಲ್ಲಿ ಮಹಿಳೆಯರಿಗೆ ಆತ್ಮಸಾಧನೆಯ ಅವಕಾಶಗಳಿದ್ದು ಅನೇಕ ಮಹಿಳೆಯರು ಸನ್ಯಾಸಿನಿಯರಾಗಿರುವುದು ಕಂಡು ಬರುತ್ತದೆ. ಚೀನಾ, ಜಪಾನ್ ದೇಶಗಳಲ್ಲಿಯೂ ಪುರುಷ ಪ್ರಾಧಾನ್ಯತೆ, ಪುರುಷನ ಬೌದ್ಧಿಕ ಸಾಮರ್ಥ್ಯಗಳಿಗೆ ಹೆಚ್ಚಿನ ಮಹತ್ವವಿದೆ.

ಹೀಗಾಗಿ ಜಗತ್ತಿನ ಹಲವು ಸಮಾಜ ಸಂಸ್ಕೃತಿಗಳಲ್ಲಿಯೂ, ಧಾರ್ಮಿಕ ಪಂಥಗಳಲ್ಲಿಯೂ ಹೆಣ್ಣಿಗೆ ಆತ್ಮಸಾಕ್ಷಾತ್ಕಾರ, ಆತ್ಮೋದ್ಧಾರ, ಅನುಭಾವಿಕ ನೆಲೆಗೇರುವ ಅವಕಾಶಗಳೇ ಇಲ್ಲದಂತಾಗಿರುವುದು ಸ್ಪಷ್ಟವಾಗಿದೆ.

ಧಾರ್ಮಿಕ ಚಳುವಳಿಗಳ ಹಾಗೆ, ೧೧, ೧೨ನೇ ಶತಮಾನಗಳಿಂದೀಚೆಗೆ ಹುಟ್ಟು ಪಡೆದ ವೀರಶೈವ ಚಳುವಳಿ, ವೈಷ್ಣವ ಭಕ್ತಿ ಚಳುವಳಿಗಳು ಹಿಂದಿನ ಧಾರ್ಮಿಕ ಚಳುವಳಿಗಳಿಗಿಂತ ಉದಾರವಾಗಿವೆ. ಈ ಚಳುವಳಿಗಳ ಅಂತರ್ಯದಲ್ಲಿ ಸುಧಾರಣಾ ಮನೋಭಾವವಿದ್ದು, ಜಾತಿ, ಕುಲ, ಲಿಂಗ ಭೇದಗಳನ್ನು ಮೀರಿ ಎಲ್ಲರನ್ನೂ ಭಕ್ತಿ ಪ್ರವಾಹದೊಳಗೆ ಸೆಳೆದುಕೊಂಡವು. ಭಕ್ತಿ ಚಳುವಳಿಗಳ ಮೂಲ ಧ್ಯೇಯ ಮಾನವ ಪ್ರೀತಿ, ಸಮಾನತೆಗಳಾಗಿದ್ದುದರಿಂದ ಸಮಾಜದಲ್ಲಿನ ಕೆಳವರ್ಗಕ್ಕೆ ಶೋಷಿತ ಸಮುದಾಯಗಳ ಬಗ್ಗೆ ಮತ್ತು ಸ್ತ್ರೀಯರ ಬಗ್ಗೆ ಉದಾತ್ತ ನಿಲುವನ್ನು ಹೊಂದಿದ್ದುದರಿಂದ ಅವರೆಲ್ಲರಿಗೂ ಆತ್ಮೋದ್ಧಾರಕ್ಕೆ, ಮೋಕ್ಷಕ್ಕೆ ಅವಕಾಶವನ್ನು ಕಲ್ಪಿಸಿದವು. ಅಷ್ಟೇ ಅಲ್ಲದೆ ದ್ವೈತ, ಸಿದ್ಧಾಂತದಲ್ಲಿ ಮಂಡಿತ ಜ್ಞಾನ ಮಾರ್ಗಕ್ಕಿಂತ ಭಿನ್ನವಾಗಿ ಜನಸಾಮಾನ್ಯನಿಗೂ ಸುಲಭ ಗ್ರಾಹ್ಯವಾದ 'ಭಕ್ತಿ'ಯನ್ನು ಎತ್ತಿಹಿಡಿದವು. ಆತ್ಮಶುದ್ಧಿಯಿಂದ ನಾಮಸ್ಮರಣೆ, ಆತ್ಮ ಸಮರ್ಪಣೆ, ನಿಷ್ಕಲ್ಮಶ ಭಕ್ತಿಯಿಂದ ಭಗವಂತನ ಸಾಕ್ಷಾತ್ಕಾರ ಸಾಧ್ಯವೆಂಬ ನಂಬಿಕೆಯ ಹಿನ್ನೆಲೆಯಲ್ಲಿ ಅಸಂಖ್ಯಾತ ಅನುಯಾಯಿಗಳು, ಹೆಂಗಸರೂ ಸೇರಿದಂತೆ ಭಕ್ತಿ ಪಂಥವನ್ನು ಅಪ್ಪಿಕೊಂಡರು. ಶಿವನಾಗಲಿ, ವಿಷ್ಣುವಾಗಲಿ – ಯಾವುದೇ ಹೆಸರಿನಲ್ಲಿರುವ ಭಗವಂತನನ್ನು ಪ್ರಿಯನನ್ನಾಗಿ, ಭಕ್ತನನ್ನು ಪ್ರೇಯಸಿಯಾಗಿ ಪರಿಭಾವಿಸಿಕೊಂಡು ಮಧುರ ಭಕ್ತಿಯ ಮೂಲಕ ಸಾಕ್ಷಾತ್ಕಾರ ಸಾಧನೆಯಲ್ಲಿ ತೊಡಗಿಸಿಕೊಂಡರು. ಮಹಿಳೆಯರಿಗಂತೂ ಈ ಭಕ್ತಿ ಚಳುವಳಿಗಳು ತಮ್ಮ ಪರಂಪರಾಗತ ದಾಸ್ಯ ಸ್ಥಿತಿಯಿಂದ ಸಮಾಜದ ಹಿಂಸೆ, ಕ್ರೌರ್ಯ ಶೋಷಣೆಯ ಕಪಿ ಮುಷ್ಟಿಯಿಂದ ಬಿಡುಗಡೆಯ ಮಾರ್ಗವಾಗಿ ಗೋಚರಿಸಿದವು.

ಭಕ್ತಿ ಚಳುವಳಿಯಲ್ಲಿ ಪ್ರಮುಖವಾದದ್ದು ಮತ್ತು ಅನೇಕ ಬಗೆಯ ಸಾಮಾಜಿಕ ಸುಧಾರಣೆಗಳ ಆಶಯವನ್ನು ಗರ್ಭೀಕರಿಸಿಕೊಂಡ ೧೨ನೇ ಶತಮಾನದ ವೀರಶೈವ ಚಳುವಳಿ ಅಥವಾ ವಚನ ಚಳುವಳಿ ಮನುಷ್ಯನ ಆತ್ಮೋದ್ಧಾರ, ಭಕ್ತಿ ಸಾಧನೆಗಳ ಅನಿವಾರ್ಯತೆಯ ಜೊತೆ ಜೊತೆಗೇ ಸಮಾಜದಲ್ಲಿ ಎಲ್ಲ ಜಾತಿವರ್ಗಗಳ ನಡುವೆ ಸಮಾನತೆಯನ್ನು ಆರ್ಥಿಕ ಸ್ವಾವಲಂಬನೆಯೂ ಅತ್ಯಗತ್ಯವೆಂದು ಸಾರುತ್ತಲೇ, ಸ್ತ್ರೀ–ಪುರುಷರೆಲ್ಲರಿಗೂ ವೃತ್ತಿ, ಶಿಕ್ಷಣ, ಅಧ್ಯಾತ್ಮ ಅನುಭಾವ ವಲಯಗಳಲ್ಲಿ ಅವಕಾಶವನ್ನು ಕಲ್ಪಿಸುವ ಪ್ರಯತ್ನಗಳೂ ನಡೆದವು.

ಬಹುಶಃ ಜಗತ್ತಿನ ಇತಿಹಾಸದಲ್ಲಿಯೇ ಅನನ್ಯವೆನಿಸುವ ವೀರಶೈವ ಚಳುವಳಿ ಸಮಾನತೆ, ಸಹಕಾರ, ಜಾತ್ಯತೀತತೆ, ಲಿಂಗ ಸಮಾನತೆ ಮುಂತಾದ ಆಶಯಗಳನ್ನು ಧಾರ್ಮಿಕ ಚಳುವಳಿಯು ಅಂತರ್ಭಾಗವಾಗಿಸಿಕೊಂಡ ಮೊಟ್ಟ ಮೊದಲ ಪ್ರಯತ್ನವೆನಿಸುತ್ತದೆ. ಊಹೆಗೂ ನಿಲುಕದ ಪ್ರಮಾಣದಲ್ಲಿ ಈ ಚಳುವಳಿಯಲ್ಲಿ, ಹೆಂಗಸರು ಮೈ ಛಳಿ ಬಿಟ್ಟು, ಹೊಸಬಗೆಯ ಬಿಡುಗಡೆಯ ಭಾವದೊಂದಿಗೆ ಭಾಗವಹಿಸಿ, ಪುರುಷರಿಗೆ ಸಮಾನವಾಗಿ ಭಕ್ತಿಸಾಧನೆ, ಕಾಯಕ, ಅನುಭಾವ ಗೋಷ್ಠಿ, ಅಧ್ಯಾತ್ಮಿಕ ಚರ್ಚೆಗಳಲ್ಲಿ ಭಾಗವಹಿಸಿದ್ದು, ಅತ್ಯಂತ ಬೆರಗಿನ ಸಂಗತಿಯಾಗಿದೆ.

ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ, ಬಂಗಾಳ ಮುಂತಾದ ಪ್ರದೇಶಗಳಲ್ಲಿ ಹೆಚ್ಚು ಕಡಿಮೆ ಒಂದೇ ಕಾಲದ ಅಂತರದಲ್ಲಿ ವೈಷ್ಣವ ಭಕ್ತಿ, ಕೃಷ್ಣ ಭಕ್ತಿ ಚಳುವಳಿಗಳು ಪ್ರಬಲವಾಗಿ, ಭಾರತಾದ್ಯಂತ ವ್ಯಾಪಿಸಿದವು. ಸಾಂಸಾರಿಕ ಕಷ್ಟ ಕೋಟಲೆಗಳಿಂದ ತಮ್ಮ ಅತ್ಯಂತ ದೀನ ಹೀನ ಸ್ಥಿತಿಯಿಂದ ವೈವಾಹಿಕ ಬಂಧನಗಳಿಂದ ವೈಧವ್ಯ, ಸಹಗಮನ ಇತ್ಯಾದಿಗಳ ಕ್ರೌರ್ಯದಿಂದ ಬಿಡುಗಡೆ ಹೊಂದಲು 'ಭಕ್ತಿ ಸಾಧನೆ'ಯ ಮಾರ್ಗ ಅವರ ಪಾಲಿಗೆ ಸುವರ್ಣಾವಕಾಶವಾಯಿತು. ಈ ಭಕ್ತಿ ಚಳುವಳಿಗಳು ಮಹಿಳೆಯರನ್ನು ಅತ್ಯಂತ ಗೌರವ ಭಾವದಿಂದ ಕಂಡವು. ೮ನೇ ಶತಮಾನದಲ್ಲಿ ತಮಿಳುನಾಡಿನ ಆಳ್ವಾರರ, ನಾಯನಾರರ ಭಕ್ತಿ ಚಳುವಳಿ ೧೨ನೇ ಶತಮಾನದ ಕರ್ನಾಟಕ ವೀರಶೈವ ಚಳುವಳಿ, ಮಹಾರಾಷ್ಟ್ರದ ನಾಥ ಪಂಥ, ಬಂಗಾಲದ ಚೈತನ್ಯ ಪಂಥ, ಸೂಫಿ ಪಂಥ, ಕಾಶ್ಮೀರ ಶೈವ ಪಂಥ ಮೊದಲಾದವುಗಳು ಮಹಿಳೆಯರನ್ನು ಮಹಿಳೆಯರಾಗಿ ಕಾಣದೆ ಮನುಷ್ಯರನ್ನಾಗಿ ಮತ್ತು ಭಕ್ತಿ, ಮೋಕ್ಷ ಸಾಧನೆಗೆ ಪುರುಷರಷ್ಟೇ ಅರ್ಹರು, ಸಮರ್ಥರು ಎಂದು ಭಾವಿಸಿದುದರ ಪರಿಣಾಮವಾಗಿ, ಆಂಡಾಳ್, ಅಕ್ಕಮಹಾದೇವಿ, ಮುಕ್ತಾಬಾಯಿ, ಮೀರಾಬಾಯಿ, ಲಲ್ಲೇಶ್ವರಿ ಮತ್ತು ಇತ್ತೀಚಿನ ಕೇರಳದ ಮಾತಾ ಅಮೃತಾನಂದಮಯಿ, ಮಾತೆ ಮಹಾದೇವಿ ಮೊದಲಾದ ಮಹಿಳಾ ಸಂತ ಪರಂಪರೆಯೊಂದು ಹುಟ್ಟಿಕೊಳ್ಳಲು ಸಾಧ್ಯವಾಯಿತು.

ಇವರುಗಳಲ್ಲಿ ಕರ್ನಾಟಕದ ಅಕ್ಕಮಹಾದೇವಿ, ತಮಿಳುನಾಡಿನ ಆಂಡಾಳ್, ರಾಜಸ್ಥಾನದ ಮೀರಾ ಮೊದಲಾದವರು ಭಕ್ತಿ ಸಾಧನೆಯ ಜೊತೆ ಜೊತೆಗೆ ಮಾಡಿದ ಕಾವ್ಯ ಸಾಧನೆ ಅತ್ಯಂತ ಮಹತ್ವದ್ದೆನಿಸಿದೆ. ಈ ಚಳುವಳಿಗಳಲ್ಲಿ ಅಪಾರ ಸಂಖ್ಯೆಯಲ್ಲಿ ಮಹಿಳೆಯರು ಭಾಗವಹಿಸಿದರೂ ಆತ್ಮಸಾಧನೆ, ಅನುಭಾವ, ಸಾಹಿತ್ಯ ಸಾಧನೆಯಲ್ಲಿ ಔನ್ನತ್ಯವನ್ನು ಪಡೆಯಲು ಸಾಧ್ಯವಾದದ್ದು ಕೇವಲ ಕೆಲವರಿಗೆ ಮಾತ್ರ. ಅಸಂಖ್ಯಾತ ಶರಣೆಯರು ವಚನಗಳ ರಚನೆ ಮಾಡಿದ್ದರೂ ಅವುಗಳಿಗೆ ಅಷ್ಟಾಗಿ ಸಾಹಿತ್ಯಕ ಮೌಲ್ಯ ಇಲ್ಲದೆ ಹೋದದ್ದು ಅವರವರ ಬದುಕಿನ ಹಿನ್ನೆಲೆ, ಸಂಸ್ಕಾರ, ಶಿಕ್ಷಣದಿಂದಾಗಿ!

ಭಾರತೀಯ ಸಮಾಜ ಅಥವಾ ಮಾನವ ಚರಿತ್ರೆಯಲ್ಲಿ ಅವಳಿಗೆ ಮೀಸಲಿದ್ದ ಕುಟುಂಬ, ವಿವಾಹ, ಸಂತಾನೋತ್ಪತ್ತಿ, ಪುರುಷ ಪರಿಚರ್ಯೆಗಳಿಂದ ಬಿಡುಗಡೆ ಹೊಂದಿ, ಹೆಣ್ಣು ಮುಗ್ಧೆ, ಅಬಲೆ, ಅಸಹಾಯಕಳು, ಅಧೀನಳು, ಅಜ್ಞಾನಿ ಇತ್ಯಾದಿ ಅಭಿದಾನಗಳಿಂದ ಮುಕ್ತರಾಗಿ ತಮ್ಮೊಳಗಿನ ಅಖಂಡ, ಆತ್ಮಶಕ್ತಿ, ಅದ್ಭುತ ಚೈತನ್ಯಶೀಲತೆ, ಸೃಜನಶೀಲತೆಗಳನ್ನು, ಭಕ್ತಿ ಸಾಧನೆ, ಅನುಭಾವ ಚಿಂತನೆಗಳ ಮೂಲಕ ತೋರಿಸಿಕೊಟ್ಟರು. ಆದರೂ ಸ್ತ್ರೀ ವಿರೋಧಿ ಶಕ್ತಿಗಳು ಭಕ್ತಿಸಾಧನೆಯಲ್ಲಿ ತೊಡಗಿಸಿಕೊಳ್ಳಲು ಮಹಿಳೆಯರನ್ನು ಸುಲಭವಾಗಿ ಬಿಡಲಿಲ್ಲ. ಅವರ ಶಕ್ತಿ ಸಾಮರ್ಥ್ಯಗಳ ಬಗ್ಗೆ ಅಪನಂಬಿಕೆ, ಸಂಪ್ರದಾಯ, ಸಮಾಜ, ಪರಂಪರೆ ವಿಧಿಸಿದ ನಿಯಮಗಳ ಉಲ್ಲಂಘನೆ ಮಾಡುತ್ತಿದ್ದಾರೆಂಬ ಆಕ್ರೋಶ, ಪುರುಷರನ್ನು ತಮ್ಮ ಚಿತ್ತ ಚಾಂಚಲ್ಯದಿಂದ ಸೆಳೆದು ತಪ್ಪುದಾರಿಗೆಳೆಯಬಹುದೆಂಬ ಅನುಮಾನ– ಮುಂತಾದವುಗಳು ಅವರನ್ನು ಕಂಗೆಡಿಸಿದ ಕಾರಣ, ವಿರೋಧ, ಪರೀಕ್ಷೆಗಳು ಸಂತರಾಗ ಬಯಸಿದ ಮಹಿಳೆಯರಿಗೆ ಅನಿವಾರ್ಯವಾದವು. ಅಕ್ಕಮಹಾದೇವಿ, ಮೀರಾ

ಮೊದಲಾದವರ ಬದುಕಿನ ಸನ್ನಿವೇಶ, ಸಂಘರ್ಷಗಳೇ ಇದಕ್ಕೆ ಸಾಕ್ಷಿಯಾಗಿದೆ. ಆದರೆ ಒಮ್ಮೆ ಇಂತಹ ಅಗ್ನಿ ದಿವ್ಯಗಳಿಂದ ಹೊರಬಂದ ಮೇಲೆ ಅವರ ಭಕ್ತಿ ಸಾಧನೆ, ಅನುಭಾವಗಳ ಸಾಮರ್ಥ್ಯದ ಅರಿವಾದ ಮೇಲೆ ಅವರನ್ನು ಮುಕ್ತ ಕಂಠದಿಂದ ಹೊಗಳಿ ಹಾಡಿದ್ದಿದೆ.

ಅದರಲ್ಲಿಯೂ ವೈಷ್ಣವ ಪಂಥದಲ್ಲಿ, ಕೃಷ್ಣ ಚೈತನ್ಯ ಪಂಥದಲ್ಲಿ ಆರಾಧ್ಯ ದೈವಗಳಾದ ಕೃಷ್ಣ, ವಿಷ್ಣು ದೇವರುಗಳು ಸಪತ್ನೀಕರು, ಲಕ್ಷ್ಮೀನಾರಾಯಣ, ರಾಧಾಕೃಷ್ಣ ಕಲ್ಪನೆಯಲ್ಲಿ ಸ್ತ್ರೀ-ಪುರುಷ ಸಂಬಂಧದ ಅನನ್ಯತೆಯಿದೆ. ಅಲ್ಲದೆ ಮಧುರ ಭಕ್ತಿಯಲ್ಲಿ ಸತಿ ಪತಿ ಭಾವ ಪ್ರಿಯಪ್ರೇಯಸೀ ಭಾವವೇ ಪ್ರಧಾನವಾಗಿ ಭಕ್ತಿ ಸಾಧನೆಯಲ್ಲಿ ಪ್ರಿಯ-ಪತಿ ರೂಪೀ ಭಗವಂತನನ್ನು ವಿರಹಾಕುಲ ಸ್ಥಿತಿಯ ಮೂಲಕ ಆರಾಧಿಸುವುದು. ಅವನಿಗಾಗಿ ಅವನ ಮಿಲನಕ್ಕಾಗಿ ಪರಿತಪಿಸುವುದು, – ಲೌಕಿಕಭಾವ ಸ್ಥಿತಿಗಳ ನೆಲೆಯಿಂದ ಅಧ್ಯಾತ್ಮಿಕದ ನೆಲೆಗೆ ತಲುಪುವ ಪ್ರಯತ್ನವೇ ಆಗಿದೆ. ಅನೇಕ ಸಂತರು, ಶರಣರು ದಾಂಪತ್ಯ, ವಿವಾಹ ವ್ಯವಸ್ಥೆಯೊಳಗಿದ್ದುಕೊಂಡೇ ಭಕ್ತಿ ಸಾಧನೆ ಮಾಡಿದವರಾಗಿದ್ದಾರೆ.

ವೈಯಕ್ತಿಕ ಸಾಧನೆಗಳಾದ ಧ್ಯಾನ, ಜಪ, ತಪ, ಸಂಕೀರ್ತನ ನಾಮಸ್ಮರಣ ಮುಂತಾದವುಗಳಿಗೆ ಸ್ತ್ರೀ ಪುರುಷರಿಗೆ ಸಮಾನಾಧಿಕಾರಗಳು ಪ್ರಾಪ್ತವಾಗಿದ್ದವು. ಅಲ್ಲದೆ ಸ್ತ್ರೀ ಗೌರವಕ್ಕೆ ಮತ್ತೊಂದು ಕಾರಣ, ಭಗವಂತನೊಬ್ಬನನ್ನು ಬಿಟ್ಟರೆ ಭಕ್ತರೆಲ್ಲರೂ ಗೋಪಿಯರೆಂಬ ನಂಬಿಕೆ ವೈಷ್ಣವ ಪಂಥದ್ದಾದರೆ, ಶಿವನ ಹೊರತು ಶರಣರೆಲ್ಲರೂ ಅವನ ಸತಿಯರೆಂಬ ನಂಬಿಕೆ ವೀರಶೈವರದಾಗಿದ್ದು, ಈ ನಿಟ್ಟಿನಿಂದ ಭಕ್ತ ಗಂಡಾಗಲೀ, ಹೆಣ್ಣಾಗಲೀ ಒಂದೇ ಎನ್ನುವ ಭಾವ ವೈಶಾಲ್ಯ, ನಂಬಿಕೆ, ಪರಿಕಲ್ಪನೆಗಳೂ ಸೇರಿದ್ದರಿಂದಲೇ, ಮಹಿಳೆಯರಿಗೂ ಗೌರವ ಸಲ್ಲಲು, ಸಮಾನರೆಂದು ಭಾವಿಸಲು ಸಾಧ್ಯವಾಯಿತು.

ಸಮಾಜ, ಸಂಸ್ಕೃತಿ, ಧರ್ಮದ ನೆಲೆಯಿಂದ ಸ್ತ್ರೀ ವಿಚಾರವಾಗಿ ಪ್ರಚಲಿತ ಅಭಿಪ್ರಾಯಗಳು – ವಾಸ್ತವವಾಗಿ ಅವಳು ಬದುಕುತ್ತಿದ್ದ ವ್ಯವಸ್ಥೆಯ ಸಂಕುಚಿತ, ನಿಷ್ಠುರ ನಿಯಮಗಳ ನಡುವೆಯೂ, ಜ್ಞಾನಾರ್ಜನೆ, ಬೌದ್ಧಿಕ ವಿಕಾಸ, ವೈಯಕ್ತಿಕ ಸಾಧನೆಗಳಿಗೆ ಅವಕಾಶವೇ ಇಲ್ಲದಂತೆ, ನಾಲ್ಕು ಗೋಡೆಗಳ ನಡುವೆ ಅಜ್ಞಾನವೆಂಬ ಕತ್ತಲ ಕೂಪದಲ್ಲಿ ಉಸಿರುಗಟ್ಟಿ ಹೆಣದಂತೆ ಬಾಳಬೇಕಾದ ಪರಿಸ್ಥಿತಿಯಲ್ಲಿಯೂ ಮಹಿಳೆಯರು ದಾಸ್ಯದ ಸಂಕೋಲೆಗಳನ್ನು ಕಿತ್ತೆಸೆದು, ಆತ್ಮಸ್ಥೈರ್ಯ, ಪ್ರತಿಭಟನಾ ಮನೋಧರ್ಮದೊಂದಿಗೆ ಹೊರ ಬರಲು ಸಾಧ್ಯವಾದದ್ದು ಭಕ್ತಿ ಚಳುವಳಿಗಳ ಸಂದರ್ಭದಲ್ಲಿ ಎಂಬುದು ವಾಸ್ತವ ಸತ್ಯವಾಗಿದೆ.

**ಭಕ್ತಿ ಚಳುವಳಿ ಮತ್ತು ಮಹಿಳೆ**

ಮೇಲೆ ಕಾಣಿಸಿದ ವಿಷಯದ ಅಧ್ಯಯನವನ್ನು ಕೆಳಗೆ ಕಾಣಿಸಿದ ಅಂಶಗಳ ಹಿನ್ನೆಲೆಯಲ್ಲಿ ನಡೆಸಲಾಗುವುದು:-

೧) ಭಾರತೀಯ ಸಮಾಜದಲ್ಲಿ ಹೆಣ್ಣು:

(ಅ) ಐತಿಹಾಸಿಕವಾಗಿ ವಿವಿಧ ಕಾಲಘಟ್ಟಗಳಲ್ಲಿ ಪ್ರಚಲಿತವಿದ್ದ ಧೋರಣೆಗಳು.

(ಆ) ಪುರಾಣ ಮಹಾಕಾವ್ಯಗಳಲ್ಲಿ ಕಾಣಿಸುವ ಹೆಣ್ಣಿನ ಮಾದರಿಗಳು.

೨) ಧಾರ್ಮಿಕ ಹಿನ್ನೆಲೆಯಲ್ಲಿ ಹೆಣ್ಣು:

(ಅ) ಜಗತ್ತಿನ ಪ್ರಮುಖ ಧರ್ಮಗಳ ದೃಷ್ಟಿಯಲ್ಲಿ ಹೆಣ್ಣಿನ ಪರಿಕಲ್ಪನೆ – ನಿಲುವುಗಳು.

(ಆ) ಇಸ್ಲಾಂ ಧರ್ಮ ಹೆಣ್ಣನ್ನು ಪರಿಭಾವಿಸುವ ರೀತಿಗಳು.

(ಇ) ಭಾರತದಲ್ಲಿ ಕಾಲಕಾಲಕ್ಕೆ ನಡೆದ ಧಾರ್ಮಿಕ ಚಳುವಳಿಗಳು, ಅವುಗಳ ಆಶಯ ಚಳುವಳಿಗೆ ಪ್ರೇರಣೆ – ತಾತ್ತ್ವಿಕ ಅಂಶಗಳು, ಹೆಣ್ಣಿಗೆ ಇದ್ದ ಅವಕಾಶಗಳ ಸ್ವರೂಪ.

೩) ಭಕ್ತಿ ಚಳುವಳಿ:

ಶೈವ, ವೈಷ್ಣವ ಪಂಥಗಳ ಹುಟ್ಟು: ಅವುಗಳ ಸ್ವರೂಪ, ಆಶಯ, ಸಿದ್ಧಾಂತ, ಧೋರಣೆ, ಉದಾತ್ತ ಅಂಶಗಳು – ಪ್ರಭಾವ, ಪ್ರಚಾರ.

೪) ಮಹಿಳೆಯರ ಪ್ರವೇಶ:

(ಅ) ಈ ಚಳುವಳಿಗಳಲ್ಲಿ ಮಹಿಳೆಯರ ಪ್ರವೇಶ – ಮಹಿಳೆಯರ ಬಗೆಗೆ ಈ ಭಕ್ತಿ ಪಂಥಗಳ ಬದಲಾದ ಧೋರಣೆ – ಇದಕ್ಕೆ ಕಾರಣ.

ಪ್ರಮುಖ ಮಹಿಳಾ ಸಂತರಾದ ಅಕ್ಕಮಹಾದೇವಿ, ಆಂಡಾಳ್, ಮೀರಾ – ಇವರ ಭಕ್ತಿ ಸಾಧನೆ, ಕಾವ್ಯ ಸಾಧನೆಗಳ ವಿಸ್ತೃತ ಅಧ್ಯಯನ.

ಇಂತಹ ಭಕ್ತಿ ಪಂಥದ ವಿಸ್ತರಣೆ – ಪ್ರಭಾವ –

(ಆ) ಆಧುನಿಕ ಯುಗದಲ್ಲಿ ಸಾಧಕ ಸ್ಥಿತಿಯನ್ನು ಆವಾಹಿಸಿಕೊಂಡ ಕವಯಿತ್ರಿಯರು, ಸುಭದ್ರಾಕುಮಾರಿ ಚೌಹಾನ್ ಮತ್ತು ಮಹಾದೇವಿ ವರ್ಮಾ.

೫) ಮುಕ್ತಾಯ:

ಸ್ತ್ರೀ ಮುಕ್ತಿ, ಸ್ತ್ರಿ ವಿಮೋಚನೆಗಳನ್ನು ಅಧ್ಯಾತ್ಮಿಕ ಅನುಸಂಧಾನ, ಅನುಭಾವ, ಭಕ್ತಿ ಸಾಧನೆಗಳ ಮೂಲಕ ಸಾಧ್ಯವಾಗಿಸಿದ್ದು ವಿಶೇಷವಾಗಿ, ೧೨ನೇ ಶತಮಾನ, ೧೫–೧೭ನೇ ಶತಮಾನದ ಅವಧಿಯಲ್ಲಿ ಕಾಣಿಸಿಕೊಂಡ ಭಕ್ತಿ ಚಳುವಳಿಗಳು ಎನ್ನುವುದು ನಿರ್ವಿವಾದ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ–ಜೂನ್, ೨೦೧೫

# ೭. "ಸಂಸ್ಕೃತದಲ್ಲಿ ಸಂವಾದವನ್ನು ಕುರಿತು"

–ಪ್ರೊ. ಎಚ್.ಎಸ್. ಅನಂತನಾರಾಯಣ*

ಪಾಣಿನಿಯ ಸಂಸ್ಕೃತವನ್ನು ಕುರಿತ ವ್ಯಾಕರಣ, ಅಷ್ಟಾಧ್ಯಾಯೀ ಭಾರತೀಯ ವ್ಯಾಕರಣ ಶಾಸ್ತ್ರ ಪರಂಪರೆಯಲ್ಲಿ ಹೆಚ್ಚಿನ ಹೆಸರು ಗಳಿಸಿದೆ ಮತ್ತು ವೇದಾಂಗಗಳ ಪೈಕಿ ಅಗ್ರಸ್ಥಾನವನ್ನಲಂಕರಿಸಿದೆ (ಷಟ್‌ಸ್ವಂಗೇಷು ಪ್ರಧಾನಂ ವ್ಯಾಕರಣಂ). ಇದರ ಇನ್ನೊಂದು ಹೆಸರು 'ಶಬ್ದಾನು ಶಾಸನ' ಎಂದು. ಅಂದರೆ, ಇಲ್ಲಿ ಶಬ್ದಗಳನ್ನು ಕುರಿತಾದ (ವೈದಿಕಾನಾಂ ಲೌಕಿಕಾನಾಂಚ) ವರ್ಣನೆ ಇದೆ. ಅರ್ಥ ಸೂಚಕ ಘಟಕಗಳಾದ ಪದಗಳ ಸ್ವತಂತ್ರರೂಪ ಹಾಗೂ ಅವುಗಳೆರಡರ ಜೋಡಣೆಯಾದಾಗ ವರ್ಣ ಮತ್ತು ಸ್ವರದಲ್ಲಿ ಉಂಟಾಗುವ ಬದಲಾವಣೆಗಳನ್ನು ಕುರಿತಾದ ಚರ್ಚೆ ಇದೆ. ಮಾತನಾಡುವಾಗ ಉಪಯೋಗಿಸುವ ಪದಗಳ ಸಾಧು ರೂಪ ಹಾಗೂ ಸಾಧು ಪ್ರಯೋಗದ ತಿಳಿವಳಿಕೆಯಿಂದಾಗುವ ಲಾಭ, ಅನ್ಯಥಾ ಸಂಭವಿಸುವ ಹಾನಿಯ ಬಗ್ಗೆ ಸಹ ಸೂಚನೆಯಿದೆ. (ಏಕಃ ಶಬ್ದಃ ಸಮ್ಯಕ್ ಜ್ಞಾತಃ, ಸುಷ್ಟು ಪ್ರಯುಕ್ತಃ, ಸ್ವರ್ಗೇಲೋಕೇ ಕಾಮಧುಗ್ ಭವತಿ; ಮಂತ್ರೋಹೀನಃ ಸ್ವರತೋ ವರ್ಣತೋ ವಾಮಿಥ್ಯಾ ಪ್ರಯುಕ್ತಃ ನತಮರ್ಥಮಾಹ) ಇದಲ್ಲದೆ, ವೈದಿಕ ಶಬ್ದಗಳಲ್ಲಿ ಸ್ವರವಿಧಾನಕ್ಕೆ ವಿಶೇಷ ಗಮನವನ್ನು ನೀಡಲಾಗಿದೆ. ಕೇವಲ ಸ್ವರ ಭೇದದಿಂದಲೇ ಸಮಾನರೂಪದ, ಆದರೆ ಭಿನ್ನಾರ್ಥದ ಪದಗಳೆರಡನ್ನು ಪ್ರತ್ಯೇಕಿಸಲು ಸಾಧ್ಯ. ಉದಾ. ವರಃ 'ಅನುಗ್ರಹ' (ಆದ್ಯುದಾತ್ತ), ವರಃ 'ಕನ್ಯೆಯೊಬ್ಬಳನ್ನು ವರಿಸುವವನು' (ಅಂತೋದಾತ್ತ).

'ಪದ'ವೇನೆಂಬುದರ ನಿರ್ವಚನವನ್ನು ಪಾಣಿನಿ ಎರಡು ಪ್ರತ್ಯೇಕ ಸೂತ್ರಗಳಲ್ಲಿ ನೀಡಿದ್ದಾನೆ ಹಾಗೂ ತನ್ನ ವ್ಯಾಕರಣದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಸೇರಿಸಿದ್ದಾನೆ. ಸುಪ್‌ತಿಜಂತಂ ಪದಮ್ (೧.೪.೧೪) ಎಂಬ ಸೂತ್ರದಲ್ಲಿ ಪ್ರಾತಿಪದಿಕ । ಧಾತುವಿಗೆ ವಿಭಕ್ತಿ ಪ್ರತ್ಯಯ (ವಿಭಕ್ತಿಶ್ಚ – ೧.೪.೧೦೪) ಸೇರುವುದರಿಂದೇರ್ಪಡುವ ಅರ್ಥಸೂಚಕ

* #೨೦೬, 'ಬ್ರಿಗೇಡ್ ಕ್ಲಾಸಿಕ್', ಆರ್ಮುಗಂ ವೃತ್ತ, ಬಸವನ ಗುಡಿ, ಬೆಂಗಳೂರು – ೫೬೦೦೦೪.
ಮೊ: ೯೯೮೦೬೩೨೮೧೦

ರೂಪವನ್ನು ಪದವೆಂದಿದ್ದಾನೆ. ಈ ಸೂತ್ರದ ಪ್ರಕಾರ ನಾಮ ಹಾಗೂ ಆಖ್ಯಾತ ಎರಡೂ ಪದಗಳು. ಅನುದಾತ್ತಂ ಪದಂ ಏಕವರ್ಜಮ್ (೬.೧.೧೫೮) ಎಂಬ ಇನ್ನೊಂದು. ಸೂತ್ರದಲ್ಲಿ, ಯಾವುದೇ ಪದದಲ್ಲಿ ಅದರಲ್ಲಿನ ಒಂದಕ್ಷರವನ್ನು ಹೊರತು ಉಳಿದೆಲ್ಲ ಅಕ್ಷರಗಳು ಅನುದಾತ್ತ ಸ್ವರದಿಂದ ಕೂಡಿರುತ್ತವೆಂದು ಹೇಳಿದ್ದಾನೆ. ಅನುದಾತ್ತವಲ್ಲದಕ್ಷರ ಉದಾತ್ತ ಸ್ವರದಿಂದ ಕೂಡಿದ್ದು ಪದಗಳೆರಡರ ಪ್ರತ್ಯೇಕತೆಗೆ ಮುಖ್ಯ ಸಾಧನವಾಗುತ್ತದೆ. ಅದು ಪದದ ಆದಿ, ಅಂತ್ಯ ಅಥವಾ ಇನ್ನಾವುದೇ ಅಕ್ಷರದೊಡನಿರಬಹುದು. ಆದ್ಯಕ್ಷರದೊಂದಿಗೆ ಇಂದ್ರಃ, ಅನ್ನಂ, ಅಶ್ವಃ, ಅಂತ್ಯಾಕ್ಷರದೊಂದಿಗೆ – ಅಗ್ನಿಃ, ಕವಿಃ, ಘೃತಮ್; ಇತರೆಡೆಗಳಲ್ಲಿ ಚಿತ್ರಭಾನುಃ, ಯಾತುಧಾನ, ಪುರೋಹಿತಃ. ಸ್ವರವಿಧಾನವನ್ನಾಧರಿಸಿ, ಉದಾತ್ತ ಸ್ವರಗಳಿಲ್ಲದ ಶಬ್ದಗಳು, (ನಿಪಾತಗಳು), ಉದಾತ್ತವೊಂದಿರುವ ಶಬ್ದಗಳು (ನಾಮ, ಆಖ್ಯಾತ), ಒಂದಕ್ಕೂ ಹೆಚ್ಚು ಉದಾತ್ತ ಸ್ವರವಿರುವುದು (ಸಮಾಸಪದ, ವಾಕ್ಯ) ಎಂದು ವಿಂಗಡಿಸಬಹುದು. ಎರಡೇ ಪದಗಳಿರುವ, ದ್ವಂದ್ವೇತರ ಸಮಾಸಪದಗಳಲ್ಲಿ ಮೊದಲ ಪದ ವಿಭಕ್ತಿ ರಹಿತವಾಗಿಯೂ, ಎರಡನೆಯ ಪದ ವಿಭಕ್ತಿ ಸಹಿತವಾಗಿಯೂ ಇದ್ದು, ಅವುಗಳಲ್ಲಿ ಮೊದಲ ಅಥವಾ ಎರಡನೆಯ ಪದ ಪ್ರಧಾನವಾಗಿ ಉದಾತ್ತ ಸ್ವರವನ್ನು ಹೊಂದಿರುತ್ತದೆ. ಇನ್ನೊಂದು ಪದದಲ್ಲಿನ ಉದಾತ್ತ ಸ್ವರ ನಷ್ಟವಾಗಿರುತ್ತದೆ (ಕವಿಕ್ರತುಃ, ಹಿರಣ್ಯಾಕ್ಷಃ, ರತ್ನಧಾತಮಮ್). ದ್ವಂದ್ವಸಮಾಸ ಪದದಲ್ಲಾದರೋ ಎಲ್ಲ ಪದಗಳೂ ಪ್ರಧಾನವೆನಿಸಿ, ಎಲ್ಲವೂ ತಮ್ಮ ಉದಾತ್ತಸ್ವರವನ್ನು ಉಳಿಸಿಕೊಂಡಿರುತ್ತವೆ (ಇಂದ್ರಾಗ್ನೀ, ಮಿತ್ರಾ ವರುಣಾ, ದ್ಯಾವಾಪೃಥಿವೀ, ಹಸ್ತ್ಯಶ್ವರಥಪದಾತಯಃ).

ವಾಕ್ಯದಲ್ಲಿ ಪದಗಳ ಜೋಡಣೆ (ವಾಕ್ಯಂತು ಪದ ಸಮೂಹಃ) ಇರುವುದಾದರೂ, ಸಂಸ್ಕೃತದಲ್ಲಿ ಅವು ಒಂದು ನಿಶ್ಚಿತ ಕ್ರಮದಲ್ಲಿ ಇರಬೇಕೆಂಬ ನಿಯಮವಿಲ್ಲ. ಪದಗಳಲ್ಲಿನ ವಿಭಕ್ತಿ ಪ್ರತ್ಯಯದಿಂದಲೇ ಅವುಗಳ ಪರಸ್ಪರ ಸಂಬಂಧ ತಿಳಿದು ಬರುವುದರಿಂದ ಕೆಲವು ಭಾಷೆಗಳಲ್ಲಿ (ಉದಾ: ಇಂಗ್ಲೀಷ್) ಕಂಡು ಬರುವ ನಿಯತ ಪದಕ್ರಮ ಸಂಸ್ಕೃತ ಭಾಷೆಯಲ್ಲಿ ಅನವಶ್ಯಕ. ಯಾವ ಕ್ರಮದಲ್ಲಿ ಪದಗಳನ್ನು ವಾಕ್ಯದಲ್ಲಿ ಉಪಯೋಗಿಸಬೇಕೆಂಬುದನ್ನು ಮಾತನಾಡುವವನೇ ನಿಶ್ಚಯಿಸುತ್ತಾನೆ. 'ಪಾತ್ರಂ ಆಹರ' ಎಂದು ಒಬ್ಬನು ಹೇಳಿದರೆ, 'ಆಹರಪಾತ್ರಂ' ಎಂದು ಇನ್ನೊಬ್ಬನು ಹೇಳಲು ಸಾಧ್ಯ. 'ರಾಮಃ ವಾಲಿನಂ ಬಾಣೇನ ಅಹನತ್' ಎಂಬ ವಾಕ್ಯವನ್ನು ಇದೇ ಕ್ರಮದಲ್ಲಿ ಹೇಳಬೇಕಾಗಿಲ್ಲ. ಇದರ ಬಗ್ಗೆ ಮಹಾ ಭಾಷ್ಯದಲ್ಲಿ ಪತಂಜಲಿಯು ಹೇಳಿರುವ ಮಾತನ್ನು ಇಲ್ಲಿ ಸ್ಮರಿಸಬಹುದು – ಸಂಸ್ಕೃತ್ಯ ಸಂಸ್ಕೃತ್ಯ ಪದಾನಿ ಉತ್ಸೃಜ್ಯಂತೆ. ತೇಷಾಂ ಯಥೇಷ್ಟಂ ಅಭಿಸಂಬಂಧೋ ಭವತಿ).

ವಾಕ್ಯದ ಬಗ್ಗೆ ಇನ್ನೂ ಕೆಲವು ವಿವರಗಳು ತಿಳಿದುಬಂದಿವೆ. ವಾಕ್ಯದ ಪ್ರಾರಂಭದಲ್ಲಿ ಸಂಬೋಧನಾ ಪದವೊಂದು ಉಪಯೋಗವಾದರೆ, ಅದು ಉದಾತ್ತ ಸ್ವರವನ್ನು ಪಡೆಯುತ್ತದೆ (ಅಗ್ನೇನಯ ಸುಪಥಾ ರಾಯೇ ಅಸ್ಮಾನ್). ವಾಕ್ಯದ ಇತರ ಸ್ಥಾನಗಳಲ್ಲಿದ್ದಾಗ ಉದಾತ್ತ ಸ್ವರವನ್ನು ಕಳೆದುಕೊಳ್ಳುತ್ತವೆ (ಪ್ರಜಾ ಅಗ್ನೇ ಸಂವಾಸಯ).

ಹಾಗೆಯೇ, ವಾಕ್ಯದ ಪ್ರಾರಂಭದಲ್ಲಿ ಕ್ರಿಯಾಪದವು ಉದಾತ್ತ ಸ್ವರದಿಂದ ಕೂಡಿರುತ್ತದೆ. (ಪುನಂತು ಮಾ ದೇವ ಜನಾಃ; ಗಚ್ಛತಿ ಪ್ರತಿಷ್ಠಾಮ್). ಇತರೆಡೆಗಳಲ್ಲಿ ಗೌಣವಾಕ್ಯವಾದರೆ, ಉದಾತ್ತ ಸ್ವರವನ್ನು ಹೊಂದಿರುತ್ತದೆ (ಯದಿ ಹಿರಣ್ಯಂ ನ ವಿಂದೇತ್; ಯದಾ ವೈ ಸೂರ್ಯ ಉದೇತಿ); ಪ್ರಧಾನ ವಾಕ್ಯವಾದರೆ ಸರ್ವಾನುದಾತ್ತವಾಗುತ್ತದೆ (ಇಂದ್ರಃ ಸೋಮಂ ಪಿಬತು; ಶ್ರದ್ಧಯಾ ಹೂಯತೇ ಹವಿಃ).

ಸಾಮಾನ್ಯವಾಗಿ, ವಾಕ್ಯವೆನಿಸಿಕೊಳ್ಳುವ ಪದಸಮೂಹವೊಂದೇ ಏಕಾರ್ಥವನ್ನು ಕೊಡಬಲ್ಲದಾದರೂ, ಅಂತಹ ವಾಕ್ಯವೊಂದರಿಂದಲೇ ಪೂರ್ಣಾರ್ಥ ತಿಳಿಯದೇ ಹೋಗಬಹುದು. ಆ ವಾಕ್ಯೋಚ್ಚಾರಣೆಗೆ ಕಾರಣವಾದ ಹಿಂದಿನ ವಾಕ್ಯವೊಂದಿರುತ್ತದೆ. ಅವೆರಡು ವಾಕ್ಯಗಳನ್ನೂ ಸೇರಿಸಿಕೊಂಡು ಅರ್ಥೈಸಬೇಕಾಗುತ್ತದೆ. ಹೀಗೆ ಪರಸ್ಪರ ಸಂಬಂಧ ಹೊಂದಿರುವ ೨-೩ ವಾಕ್ಯಗಳ ಜೋಡಣೆಯನ್ನು 'ಸಂವಾದ' ಎನ್ನುತ್ತಾರೆ. ವಾಕ್ಯವೊಂದರಲ್ಲಿನ ಸ್ವರ ವಿಧಾನಕ್ಕೆ ಅಪವಾದ ರೂಪವು ಸಂವಾದದಲ್ಲಿ ಕಂಡು ಬರುತ್ತದೆ. ಈ ರೀತಿಯ ಸಂವಾದಗಳು ಹೆಚ್ಚಾಗಿ ಅಷ್ಟಾಧ್ಯಾಯಿಯ 'ತ್ರಿಪಾದಿ' ವಿಭಾಗದಲ್ಲಿ ಕಂಡು ಬರುತ್ತವೆ. ಕೆಲವು ಉದಾಹರಣೆಗಳಿಂದ ಸಂವಾದವೇನೆಂಬುದರ ತಿಳಿವಳಿಕೆ ನೀಡುವುದೇ ಈ ಲೇಖನದ ಉದ್ದೇಶ.

೧. ಪ್ರತ್ಯಭಿವಾದೇ ಅಶೂದ್ರೇ ೮.೨.೮೩.

ವಯಸ್ಸಿನ ಅಂತರವಿರುವ ಈರ್ವರ ನಡುವಣ ಸಂವಾದದಲ್ಲಿ ನಮಸ್ಕರಿಸಲ್ಪಟ್ಟ ಹಿರಿಯವನು ನಮಸ್ಕರಿಸಿದವನನ್ನು ಕುರಿತು ಆಶೀರ್ವಚನಕ್ಕಾಗಿ ಉಪಯೋಗಿಸುವ ವಾಕ್ಯವೇ 'ಪ್ರತ್ಯಭಿವಾದ'ವೆನಿಸುತ್ತದೆ. ಅಭಿವಾದಯೇ ದೇವದತ್ತೋऽ ಹಂ-ಎಂದುಚ್ಚರಿಸಿ ನಮಸ್ಕರಿಸಿದ ದೇವದತ್ತನನ್ನು ಆಶೀರ್ವದಿಸುತ್ತಾ ನಮಸ್ಕರಿಸಲ್ಪಟ್ಟವನು, ಭೋ ಆಯುಷ್ಮಾನೇಧಿ ದೇವದತ್ತ - ಎಂದು ಹೇಳುತ್ತಾನೆ. ಈ ವಾಕ್ಯಯುಗ್ಮದ ಸಂವಾದದಲ್ಲಿ ಪ್ರತ್ಯಭಿವಾದ ವಾಕ್ಯದ ಅಂತ್ಯಸ್ವರವು ಪ್ಲುತವಾಗಿಯೂ, ಉದಾತ್ತ ಸ್ವರದಿಂದ ಕೂಡಿಯೂ ಇರುತ್ತದೆ. ಆದರೆ, ಇತರ ಸಂದರ್ಭಗಳಲ್ಲಿ ಸಂಬೋಧನಾ ಪದದ ಆದ್ಯಕ್ಷರ ಉದಾತ್ತ ಸ್ವರದಿಂದ ಕೂಡಿರುತ್ತದೆ (ಆಮಂತ್ರಿತಸ್ಯಚ ೬.೧.೧೯೮).

ನಮಸ್ಕರಿಸಿದ ವ್ಯಕ್ತಿ ಶೂದ್ರ ಅಥವಾ ಸ್ತ್ರೀ ಆಗಿದ್ದರೆ (ಸ್ತ್ರೀಯಾ ಮಪಿ ಪ್ರತಿಷೇಧೋ ವಕ್ತವ್ಯಃ) ಆಶೀರ್ವಚನ ವಾಕ್ಯದ ಅಂತ್ಯ ಸ್ವರ ಪ್ಲುತವಾಗಿರುವುದಿಲ್ಲ. ಹಾಗೂ ಉದಾತ್ತ ಸ್ವರಸಹಿತವಾಗಿರುವುದಿಲ್ಲ. (ಉದಾ. ಅಭಿವಾದಯೇ ಗಾರ್ಗ್ಯಹಮ್ - ಭೋ ಆಯುಷ್ಮತೀ ಭವಗಾರ್ಗಿ), ಅಭಿವಾದನ ವಾಕ್ಯದಲ್ಲಿನ ಹೆಸರು ಹಾಗೂ ಗೋತ್ರ ಶಬ್ದವನ್ನು ಪ್ರತ್ಯಭಿವಾದ ವಾಕ್ಯಾಂತ್ಯದಲ್ಲಿ ಉಪಯೋಗಿಸಿದಾಗ ಮಾತ್ರ ಪ್ಲುತ ವಿಧಾನವುಂಟು. ದೇವದತ್ತ ಆಯುಷ್ಮಾನೇಧಿ - ಎನ್ನುವಲ್ಲಿ ದೇವದತ್ತ ಶಬ್ದದ ಅಂತ್ಯಸ್ವರಕ್ಕೆ ಪ್ಲುತ ವಿಧಾನವಿಲ್ಲ. ಅಭಿವಾದನ ಮಾಡಿದವನು ಅಸೂಯಕನಾದಾಗ ಅವನನ್ನು ಕುರಿತು ಪ್ರತ್ಯಭಿವಾದ ವಾಕ್ಯವೇ ಇಲ್ಲ. ಅಂದರೆ, ಅಂತಹವನಿಗೆ ಆಶೀರ್ವಚನವಿಲ್ಲ.

೨. ಭಗವನ್, ಗಾಂ ಮೇ ಏಕಾಂ ದೇಹಿ.

'ಭಗವನ್, ನನಗೊಂದು ಹಸುವನ್ನು ಕೊಡಿ' ಎಂಬ ಪ್ರಾರ್ಥನಾ ವಾಕ್ಯಕ್ಕೆ, ಗಾಂ ತೇ ದಾಸ್ಯಾಮಿತಿ 'ಆಗಲಿ, ನಿನಗೊಂದು ಹಸುವನ್ನು ಕೊಡುವೆನು' ಎನ್ನುವುದು ಸಮ್ಮತಿ ಸೂಚಕವಾಕ್ಯ. ಪ್ರತಿ ಶ್ರವಣೇಚ (೮.೨.೯೯) ಎಂಬ ಸೂತ್ರದ ಪ್ರಕಾರ ಸಮ್ಮತಿ ವಾಕ್ಯದ ಅಂತ್ಯಾಕ್ಷರವು ಉದಾತ್ತ ಸ್ವರದಿಂದ ಕೂಡಿರುತ್ತದೆ ಹಾಗೂ ಪ್ಲುತವಾಗಿರುತ್ತದೆ. ಇತರ ಪ್ರಸಂಗಗಳಲ್ಲಿ ದಾಪ್ಯಾಮಿ ಎಂಬ ಕ್ರಿಯಾಪದವು ತಿಜ ಅತಿಜ್ಃ (೮.೧.೨೮) ಎಂಬ ಸೂತ್ರದಂತೆ ಉದಾತ್ತ ಸ್ವರವನ್ನು ಕಳೆದುಕೊಳ್ಳುತ್ತದೆ. (ದಾಸ್ಯಾಮಿ ಎನ್ನುವಲ್ಲಿ ಆಗ ಉದಾತ್ತಸ್ವರ ಎರಡನೆಯ ಅಕ್ಷರದೊಡನೆ ಕೂಡಿರುತ್ತದೆ).

೩. ಬ್ರಾಹ್ಮಣಃ ರಾಜಾನಂ ಧನಂ ಅಯಾಚತ.

'ಬ್ರಾಹ್ಮಣನು ರಾಜನನ್ನು ಹಣವನ್ನು ಬೇಡಿದನು' – ಎಂಬ ವಾಕ್ಯಕ್ಕೆ ಸಃ ತಸ್ಮೈ ಪ್ರತ್ಯ ಶೃಣೋತ್.

'ಅವನು ಬ್ರಾಹ್ಮಣನಿಗೆ (ಕೊಡುವೆನೆಂದು) ವಾಗ್ದಾನ ಮಾಡಿದನು' ಎನ್ನುವುದು ಸಮ್ಮತಿವಾಕ್ಯ. ಈ ಸಂವಾದದಲ್ಲಿ ಮೊದಲ ವಾಕ್ಯದಲ್ಲಿನ ಕರ್ತೃಪದ ಹಾಗೂ ಎರಡನೆಯ ವಾಕ್ಯದಲ್ಲಿನ ಪ್ರತಿ–ಶ್ರು 'ವಾಗ್ದಾನ ಮಾಡು' ಎಂಬ ಕ್ರಿಯಾಪದಗಳ ನಡುವೆ ಸಂಪ್ರದಾನ ಸಂಬಂಧವಿರುತ್ತದೆ. ಇದಕ್ಕೆ ಪ್ರತ್ಯಾಜ್‌ಭ್ಯಾಂ ಶ್ರುತಃ ಪೂರ್ವಸ್ಯಕರ್ತಾ (೧.೪.೪೦) 'ಪ್ರತಿ, ಆಜ್ ಉಪಸರ್ಗಪೂರ್ವದಲ್ಲಿರುವ ಶೃಣೋತಿ ಎಂಬ ಕ್ರಿಯೆಯು ಸಂಪ್ರದಾನಕಾರಕವನ್ನಪೇಕ್ಷಿಸುತ್ತದೆ' ಎಂಬ ಸೂತ್ರ ಆಧಾರ. 'ಸಂಪ್ರದಾನ' ಎಂಬ ಪದ ಅನುವೃತ್ತಿಯಿಂದ ೧.೪.೩೨ನೆಯ ಸೂತ್ರದಿಂದ ದೊರಕುತ್ತದೆ. ಅದು ಮೊದಲ ವಾಕ್ಯದಲ್ಲಿನ ಕರ್ತೃಪದದಿಂದ ಪೂರೈಸಲ್ಪಡುತ್ತದೆ. ಎರಡನೆಯ ವಾಕ್ಯದಲ್ಲಿ ಉಪಯೋಗವಾಗಿರುವ ತಸ್ಮೈ ಎಂಬ ಸರ್ವನಾಮಪದ ಬ್ರಾಹ್ಮಣಃ ಎನ್ನುವ ಪದದ ಸ್ಥಾನದಲ್ಲಿ ಉಪಯೋಗವಾಗಿದೆ.

೪. ಹೋತಾ ಮಂತ್ರಾನ್ ಗೃಣಾತಿ
'ಹೋತೃವು ಮಂತ್ರಗಳನ್ನು ಪಠಿಸುತ್ತಾನೆ'
ಅನ್ಯೇ ತಸ್ಮೈ ಅನುಗೃಣಂತಿ
'ಇತರರು ಅವನನ್ನೇ ಪ್ರೋತ್ಸಾಹಿಸುತ್ತಾರೆ'

ಈ ಸಂವಾದದಲ್ಲಿ, ಅನುಪ್ರತಿಗೃಣಶ್ಚ (೧.೪.೪೧) ಎಂಬ ಸೂತ್ರದ ಪ್ರಕಾರ, ತಸ್ಮೈ (=ಹೋತ್ರೇ) ಮತ್ತು ಅನು–ಗೃ 'ಪ್ರೋತ್ಸಾಹಿಸು' – ಇವೆರಡರ ನಡುವೆ ಸಂಪ್ರದಾನ ಸಂಬಂಧವಿದೆ. ಈ ಎರಡು ಸಂದರ್ಭಗಳಲ್ಲೂ ಪ್ರಸ್ತುತ ಧಾತುಗಳೊಡನೆ, ಉಪಸರ್ಗ ಸೇರಿರುವುದೇ ಸಂಪ್ರದಾನ ಕಾರಕದ ಅವಶ್ಯಕತೆಗೆ ಕಾರಣ. ಹಾಗಿಲ್ಲದಿದ್ದರೆ, ಸಂಪ್ರದಾನದ ಬದಲು ಕರ್ಮಕಾರಕದ ಉಪಯೋಗವಾಗುತ್ತಿತ್ತು.

೫. ಭುಂಕ್ಷ್ವ 'ಭೋಜನಮಾಡು'

ನ ಅಹಂ ಭೋಕ್ಷ್ಯೇ 'ನಾನು (ಖಂಡಿತಾ) ಊಟ ಮಾಡುವುದಿಲ್ಲ'
ನ ಹ ಭೋಕ್ಷ್ಯಸೇ 'ಊಟ ಮಾಡುವುದಿಲ್ಲವೇ, (ನೋಡೋಣ)'

ಈ ಸಂವಾದದ ಕಡೆಯ ವಾಕ್ಯದಲ್ಲಿ ನ ಹ ಎಂಬ ನಿಪಾತದೊಡನೆ ಕೂಡಿರುವ ಕ್ರಿಯಾಪದವು, ನ ಹ ಪ್ರತ್ಯಾರಂಭೇ (೮.೧.೩೧) ಎಂಬ ಸೂತ್ರದ ಪ್ರಕಾರ ತನ್ನ ಉದಾತ್ತ ಸ್ವರವನ್ನು ಉಳಿಸಿಕೊಳ್ಳುತ್ತದೆ. ಇಲ್ಲದಿದ್ದರೆ, ತಿಙ್ ಅತಿಙಃ (೮.೧.೨೮) ಎಂಬ ಸೂತ್ರದ ಪ್ರಕಾರ ಸರ್ವಾನುದಾತ್ತವಾಗಬೇಕಿತ್ತು. ಭೋಜನವನ್ನು ಕರ್ತವ್ಯಬುದ್ಧಿಯಿಂದ ಪ್ರೇರಿಸಿದಾಗ ಅದನ್ನು ತಿರಸ್ಕರಿಸಿದವನನ್ನು ವಿರೋಧಿಸುತ್ತಾ ಪುನಃ ಬಲಾತ್ಕರಿಸುವಂತೆ ಹೇಳುವುದೇ 'ಪ್ರತ್ಯಾರಂಭ'ವೆನಿಸುತ್ತದೆ.

೬. ಅಕಾರ್ಷೀಃ ಕಟಂ ದೇವದತ್ತ
'ದೇವದತ್ತ, ಚಾಪೆಯನ್ನು ಮಾಡಿದೆಯಾ?'
ನನು ಕರೋಮಿ ಭೋಃ
'ಖಂಡಿತಾ ಮಾಡಿದೆನು ಸ್ವಾಮಿ'

ಕೆಲಸ ಮುಗಿದ ನಂತರ ಅದರ ಬಗ್ಗೆ ಕೇಳಿದ ಪ್ರಶ್ನೆಗೆ ಉತ್ತರವಾಗಿ ಹೇಳಿದ ವಾಕ್ಯದಲ್ಲಿನ ನನು ಎಂಬ ಉಪಪದದೊಡನೆ ಕೂಡಿದ ಕರೋಮಿ ಎಂಬ ವರ್ತಮಾನ ಕ್ರಿಯಾರೂಪವು, ನನು ಪೃಷ್ಟ ಪ್ರತಿವಚನೇ (೩.೨.೧೨೦) ಎಂಬ ಸೂತ್ರದ ಪ್ರಕಾರ ಭೂತಕಾಲವನ್ನು ಸೂಚಿಸುತ್ತದೆ. ಹಾಗಿಲ್ಲದಿದ್ದರೆ, ಲಟ್ ಪ್ರತ್ಯಯವು ವರ್ತಮಾನೇ ಲಟ್ (೮.೧.೧೨೩) ಎಂಬ ಸೂತ್ರದಂತೆ ವರ್ತಮಾನ ಕಾಲವನ್ನು ಸೂಚಿಸುತ್ತಿತ್ತು. ಉತ್ತರ ವಾಕ್ಯದ ಕಡೆಯಲ್ಲಿ ಹಿ ಎಂಬ ನಿಪಾತವನ್ನು ಉಪಯೋಗಿಸಿದರೆ, ಕರೋಮಿ ಎನ್ನುವ ಬದಲು ಅಕರವಮ್ ಎಂಬ ಕ್ರಿಯಾ ರೂಪದ ಪ್ರಯೋಗವಾಗುತ್ತಿತ್ತು. ಹಿ ಎನ್ನುವುದರ ಸ್ವರಕ್ಕೆ ಐಚ್ಛಿಕವಾಗಿ ಪ್ಲುತ ವಿಧಾನ, ವಿಭಾಷಾ ಪೃಷ್ಟ ಪ್ರತಿವಚನೇ ಹೇಃ (೮.೨.೯೩) ಎಂಬ ಸೂತ್ರದ ಪ್ರಕಾರ ಸಾಧ್ಯವಿದೆ. (ಅಕಾರ್ಷೀಃ ದೇವದತ್ತ; ಅಕಾರ್ಷಂ ಹಿ).

೭. ಸತ್ಯಂ ಭೋಕ್ಷ್ಯಸೇ
'ನಿಜವಾಗಿಯೂ ಊಟಮಾಡುವೆಯಾ?'
ಓಂ ಭೋಕ್ಷ್ಯೇ ಅಹಂ
'ಹೌದು, ನಿಜಕ್ಕೂ ಊಟ ಮಾಡುವೆನು'

ಈ ಪ್ರಶ್ನೆ–ಉತ್ತರ ಸಂವಾದದಲ್ಲಿ ಸತ್ಯಂ ಎನ್ನವುದರೊಡನೆ ಉಪಯೋಗವಾಗಿರುವ ಕ್ರಿಯರೂಪವು, ಸತ್ಯಂ ಪ್ರಶ್ನೆ (೮.೧.೩೨) ಎಂಬ ಸೂತ್ರದ ಪ್ರಕಾರ ತನ್ನ ಉದಾತ್ತ ಸ್ವರವನ್ನು ಉಳಿಸಿಕೊಂಡಿರುತ್ತದೆ. ಇಲ್ಲದಿದ್ದರೆ ಸೂತ್ರ ೮.೧.೨೮ರಂತೆ ಸರ್ವಾನುದಾತ್ತವಾಗುತ್ತಿತ್ತು.

ಸತ್ಯಂ ವಕ್ಷ್ಯಾಮಿ 'ಸತ್ಯವನ್ನು ಹೇಳುತ್ತೇನೆ' ಎಂಬ ವಾಕ್ಯದಲ್ಲಿ ಕ್ರಿಯಾಪದವು ಅನುದಾತ್ತವಾಗಿರುತ್ತದೆ. ಇಷ್ಟವಾಗದ ರೀತಿಯಲ್ಲಿ ಪ್ರಶ್ನೆ ಕೇಳಿದಾಗ, ಉತ್ತರ ಹೇಳುವವನು ತಿರಸ್ಕಾರ ಹಾಗೂ ಬೇಸರವನ್ನು ಸೂಚಿಸಬಹುದು.

೮. ಕಥಂ ಖಾದಸಿ 'ಹೇಗೆ ಊಟ ಮಾಡುತ್ತಿರುವೆಯೋ?'
ಯಥಾಕಾರಂ ಖಾದಾಮಿ ತಥಾಕಾರಮ್
'ನನಗಿಷ್ಟ ಬಂದಂತೆ ಊಟಮಾಡುತ್ತೇನೆ'

ಈ ಸಂವಾದದ ಪ್ರಶ್ನೆಯ ವಾಕ್ಯವು 'ಇದು ಊಟ ಮಾಡುವ ರೀತಿಯಲ್ಲ' ಎನ್ನವುದನ್ನು ಸೂಚಿಸುತ್ತದೆ. ಉತ್ತರ ವಾಕ್ಯವು ಪ್ರಶ್ನಿಸಿದವನನ್ನು, 'ಇದನ್ನು ಕಟ್ಟಿಕೊಂಡು ನಿನಗೇನು, ಇದು ನಿನಗೆ ಸಂಬಂಧಿಸಿಲ್ಲ' ಎಂದು ಸೂಚಿಸುತ್ತದೆ. ಯಥಾಕಾರಮ್, ತಥಾಕಾರಮ್ ಎನ್ನುವ ಸಮಾಸ ಪದಗಳು, ಯಥಾತಥಯೋ ರಸೂಯಾ ಪ್ರತಿವಚನೇ (೩.೪.೨೮) ಎಂಬ ಸೂತ್ರದ ಪ್ರಕಾರ ಉತ್ತರ ಕೊಟ್ಟವನ ಕೋಪ, ಇಷ್ಟವಾಗದಿರುವಿಕೆ, ಇತ್ಯಾದಿಗಳನ್ನು ಸೂಚಿಸುತ್ತದೆ.

೯. ವೇದಮಂತ್ರಗಳನ್ನು ಪ್ರಾರಂಭಿಸುವ ಮೊದಲು ಉಚ್ಚರಿಸಲ್ಪಡುವ ಓಂ-ಕಾರದ ಸ್ವರಕ್ಕೆ, ಓಂ ಅಭ್ಯಾದಾನೇ (೮.೨.೮೭) ಎಂಬ ಸೂತ್ರದ ಪ್ರಕಾರ ಪ್ಲುತ ಬರುತ್ತದೆ. ಉದಾ: ಓ೩ಮ್ ಅಗ್ನಿಮಿಳೇ ಪುರೋಹಿತಮ್.

ಯಾವುದೊಂದು ಯಾಗದಲ್ಲಿ ಉಪಯೋಗವಾಗುವ ಮಂತ್ರದ ಅಂತ್ಯಾಕ್ಷರದ ಸ್ಥಾನದಲ್ಲಿ ಪ್ಲುತದಿಂದ ಕೂಡಿದ ಓಂಕಾರವು ಆದೇಶವಾಗಿ ಬರುತ್ತದೆ. ಉದಾ: ಅಪಾಂ ರೇತಾಂಸಿ ಜಿನ್ವತೋ೩ಮ್ (ಜಿನ್ವತಿ ಓಂ-ಪ್ರಣವಃ ಟೇಃ ೮.೨.೮೯).

ಯಾಜ್ಯಾಂತಃ (೮.೨.೯೦) ಎಂಬ ಸೂತ್ರದ ಪ್ರಕಾರ, ಯಾಜ್ಯಾ ಸೂಕ್ತಗಳ ಅಂತ್ಯಾಕ್ಷರವು ಪ್ಲುತವಾಗುತ್ತದೆ ಹಾಗೂ ಉದಾತ್ತ ಸ್ವರದಿಂದ ಕೂಡಿರುತ್ತದೆ. ಉದಾ: ಸ್ತೋಮೈಃ ವಿಧೇಮಾಗ್ನಯಾ೩ಇ-ಪ್ಲುತವಿಧಾನವಾದಾಗ, ಏಚೋ೩ ಪ್ರಗೃಹ್ಯಸ್ಯಾದೂರಾ ದ್ಧೂತೇ ಪೂರ್ವಸ್ಯಾರ್ಧಸ್ಯಾದುತ್ತರಸ್ಯೇದುತೌ (೮.೨.೧೦೭) ಎಂಬ ಸೂತ್ರದ ಪ್ರಕಾರ ಅಗ್ನಯೇ ಎನ್ನುವ ಪದದ ಏ-ಕಾರದ ಸ್ಥಾನದಲ್ಲಿ ಆ ಇ ಎಂಬ ವೃದ್ಧ್ಯಕ್ಷರವು ವಿಧಿಸಲ್ಪಡುತ್ತದೆ.

ಮೇಲಿನ ಕೆಲವು ಪ್ರಸಂಗಗಳ ಉಲ್ಲೇಖ ಮತ್ತು ವಿಶ್ಲೇಷಣೆಯಿಂದ ಸಂಸ್ಕೃತ ಭಾಷೆಯಲ್ಲಿ ಸಂವಾದದ ಸ್ವರೂಪ, ಅದರ ವಿಶೇಷತೆಗಳ ಬಗ್ಗೆ ತಿಳಿವಳಿಕೆಯನ್ನು ನೀಡಲು ಮಾಡಿರುವ ನನ್ನ ಪ್ರಯತ್ನ ಫಲಕಾರಿ ಎಂದು ಭಾವಿಸುತ್ತೇನೆ. ಅಲ್ಲದೆ, ವೇದದ ಸಂಸ್ಕೃತದಲ್ಲಿ ಉದಾತ್ತಾದಿ ಸ್ವರಗಳಿಗೆ ಎಷ್ಟು ಪ್ರಾಧಾನ್ಯವಿತ್ತೆಂದೂ, ಅರ್ಥಕಲ್ಪನೆಗೆ ಅದು ಎಷ್ಟು ಮುಖ್ಯವೆಂದೂ ತಿಳಿಯಬರುತ್ತದೆ. ಇದರಿಂದಾಗಿ, ವೇದಾಂಗ ವ್ಯಾಕರಣವೆಂದರೆ ಪಾಣಿನಿಯ ಶಬ್ದಾನುಶಾಸನವೆಂದು ಗಣಿಸಿರುವುದು ಸರಿಯೆನಿಸುತ್ತದೆ. ವೇದದ ಸಂಸ್ಕೃತ ಮತ್ತು ನಂತರದ ಸಂಸ್ಕೃತದ ನಡುವೆ ಸಾಕಷ್ಟು ವ್ಯತ್ಯಾಸವಿರುವ ಬಗ್ಗೆ ಕೂಡ ಸ್ವಲ್ಪ ಬೆಳಕು ಚೆಲ್ಲಲಾಗಿದೆ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೮. ತತ್ತ್ವಪದಕಾರರು ಮತ್ತು ಮತೀಯ ಸಹಿಷ್ಣುತೆ

**ಪ್ರೊ. ಜಿ. ಅಬ್ದುಲ್ ಬಷೀರ್ ***

೧೮-೧೯ನೆಯ ಶತಮಾನಗಳಲ್ಲಿ ಕರ್ನಾಟಕದಲ್ಲಿ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರ ಕಾಣಿಸಿಕೊಂಡಿತು. ಅದನ್ನು 'ತತ್ತ್ವ ಸಾಹಿತ್ಯ', ಅನುಭಾವ ಸಾಹಿತ್ಯ', 'ಕೈವಲ್ಯ ಸಾಹಿತ್ಯ', 'ಭಕ್ತಿ ಸಾಹಿತ್ಯ', 'ಪಾರಮಾರ್ಥಿಕ ಸಾಹಿತ್ಯ', 'ಆಧ್ಯಾತ್ಮಿಕ ಸಾಹಿತ್ಯ', 'ಸ್ವರ ವಚನ ಸಾಹಿತ್ಯ'[೧] ಎಂಬಿವೇ ಮುಂತಾದ ಹೆಸರುಗಳಿಂದ ಗುರುತಿಸಿದ್ದಾರೆ. 'ಕೈವಲ್ಯ' ಎಂಬ ಶಬ್ದಕ್ಕೆ 'ಪರಿಪೂರ್ಣ' 'ಪರಿಶುದ್ಧ', 'ಅಖಂಡ' ಎಂಬ ಅರ್ಥಗಳಿವೆ. ಈ ದೃಷ್ಟಿಯಿಂದ ಶೈವಮೂಲದ ತತ್ತ್ವಪದಕಾರರು ಅನುಭಾವಿಗಳು; 'ಅನುಭಾವ, ಪರಮಾತ್ಮ ಸಾಕ್ಷಾತ್ಕಾರ ತತ್ತ್ವ'; ಪ್ರಾಪಂಚಿಕವಾದ ಸರ್ವವೂ ನಶ್ವರವೆಂಬ ತಿಳಿವಳಿಕೆ ತತ್ತ್ವಪದಕಾರರದು. ಜನಪದ ಸಾಹಿತ್ಯದಂತೆ ಜನತೆಯ ನಾಲಿಗೆಯ ಮೇಲೆ ನಲಿಯುತ್ತಿರುವ ಈ ಸಾಹಿತ್ಯ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಪ್ರಚಾರದಲ್ಲಿದೆ; ಅದಕ್ಕೆ ಸ್ಪಷ್ಟವಾದ ಕಾರಣಗಳೂ ಇವೆ. ವಚನ ಸಾಹಿತ್ಯ ಹಾಗೂ ಹರಿದಾಸ ಸಾಹಿತ್ಯದ ಹಲವಾರು ಅಂಶಗಳು ತತ್ತ್ವಪದಗಳಲ್ಲಿದ್ದರೂ ಸತ್ವ-ಸೃಷ್ಟಿ-ದೃಷ್ಟಿಗಳಲ್ಲಿ ಅವೆರಡೂ ಸಾಹಿತ್ಯ ಪ್ರಕಾರಗಳಿಗಿಂತ ಅವು ಭಿನ್ನವಾಗಿವೆ. ಹಾಗೂ ವೈಶಿಷ್ಟ್ಯ ಪೂರ್ಣವಾಗಿವೆ. ಪ್ರಪಂಚದಲ್ಲಿ ಇದನ್ನು ಹೋಲುವ ಸಾಹಿತ್ಯ ಅಪರೂಪ. 'ಭಕ್ತಿಯ ಹಂಬಲ, ಆತ್ಮನ ಎಚ್ಚರ, ಮುಕ್ತಿಯ ಬಯಕೆ, ಸಾಮಾಜಿಕ ಅನ್ಯಾಯ, ಅಜ್ಞಾನ, ಜಾತೀಯತೆ, ಡಂಭಾಚಾರಗಳ ಬಗ್ಗೆ ಪ್ರತಿಭಟನೆ, ನಿರಂತರ ಜಾಗೃತಿ, ಏಕೈಕ ನಿಷ್ಠೆ, ನೈತಿಕ ಜೀವನದ ತಳಹದಿ ಮುಂತಾದವನ್ನು ವೀರಶೈವದ ಹಿನ್ನೆಲೆಯಲ್ಲಿಯೇ ಸರಳವಾಗಿ ಹಾಡುಗಳ ಮುಖಾಂತರ ತತ್ತ್ವಪದಕಾರರು ಬೋಧಿಸಿದ್ದಾರೆ. ಭಾಷೆ-ಗೇಯತೆಯ ಸಂಗಮವಾದ 'ಸ್ವರ ವಚನ' (ತ್ರಿಪದಿ, ಚೌಪದಿ, ಷಟ್ಪದಿ, ಅಷ್ಟಪದಿ ಮುಂತಾದ ಛಂದಸ್ಸುಗಳಲ್ಲಿ ಹಾಡುಗಳು ರಚನೆಯಾಗಿವೆ) ಪ್ರಕಾರ ವಚನ ಸಾಹಿತ್ಯದ ಕೊಡುಗೆ. ಘನಮಠದ ಶಿವಯೋಗಿಗಳು –

* ನಿವೃತ್ತ ಕನ್ನಡ ಪ್ರಾಧ್ಯಾಪಕರು, ನಂ. ೫.೮ನೇ ತಿರುವು, ೪ನೇ ಮುಖ್ಯರಸ್ತೆ, ಬೈರಸಂದ್ರ, ಜಯನಗರ ೧ ವಿಭಾಗ-ಪೂರ್ವ, ಬೆಂಗಳೂರು – ೫೬೦೦೧೧ ದೂ.ವಾ: ೦೮೦-೨೨೪೫೦೪೨೫, ಮೊ. ೯೦೦೮೭೬೩೩೩೬

"ಭಕ್ತಿಯಲ್ಲಿ ಮುಕ್ತಿಯದೊ
ಈ ಸೂಳೆಮಕ್ಕಳಿಗೆಲ್ಲ....."

ಎಂಬ ಪದದಲ್ಲಿ ನಾಗರಪಂಚಮಿಯಂದು ಹಾಲುಬಿದ್ದ ಹುತ್ತಗಳನ್ನು ಹುಡುಕಿ ಹಾಲನ್ನೆರೆದು ಕೈಗಳಿಗೆ ಅರಿಶಿನ ಬಣ್ಣದ ದಾರವನ್ನು ಕಟ್ಟುವರು. ಆದರೆ ಆ ಹುತ್ತದಿಂದ ಈಚೆ ಸರ್ಪ ಬಂದರೆ ಬಗೆ ಬಗೆಯ ಆಯುಧಗಳಿಂದ ಅದನ್ನು ಕೊಲ್ಲುವರು ಎಂದು ಡಾಂಭಿಕ ಭಕ್ತಿಯನ್ನು ಅಲ್ಲಗಳೆದಿದ್ದಾರೆ. "ಕಲ್ಲನಾಗರ ಕಂಡರೆ ಹಾಲನೆರೆಯೆಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ" ಎಂಬ ಬಸವಣ್ಣನವರ ವಚನವನ್ನಿಲ್ಲಿ ಸ್ಮರಿಸಿಕೊಳ್ಳಬಹುದು. ಕೂಡಲೂರು ಬಸವಲಿಂಗ ಶರಣರು ಜಡವಾದ ಪ್ರತಿಮಾ ಪೂಜೆಯನ್ನು ಜರಿದು "ಮಾತಾಡದ ದೇವರಿಗೆ ಬೆಲ್ಲದ ಪಾಯಸ ಎಡಿ ಮಾಡಿ ಅಡ್ಡಡ್ಡ ಬೀಳುವುದನ್ನು" ಖಂಡಿಸಿದ್ದಾರೆ. "ವ್ರತ ನೇಮಗಳ ಮಾಡಿ ಹತನಾಗಿ ಹೋಗುವೆ" ಎಂದು ಎಚ್ಚರಿಕೆಯ ಗಂಟೆಯನ್ನು ಬಾರಿಸಿದ್ದಾರೆ. ವೀರಶೈವರಿಗೆ ಸೂತಕ ಪಾತಕಗಳೆ ಇಲ್ಲ ಎಂದು ಮೈಲಾರ ಬಸವಲಿಂಗ ಶರಣರು ಘೋಷಿಸಿರುವುದನ್ನಿಲ್ಲಿ ಸ್ಮರಿಸಿಕೊಳ್ಳುವುದು ಸೂಕ್ತವಾಗಿದೆ. ಕಡಕೋಳದ ಮಡಿವಾಳೇಶ್ವರರು "ಅಲ್ಲಲ್ಲರಸುತ ಗುಡಿಗಳ ತಿರುಗುವ ಕಳ್ಳ ಜನರಿಗೆ ಕಲ್ಲಂತೆ ಶಿವ" ಎಂದು ಹೇಳಿ ಕೃತಕಾಚರಣೆಗಳನ್ನು ತಿರಸ್ಕರಿಸಿದ್ದಾರೆ.

ಮೇಲಿನ ವೈಚಾರಿಕ ಸಂಗತಿಗಳನ್ನೊಳಗೊಂಡ ಸ್ವರವಚನಗಳು ಅತ್ಯಂತ ಜನಪ್ರಿಯವಾಗಿದೆ. ಈ ಸ್ವರವಚನಗಳು ಆಧ್ಯಾತ್ಮವನ್ನೇ ಸ್ಥಾಯಿಯನ್ನಾಗಿಟ್ಟುಕೊಂಡಿದ್ದರೂ 'ಸಾಮಾಜಿಕ ಹಿತಚಿಂತನೆಯನ್ನೂ' ದೃಷ್ಟಿಯಲ್ಲಿಟ್ಟುಕೊಂಡಿರುವುದನ್ನು ಮರೆಯಲಾಗದು. 'ಸ್ವರ ವಚನಕಾರರು' ಸಾಹಿತ್ಯ ಸೃಷ್ಟಿಯನ್ನು ತಮ್ಮ ಉದ್ದೇಶವನ್ನಾಗಿ ಇರಿಸಿಕೊಂಡವರಲ್ಲ', ಅವರ ಗುರಿಯೇನಿದ್ದರೂ ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ಜನಹಿತಗಳಂಥ ಮೌಲ್ಯಗಳತ್ತ ಇತ್ತು. ಕವಿ ಹೃದಯವುಳ್ಳ ಅವರು ಈ ವಿಚಾರಗಳನ್ನು ಅಭಿವ್ಯಕ್ತಮಾಡುವಾಗ ಅವರ ರಚನೆಗಳಲ್ಲಿ ಬಹುಪಾಲು ಕೃತಿಗಳು ಕಾವ್ಯಾಂಶವನ್ನು ಪಡೆದವು. ವೈವಿಧ್ಯಪೂರ್ಣವಾದ ವಿಚಾರಗಳನ್ನೊಳಗೊಂಡ ಈ ಸ್ವರವಚನಗಳಲ್ಲಿ ಉಪಮೆ, ರೂಪಕ, ಪ್ರತಿಮೆ, ಸಂಕೇತ, ಧ್ವನಿಗಳಂಥ ಕಾವ್ಯ ಸೌಂದರ್ಯಕ್ಕೆ ಕಾರಣವಾದ ಅನೇಕಾಂಶಗಳನ್ನು ಕಾಣಬಹುದು. ಸಂಗೀತದ ವಾದ್ಯಗಳೊಡನೆ ಅಥವಾ ಸ್ವರ ಹಿಡಿದು ತನ್ನದೇ ಆದಂತಹ ವಿಶೇಷ ಧಾಟಿಯಲ್ಲಿ ಹಾಡಲು ಬರುವಂಥವು ಈ ಸ್ವರವಚನಗಳು. "ಸಾಮಾನ್ಯವಾಗಿ ಹಾಡುಗಳಲ್ಲಿ ಛಂದೋಬದ್ಧವಾದ ಪದ (ಚರಣ, ನುಡಿ, ವಚನ)ವಿದ್ದು, ಅದು ಉಳಿದ-ಪ್ರತಿಚರಣದ ಆದಿಯಲ್ಲಿ ಆವರ್ತದಿಂದ ಹಾಡಲಿಕ್ಕಾಗಿಯೇ ಇರುತ್ತದೆ. ಇಂಥ ಹಾಡನ್ನು ಸ್ವರಪದ, ಸ್ವರವಚನವೆಂದೂ ಕರೆಯಲಾಗುತ್ತದೆ." (ಸಿದ್ಧಗಂಗಾಶ್ರೀ : ಪುಟ : ೮೯೩: ಸಂ : ಪಂಡಿತ ಚೆನ್ನಪ್ಪ ಎರೇಸೀಮೆ). ಈ ಹಾಡುಗಳ ಪ್ರಾರಂಭದಲ್ಲಿ ಸಾಮಾನ್ಯವಾಗಿ ರಾಗ-ತಾಳಗಳ ಉಲ್ಲೇಖವಿರುತ್ತದೆ. ಇವು ಅಂಶಛಂದಸ್ಸು ಹಾಗೂ ಮಾತ್ರಾಛಂದಸ್ಸುಗಳಲ್ಲಿ ರಚನೆಯಾಗಿರುತ್ತವೆ. ಜನಪದ ಧಾಟಿ. ಹಾಡುಗಾರಿಕೆಯ ಸ್ಪರ್ಶವನ್ನವು ಪಡೆದಿರುತ್ತವೆ; ಆದಿಪ್ರಾಸ-ಅಂತ್ಯ-ಪ್ರಾಸಗಳ ಬಳಕೆಯಿರುತ್ತದೆ.

ನಮ್ಮ ದೇಶದಲ್ಲಿ ಜಾತಿ–ಮತ–ಧರ್ಮ– ಪಂಥ–ಪಂಗಡಗಳ ಹೆಸರಿನಲ್ಲಿ ಆಗಾಗ ಸಂಘರ್ಷಗಳು ನಡೆಯುತ್ತಲೇ ಇವೆ. ಪ್ರಾಚೀನ ಬೌದ್ಧ, ಜೈನ, ವೀರಶೈವ, ವೈಷ್ಣವ ಮತ ಧರ್ಮಗಳ ವಿಚಾರವಂತಿರಲಿ; ವಿದೇಶಿಯರು ಕಾರಣಾಂತರಗಳಿಂದ ನಮ್ಮ ದೇಶಕ್ಕೆ ಆಗಮಿಸಿದರು ; ಹೀಗಾಗಿ ಹಿಂದೂ–ಕ್ರೈಸ್ತ–ಮಹಮ್ಮದೀಯ ಮತಗಳ ನಡುವೆ ಸಂಘರ್ಷಗಳೇರ್ಪಟ್ಟು ವಾತಾವರಣ ಕಲುಷಿತಗೊಂಡಾಗ ತತ್ತ್ವಪದಕಾರರು ನಮ್ಮ ನಾಡಿನಲ್ಲಿ ಕಾಣಿಸಿಕೊಂಡದ್ದು ಅರ್ಥಪೂರ್ಣವಾಗಿದೆ ; ಸಮನ್ವಯ–ತ್ಯಾಗಗಳೆಂದರೇನೆಂಬುದನ್ನು ವರ್ಣಿಸುವುದಕ್ಕಿಂತ ತತ್ತ್ವಪದಕಾರರನ್ನು ಉದಾಹರಿಸಿಬಿಡುವುದು ಸಮಂಜಸ. ಇವರು ತಮ್ಮ ಅಂತರಂಗದ ಸೂಕ್ಷ್ಮ ಕಂಪನಗಳನ್ನು ಆರೋಗ್ಯಕರ ಪ್ರೇಮವನ್ನು, ಬ್ರಿಟಿಷರ ದಬ್ಬಾಳಿಕೆ ಮತ್ತು ಕ್ರೂರ ಯಂತ್ರ ನಾಗರೀಕತೆಯ ಸಂದರ್ಭದಲ್ಲಿ ಅಭಿವ್ಯಕ್ತಿದರು.... ಇವರ ರಚನೆಗಳಲ್ಲಿ ರಾಜಕೀಯ ಕೋಲಾಹಲ, ಅಸ್ಥಿರ ಆರ್ಥಿಕ ಬದುಕು, ಅರಿವಿಲ್ಲದ ಗುಲಾಮಗಿರಿಗೆ ತಾವು ಒಳಗಾದ ಬಗೆ... ಈ ಚಾರಣ ಕವಿಗಳು ಕನ್ನಡದಲ್ಲಿ ಪ್ರಾದೇಶಿಕ ಸಂಸ್ಕೃತಿಗಳ ಆವರಣವನ್ನು ಜಾಗೃತಗೊಳಿಸಿದರು... ಮಹತ್ವದ ಕೃತಿಗಳೆಲ್ಲವೂ ಜಾತ್ಯತೀತ– ಧರ್ಮಾತೀತ ರಚನೆಗಳಾಗಿವೆ. ಜಾತಿ–ಮತ–ಧರ್ಮಗಳ ವಲಯವನ್ನು ಮೀರಿ ಬೆಳೆದಿರುವ ತತ್ತ್ವಪದಗಳ ಜನಪ್ರಿಯತೆ ಮತ್ತು ಜನಾದರಣೀಯ ಸತ್ವಗಳು".[೨]

ಕನ್ನಡದಲ್ಲಿ ತತ್ತ್ವಪದಕಾರರು ೧೫ನೆಯ ಶತಮಾನದಲ್ಲಿಯೇ[೩] ಕಾಣಿಸಿಕೊಂಡರೂ ಅವರು ಉಚ್ಛ್ರಾಯ ಹಂತವನ್ನು ತಲುಪಿದ್ದು ೧೮–೧೯ನೆಯ ಶತಮಾನಗಳಲ್ಲಿಯೇ. ಆದ್ದರಿಂದ ಈ ಕಾಲವನ್ನು 'ತತ್ತ್ವಪದಗಳ ಯುಗ'ವೆಂದು ನಿರ್ದೇಶಿಸಬಹುದು ; ಕೆವರು ಹೇಳುವಂತೆ ಸಾಹಿತ್ಯದ ಈ ಕಾಲ ಬರಡೇನೂ ಅಲ್ಲ !

ನಿರ್ದಿಷ್ಟ ವರ್ಗ–ವರ್ಣ–ಜಾತಿ–ಮತ–ಪಂಥ–ಪಂಗಡಗಳಿಗೆ ಸೇರದೆ ಸರ್ವ ಮತ–ಧರ್ಮಗಳಲ್ಲಿ ನಿರೂಪಿತವಾಗಿರುವ ಬ್ರಹ್ಮತತ್ತ್ವದ ಸಾರವನ್ನು ಹೀರಿ ಭಕ್ತಿ ಮಾರ್ಗದಲ್ಲಿ ನಡೆದ ಪಾರಮಾರ್ಥಿಕರು ಕನ್ನಡದ ಕಬೀರ ಶಿಶುನಾಳಶರೀಫ಼ (ಕ್ರಿ.ಶ. ೧೮೧೯–೧೮೮೯ : ಮಹಮ್ಮದೀಯ) ; ಕಡಕೋಳದ ಮಡಿವಾಳೇಶ್ವರ (ಕ್ರಿ.ಶ. ೧೭೮೦–೧೮೫೫ : ಶಿವಶರಣ) ; ಕಹಿನೂರ ಕೃಷ್ಣಪ್ಪ (ಕ್ರಿ.ಶ.ಸು. ೧೮೨೦ : ಶೈವ ಬ್ರಾಹ್ಮಣ ; ಚೆನ್ನೂರ ಜಲಾಲ್‌ಸಾಬ್ (ಕ್ರಿ.ಶ.ಸು ; ೧೮೨೦ : ಮಹಮ್ಮದೀಯ); ಶಂಕರಾನಂದ ಶಿವಯೋಗಿ (ಕ್ರಿ.ಶ. ೧೮೩೩–೧೯೧೩ : ವೀರಶೈವ) ಹರಪನಹಳ್ಳಿ ವಿರೂಪನಗೌಡ (ಕ್ರಿ.ಶ.ಸು : ೧೮೦೦ : ಒಕ್ಕಲಿಗ); ಕೈವಾರ ನಾರಾಯಣಪ್ಪ (ನಾರೇಯಣ ಯತೀಂದ್ರ; ಕ್ರಿ.ಶ. ಸು. ೧೭೭೦–೧೮೮೦ : ಬಲಿಜ) ; ಕೂಡಲೂರೇಶ (ಕೂಡಲೂರು ಬಸವಲಿಂಗ ಶರಣ : ೧೮ನೆಯ ಶತಮಾನದ ಕೊನೆ : ವೀರಶೈವ); ಬಾಲಲೀಲಾ ಮಹಾಂತ ಶಿವಯೋಗಿ (ಕ್ರಿ.ಶ ೧೮೨೨–೧೮೫೬ : ವೀರಶೈವ) ಮುಂತಾದವರು.

ಮೇಲಿನ ಪಟ್ಟಿಗೆ ನಿಜಗುಣ ಶಿವಯೋಗಿ, ಗುರುಲಿಂಗ ಜಂಗಮ ಮಹಾರಾಜ, ಸಿದ್ಧೇಶ್ವರ, ಅನಂತಾದ್ರೀಶ, ಮುಪ್ಪಿನ ಷಡಕ್ಷರಿ, ಕಳಸದ ಗೋವಿಂದ ಭಟ್ಟರ[೪] ಹೆಸರುಗಳು

ಸೇರಿದರೆ ಅದು ಪರಿಪೂರ್ಣವಾಗುತ್ತದೆ. ಈ ಪಟ್ಟಿಗೆ ಕೆಲವು ವಚನಕಾರರೂ ಹರಿದಾಸರೂ ಸೇರುತ್ತಾರೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಇಲ್ಲಿ ಹೆಸರಿಸಿರುವ ತತ್ತ್ವಪದಕಾರರಲ್ಲಿ ಸರ್ವಮತೀಯರೂ ಇದ್ದಾರೆಂಬುದನ್ನು ಗಮನಿಸಬೇಕು : ಅಷ್ಟೇ ಅಲ್ಲ. ಕೆಲವು ಅನುಭಾವಿಗಳು ಅನ್ಯಮತೀಯರನ್ನು ತಮ್ಮ ಗುರುಗಳನ್ನಾಗಿ ಸ್ವೀಕರಿಸುವುದು ಬಹು ಮುಖ್ಯವಾದ ವಿಚಾರ. ಉದಾಹರಣೆಗೆ : ಶಿಶುನಾಳ ಶರೀಫ, ಮಡಿವಂತಿಕೆಯ, ಪುರೋಹಿತಷಾಹಿಯ ದೈತ್ಯದೇಹವನ್ನು ಒದ್ದೆದ್ದು ನಿಂತ ಬ್ರಾಹ್ಮಣ ಜಾತಿಯ ಗುರು ಗೋವಿಂದಭಟ್ಟರ ಶಿಷ್ಯರು. ಇಬ್ಬರ ಒಡನಾಟವನ್ನು ಸಮಕಾಲೀನ ಸಮಾಜ ಕಟು ನುಡುಗಳಿಂದ ಟೀಕಿಸಿ, ಅವರನ್ನು ಬಹಿಷ್ಕರಿಸಲೂ ಪ್ರಯತ್ನಿಸಿತು. ಯಾವ ಮತೀಯರೇ ಇರಲಿ, ಇವರೆಲ್ಲರೂ ದೈವಭಕ್ತರು ; ಅನುಭಾವಿಗಳು ; ಕವಿಗಳು ; ವಿಚಾರವಾದಿಗಳು ಹಾಗೂ ಸಮಾಜ ಸುಧಾರಕ ಮನೋಭಾವದವರು. ಹರಿ–ಹರ–ಹಜರತ್‌ಗಳ ದಾರಿಗಳೆಲ್ಲವೂ ಮನುಷ್ಯನನ್ನು ದೈವತ್ತ್ವದೆಡೆಗೆ ಕರೆದೊಯ್ಯುವ ಸಾಧನಗಳೆಂದು ನುಡಿದು. ಅದರಂತೆ ನಡೆದು, ಸತ್ಸಂಗ, ಸನ್ಮಾರ್ಗ, ಸದ್ಗುಣಭರಿತರಾದ ಇವರು ಕನ್ನಡದಲ್ಲಿ ಹಾಡಿದ್ದು ಅತಿಮುಖ್ಯವಾದ ಸಂಗತಿ. ಈ ತತ್ತ್ವಪದಕಾರರಲ್ಲಿ ಕೆಲವರು ಸಂಸ್ಕೃತದಲ್ಲಿಯೂ. ಕೆಲವರು ಉರ್ದು, ಮರಾಠಿ, ತೆಲುಗು ಭಾಷೆಗಳಲ್ಲಿಯೂ ತತ್ತ್ವಪದಗಳನ್ನು ಹಾಡಬಹುದಿತ್ತು: ಆದರೆ ಅವರು ಹಾಗೆ ಮಾಡದಿದ್ದುದು ಅವರ ಮತೀಯ ಸಹಿಷ್ಣುತೆಗೂ. ಕನ್ನಡಾಭಿಮಾನಕ್ಕೂ. ಜನಪ್ರೀತಿಗೂ. ಸಮಯ ಪ್ರಜ್ಞೆ–ಜನಜಾಗೃತಿ ದೃಷ್ಟಿಗೂ ಅತ್ಯಂತ ಸೊಗಸಾದ ನಿದರ್ಶನವಾಗಿದೆ[೫]. ಈ ತತ್ತ್ವಪದಕಾರರು ಬದುಕಿದ ಕಾಲಕ್ಕೂ ನಮ್ಮ ಕಾಲಕ್ಕೂ ಅವರ ಬೋಧನೆಗಳು ಪ್ರಸ್ತುತವೆನಿಸುತ್ತವೆ. ಇವರ ತತ್ತ್ವಪದಗಳು ಸರ್ವ ಸಂಸ್ಕೃತಿಗಳ ಐಕಮತ್ಯದ ಒಂದು ಬಿಂದುವನ್ನು ನಿರ್ಮಿಸಿವೆ ಎಂದರೆ ಅತಿಶಯೋಕ್ತಿಯೇನಲ್ಲ ! ಇಷ್ಟಾದರೂ ಇವರು ತಮ್ಮದೇ ಆದ ಪಂಥಗಳನ್ನು ನಿರ್ಮಿಸಲಿಲ್ಲ. ಜಾತಿಮತ ಪಂಥ, ಕಂದಾಚಾರ ಮುಂತಾದವುಗಳಲ್ಲಿ ಸತ್ವವಿಲ್ಲವೆಂದರಿತು ಇವರು ಬೋಧಿಸಿದ ತತ್ತ್ವಗಳು ಸರ್ವ ಮತದವರಿಗೂ ಸರ್ವಕಾಲಕ್ಕೂ ಸರ್ವದೇಶಗಳಿಗೂ ಗ್ರಾಹ್ಯವಾಗುವಂಥವು. ಹೀಗಾಗಿ ತತ್ತ್ವಪದಕಾರರು ಅಮರರಾಗಿದ್ದಾರೆ. ವರ್ಣಾಶ್ರಮಗಳನ್ನು ಮೀರಿ ಕೇವಲ ಆತ್ಮನಲ್ಲಿಯೇ ವಿಹರಿಸುವ ಈ ಯೋಗಿಗಳ ಹಾಡುಗಳಲ್ಲಿ ಮತ್ತೆ ಮತ್ತೆ ಬರುವ ಸಂಬೋಧನೆ 'ಮಾನವನನ್ನು ಕುರಿತದ್ದು'. ರೂಪದ ದೃಷ್ಟಿಯಿಂದ ಇವನ್ನು ಹಾಡುಗಳೆಂದೂ ವಸ್ತುವಿನ ದೃಷ್ಟಿಯಿಂದ ತತ್ತ್ವಪದಗಳೆಂದೂ ಗುರಿಯ ದೃಷ್ಟಿಯಿಂದ 'ಕೈವಲ್ಯ ಪದ'ಗಳೆಂದೂ ಈ ಸಾಹಿತ್ಯವನ್ನು ಗುರುತಿಸಲಾಗಿದೆ. ದೇಶೀ ಸೃಜನಶೀಲ ಶಕ್ತಿಯ ಉತ್ತಮ ಮಾದರಿಗಳು ತತ್ತ್ವಪದಗಳು ಎಂದರೆ ಅದು ಅತಿಶಯೋಕ್ತಿಯೇನೂ ಆಗಲಾರದು.

ಮಾತು ಮನಂಗಳಿಂದತ್ತತ್ತ ಮೀರಿದ ಶಿವ–ಜೀವರ ಅವಿನಾಸಂಬಂಧವನ್ನು ನಿರೂಪಿಸುವ ಅನುಭಾವಿಗಳ ಆಧ್ಯಾತ್ಮಿಕ ಗೀತೆಗಳಿವು. ಅನುಭಾವಿಯು ಬುದ್ಧಿ, ಭಾವ ಹಾಗೂ ಹೃದಯಗಳ ಸಂಪೂರ್ಣ ಸಾಮರಸ್ಯವನ್ನು ಸಾಧಿಸುತ್ತಾನೆ. "Hence intel-lectual power and absolute clarity of thought seem to be the first

critirion of mystical experience... On the other hand, we find that a true life of Mysticism teaches a full fledged morality in the individual, and a life of absolute good to the Society"[6] "Dark night of the Soul" ಅಂದರೆ 'ಸಾಧಕನ ಜೀವನದ ಕಾಳರಾತ್ರಿ'ಗಳ ಬಿಡುಗಡೆಯ ಅನುಭವವೇ ಅನುಭಾವ; ದೈವ ಸಾಕ್ಷಾತ್ಕಾರ. ವೈಯಕ್ತಿಕ ಬಂಧನಗಳು ಅಳಿದು ಹೋದಾಗ ಸಂತರು ಇಡೀ ಸೃಷ್ಟಿಯೊಡನೆ ಏಕತೆಯನ್ನು ಪಡೆಯುವರು. ಅವರು ವಿಶ್ವ ಜೀವನದಲ್ಲಿ ನೆಲೆಸಿ, ಮಾನವ, ಪ್ರಕೃತಿ ಹಾಗೂ ಪರಮಾತ್ಮನೊಡನೆ ತಾದಾತ್ಮ್ಯವನ್ನನುಭವಿಸುವರು, ಸಂಲಗ್ನವಾಗುವರು. ವಿಶ್ವದ ಮೂಲೆ ಮೂಲೆಗಳಲ್ಲಿ ಸಂದಿಗೊಂದಿಗಳಲ್ಲಿ ಅಂತೂ ಇರವಿನ ವಿಶ್ವ ವಿಷಯಕ, ಮನೋವಿಷಯಕ, ಜ್ಞಾನವಿಷಯಕ ಹಾಗೂ ಅನುಭಾವ ವಿಷಯಕ ಎಂಬೆಲ್ಲ ರೂಪಗಳಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಸಂತರು ಆಶ್ಚರ್ಯಯುಕ್ತವಾದ ಆನಂದಾತಿರೇಕದಲ್ಲಿ ಮುಳುಗಿಬಿಡುವರು[೭]. ಇದೇ ಅತೀಂದ್ರಿಯಾನುಭವ. "ಸತ್ತವನು, ಅತ್ತವನು, ಆತನನ್ನು ಹೆಗಲ ಮೇಲೆ ಹೊತ್ತವನು ಇವರೆಲ್ಲ ಒಂದೇ ಇರುವರು. ಅರಿತವನು, ಮರೆತವನು, ಹಾಗೂ ಅವರಲ್ಲಿ ಬೆರೆತವನು ಇವರೆಲ್ಲ ಒಂದೇ ಇರುವರು."[೮] "ಕಾಲಿಲ್ಲದೆ ನಡೆವನು, ಕೈಯಿಲ್ಲದೆ ಪಿಡಿವನು, ಕುರುಡನು ಕಾಣಲಿಲ್ಲ, ಕಿವುಡನು ಕೇಳಲಿಲ್ಲ, ಇದೇ ಅತೀಂದ್ರಿಯವೆಂದು ಕರೆಯಲಾಗುವ ಅನುಭವ"[೯]. ಇದನ್ನೇ ಕೂಡಲೂರೇಶರು 'ಕಾಲಿಲ್ಲದೆ ನಡೆವುದು, ಕೈಯಿಲ್ಲದೆ ಪಿಡಿವುದು' ಎಂದಿರುವುದು. 'ಪಾರಮಾರ್ಥಿಕ ಸರ್ಪದ ಹೆಡೆಯಲ್ಲಿಯ ರತ್ನವು ಶೈವ-ವೈಷ್ಣವರ ವಿರೋಧವನ್ನು ಅಡಗಿಸಬಲ್ಲದು ; ಯಾಕೆಂದರೆ ಶಂಕರನು ಈ ಸರ್ಪವನ್ನು ಭೂಷಣವೆಂದು ತನ್ನ ಕೊರಳಿಗೆ ಸುತ್ತಿಕೊಂಡಿರುವನು ; ಹಾಗೂ ವಿಷ್ಣುವು ಅದರ ಮೇಲೆ ವಿಶ್ರಮಿಸುವನು; ಆದ್ದರಿಂದ ಈ ರತ್ನಯುತವಾದ ಶೇಷನು ಹಿರಿಯ ಸಮನ್ವಯಕಾರನು' ಎಂಬುದನ್ನು ಮಹಲಿಂಗ ರಂಗನ 'ರತ್ನ ಬಂದಿದೆ ನೋಡಿರೋ' ಎಂಬ ಕೃತಿ ಬಹುಸೊಗಸಾಗಿ ನಿರೂಪಿಸುತ್ತದೆ.

ತತ್ತ್ವ-ಸಾಹಿತ್ಯ-ಸಂಗೀತಗಳ ಮುಪ್ಪುರಿಗಳಿಂದ ಕೂಡಿದ್ದರಿಂದಲೇ ತತ್ತ್ವ ಸಾಹಿತ್ಯ ಸರ್ವಮತೀಯರಲ್ಲಿಯೂ ಚಲಾವಣೆಯಲ್ಲಿದೆ. ಇಂದಿಗೂ ಹಳ್ಳಿ ಹಳ್ಳಿಗಳಲ್ಲಿ ಬಸ್ಸು-ರೈಲು ನಿಲ್ದಾಣಗಳಲ್ಲಿ ಈ ಹಾಡುಗಳನ್ನು ಹಾಡುವವರನ್ನು ಕಾಣಬಹುದು. 'ಆಧ್ಯಾತ್ಮ ಜನಸಾಮಾನ್ಯರನ್ನು ಮುಟ್ಟಿ ಸಮಷ್ಟಿ ಮನಸ್ಸನ್ನು ಸುಸಂಸ್ಕೃತಗೊಳಿಸುವ ಒಂದು ಪ್ರಬಲ ಮಾಧ್ಯಮವಾಗಿ ಬೆಳೆಯಿತು', 'ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ' ಎಂಬುದು ಎಲ್ಲ ತತ್ತ್ವಪದಕಾರರ ಘೋಷಣೆ', "ಬೋಧ ಒಂದೇ, ಬ್ರಹ್ಮನಾದ ಒಂದೇ, ಸಾಧನ ಮಾಡುವ ಹಾದಿ ಒಂದೇ, ಆದಿಪದ ಒಂದೇ"; 'ಗುಡಿಯ ನೋಡಿರಣ್ಣ ದೇಹದ ಗುಡಿಯ ನೋಡಿರಣ್ಣ' - ಎಂಬಿವೇ ಮುಂತಾದ ಪದಗಳಲ್ಲಿ ಸರ್ವಮತ-ಧರ್ಮಗಳ ಸಾರ ಒಂದೇ, ಏಕದೈವೋಪಾಸನೆ ; ದೈವವನ್ನು ಬಾಹ್ಯದಲ್ಲಿ ಹುಡುಕದೆ ಅರಿವಿನ ಮುಖಾಂತರ ತಮ್ಮಂತರಂಗದಲ್ಲಿಯೇ ಹುಡುಕಬೇಕೆಂದು ಇವರು ಸಾರಿದ್ದು ಅಭೂತಪೂರ್ವವಾದ ವಿಚಾರ. 'ಪರಸ್ಪರ ಅಪನಂಬಿಕೆ, ಹೊಟ್ಟೆಕಿಚ್ಚು, ಜಗಳಗಳನ್ನು

ತಂದೊಡ್ಡುವ ಕೃತಕ ಜಾತಿ ಮತ ಭೇದಗಳ ನಿವಾರಣೆಗಾಗಿ ರಚನೆಯಾಗಿರುವ 'ತೊಗಲ ಮಲಿಯ ಹಾಲು ಕುಡಿದು ದೊಡ್ಡವರಾಗಿ, ಶೀಲ ಮಾಡುತ್ತೀರಿ ನಾಡೆಲ್ಲ'[೧೦] ಎಂಬ ಲಾವಣಿಯನ್ನು ಗಮನಿಸಬೇಕು. ತಮ್ಮ ಮತೀಯರನ್ನೂ ಅನ್ಯಮತೀಯರನ್ನೂ ಟೀಕೆ ಮಾಡಿರುವ ಶರೀಫರ ಮತೀಯ ಸಹಿಷ್ಣುತೆಯ ದೃಷ್ಟಿಯನ್ನರ್ಥಮಾಡಿಕೊಳ್ಳಬೇಕು. ಜೀವನದ ರಹಸ್ಯವನ್ನು ಧ್ವನಿಸುವ, ಕಾವ್ಯ ಪ್ರತಿಮೆಯಾಗಿ ಪರಿಣಮಿಸಿರುವ 'ಹಾವು ತುಳಿದನೇ ಮಾನಿನಿ,[೧೧] ಎಂಬ ತತ್ತ್ವಪದವನ್ನಿಲ್ಲಿ ಉದಾಹರಿಸಬೇಕು.

"ಹಾವು ತುಳಿದೆನೇ ಮಾನಿನಿ
ಹಾವು ತುಳಿದನೇ ॥ ಪ ॥

ಹಾವು ತುಳಿದು ಹಾರಿ ನಿಂತೆ
ಜೀವ ಕಳವಳಿಸಿತು ಗೆಳತಿ
ದೇಹ ತ್ರಯದ ಸ್ಮೃತಿಯು ತಪ್ಪಿ ॥ ೧ ॥

ದೇವಾ ನೀನೆ ಗತಿಯು ಎಂದು
ಹೆರಿಗೆ ಹಾಸಿಗೆಯಾದ ಹಾವು
ಹರನ ಕೊರಳಿನೊಳಿರುವ ಹಾವು
ಧರೆಯ ಹೊತ್ತು ಮೆರೆವ ಹಾವಿನ
ಶಿರವ ಮೆಟ್ಟಿದೆ ಶಿವನ ದಯದಿ ॥ ೨ ॥

ಬೋಧಾನಂದವಾಗಿ ಬರಲು
ಹಾದಿಯೊಳಗೆ ಮಲಗಿ ಇರಲು
ಪಾದದಿಂದ ಪೊಡವಿಗೊತ್ತೆ
ನಾದಗೊಳಿಸಿತು ನಿಜದಿ ನೋಡಿ ॥ ೩ ॥

ಕಾರಡಗಿ ಊರ ಹೊರಗೆ
ದಾರಿಕಟ್ಟಿ ತರುಬಿದಂಥ
ಘೋರತರದ ಉರಗ ಅದರ
ಕ್ವಾರಿಹಲ್ಲು ಮುರಿದೆ ತ್ವರಿತದಿ ॥ ೪ ॥

ಸತ್ಯ ಶಿಶುನಾಳಧೀಶನ
ಉತ್ತಮ ಸೇವಕನಿಗೆ
ಕತ್ತಲೊಳು ಬಂದು ಕಾಲಿಗೆ
ಸುತ್ತಿಕೊಂಡು ಸಣ್ಣ ನಾಗರ ॥ ೫ ॥

ಶೈವ–ವೈಷ್ಣವರ ಶಿವ ಸರ್ವೋತ್ತಮ ಮತ್ತು ವಿಷ್ಣು ಸರ್ವೋತ್ತಮ ಎಂಬ ಪರಸ್ಪರ ವಿರುದ್ಧವಾದ ವಾದವನ್ನು ಇಲ್ಲಿ ಬಳಕೆಯಾಗಿರುವ 'ಹಾವು' ಪರಿಹರಿಸಬಲ್ಲದು. ಎಲ್ಲ

ಮತ-ಪಂಥಗಳನ್ನು ಮೀರಿ ನಿಂತ ಹಾಗೂ ಶರೀಫರ ಮತ ಸಹಿಷ್ಣುತೆಗೆ ಎಲ್ಲ ಧರ್ಮಗಳ ದೇವಾನುದೇವತೆಗಳನ್ನು ಸುತ್ತಿಸಿರುವುದನ್ನೂ ಗಮನಿಸಬೇಕು. ಬಸವೇಶ್ವರ ದಂಡಕ, ಹನುಮಂತದೇವರ ದಂಡಕ, ಶ್ರೀ ಕೃಷ್ಣ ದಂಡಕ, ಶಿವಪರಾದ ಸ್ತೋತ್ರ ದಂಡಕಗಳನ್ನೂ ಗಮನಿಸಬೇಕು. ಸರ್ವಧರ್ಮ ಸಮನ್ವಯಕಾರ ಶರೀಫರು ಸರ್ವಧರ್ಮಗಳ ಅಧಿದೇವತೆಗಳನ್ನು ಕುರಿತು ಮಂಗಳ ಪದಗಳನ್ನು ಬರೆದಿದ್ದಾರೆ. 'ಕರ್ಬಲಾ ಮೈದಾನದಲ್ಲಿ ನಡೆದ ಸತ್ಯಾಸತ್ಯ, ನ್ಯಾಯಾನ್ಯಾಯ, ಧರ್ಮಾಧರ್ಮಗಳೊಳಗಿನ ಕಿತ್ತಾಟವನ್ನು ಹಿಂದೂ ಧಾರ್ಮಿಕ ಕಾವ್ಯ ಗ್ರಂಥಗಳೆನಿಸಿದ ಮಹಾಭಾರತ ರಾಮಾಯಣಗಳಲ್ಲಿಯೂ ಹುಡುಕುವುದು ಶರೀಫರ ಪರಮತ ಸಹಿಷ್ಣುತೆಯ, ವಿಶಾಲ ಮನಸ್ಥಿತಿಯ ಕುರುಹಾಗಿದೆ. ಅವರ 'ರಿವಾಯತ್'ಗಳಲ್ಲಿ ಮೇಲಿನ ವಿಚಾರಗಳ ಪ್ರಭಾವ ಬಿದ್ದು ಹಿಂದೂ ಮಹಮ್ಮದೀಯ ಸಂಸ್ಕೃತಿಯ ಸಂಕೇತಗಳಾಗಿ ಶೋಭಿಸಿವೆ. ಮಠ, ಮಂದಿರ, ಮಸೀದಿಗಳನ್ನೂ ; ಮೂರ್ತಿ ಪೂಜೆ, ತೀರ್ಥ ಸ್ನಾನ, ಜಪತಪ, ವಿಧಿನಿಯಮಗಳನ್ನೂ ಶರೀಫರು ವಿರೋಧಿಸಿದರು. ಕಾರಣ, ಅವರ ಕಾಲದಲ್ಲಿ (ಅಷ್ಟೇ ಏಕೆ, ಈಗಲೂ ಕೂಡ) ದೇವರು-ಧರ್ಮದ ಹೆಸರಿನಲ್ಲಿ ಮಠ-ಮಂದಿರಗಳಲ್ಲಿ ನಡೆಯುವ ಅನಾಚಾರ, ಅಸತ್ಯ ವ್ಯವಹಾರ, ಶೋಷಣೆಗಳನ್ನು ಕಂಡ ಶರೀಫರ ಹೃದಯ ಬೆಂದು ಬೇಗುದಿಗೊಂಡಿರಬೇಕು. ಅಂತೆಯೆ, ಅವರು ಚಿನ್ಮಯಸ್ವರೂಪನಾದ ಪರಮಾತ್ಮನನ್ನು ಹೃದಯದೊಳಗೆ ಕಂಡು ಅನುಭವಿಸುವ ಆನಂದವನ್ನು ತಾವು ಅನುಭವಿಸಿ ಇತರರಿಗೆ ಅದನ್ನು ನೀಡುವುದಕ್ಕೆ ಸತತವಾಗಿ ಪ್ರಯತ್ನಿಸಿದರು... ಉಚ್ಚ ನೀಚ, ಜಾತಿ-ಮತ-ಪಂಥ-ಕುಲ-ಗೋತ್ರ ಇತ್ಯಾದಿ ಎಲ್ಲಾ ಭೇಧಭಾವಗಳನ್ನು ತ್ಯಜಿಸಿ ಸಮಾಜವಾದದ ಶ್ರೇಷ್ಠತತ್ತ್ವಗಳನ್ನು ಅನುಷ್ಠಾನಕ್ಕೆ ತಂದರು.[೧೨] ಆಡಿದುದೆಲ್ಲವನ್ನೂ ಕಾವ್ಯವಾಗಿಸುವ ಪ್ರಖರ ಪ್ರತಿಭೆ ಶರೀಫರದು' ಎಂದು ವಿಮರ್ಶಕರು ಕೊಂಡಾಡಿರುವುದು ಉಚಿತವಾಗಿಯೆ ಇದೆ ; ಪ್ರಾಣಿ ಪ್ರತಿಮೆಗಳು, ದೃಷ್ಟಾಂತ, "ಸಾದೃಶ್ಯಗಳು ನೇರವಾಗಿ ಮನಮುಟ್ಟುವಂತಹ ಅಲಂಕಾರಗಳು ಇಲ್ಲಿನ ಗೀತೆಗಳಲ್ಲಿ ಉದ್ದಕ್ಕೂ ಮಿಂಚುತ್ತವೆ. ಕೆಲವು ಹಾಡುಗಳಂತೂ ಮಧುರವಾದ ನಾದ ವಿನ್ಯಾಸದಿಂದ ಕೂಡಿದ್ದು ಯುಕ್ತವಾದ ರೀತಿಯಲ್ಲಿ ಹಾಡಿದಾಗ ಇನ್ನೂ ಅಧಿಕ ಪರಿಣಾಮವನ್ನು ಬೀರುವಂತಿವೆ"[೧೩] ಎಂಬ ಮಾತು ಈ ಹಾಡುಗಳಿಗೆ ಚೆನ್ನಾಗಿ ಒಪ್ಪುತ್ತದೆ. ಕೆಲವರು ಅವರ ಮತಗಳಲ್ಲಿದ್ದುಕೊಂಡೇ ಪಾರಮಾರ್ಥಿಕ ಪಥಗಳನ್ನು ಹಿಡಿದರೆ, ಕೆಲವರು ಅನ್ಯಮತಗಳನ್ನು ಪ್ರವೇಶಿಸುವುದರ ಮುಖಾಂತರ ಪಾರಮಾರ್ಥಿಕ ಪಥಗಳನ್ನು ಹಿಡಿದಿದ್ದಾರೆ. ಆದರೆ ಅವರ ಗುರಿ 'ಷಟ್‌ಭ್ರಮೆಗಳಿಂದ,[೧೪] ಜೀವಿಗಳನ್ನು ಮುಕ್ತರನ್ನಾಗಿಸಿ ದೈವಸಾಕ್ಷಾತ್ಕಾರಕ್ಕೆ ಬಾಗಿಲು ತೆರೆಯುವುದೇ ಆಗಿದೆ.

'ಹುಸೇನ ಸಾಹೇಬರ ಬಳಿಯಲಿ ಹೋಗಿ' ಎಂಬ ಸಿದ್ಧೇಶ್ವರರ ಹಾಡಿನಲ್ಲಿ ಕೆಲವು ವಿಶೇಷ ಉಲ್ಲೇಖಗಳು ಬರುತ್ತವೆ. "ಕಲಬುರ್ಗಿಯಲ್ಲಿ ಶರಣ ಬಸವ ದೇವಾಲಯವೂ ಬಂದೇನವಾಜರ ಮಸೀದಿಯೂ ಇದೆ. ಮಸೀದಿಗಳಿರುವೆಡೆ ನವಕೋಟಿ ನಾರಾಯಣ ದೇವರ ದೇವಾಲಯವೊಂದಿದೆ. ಇದು ಹಿಂದೂ-ಮುಸ್ಲಿಮರ ಪಾರಮಾರ್ಥಿಕ ಆದರ್ಶಗಳ ಏಕತೆಯನ್ನು ಧ್ವನಿಸುತ್ತದೆ. ಸಿದ್ಧೇಶ್ವರರು ಬಂದೇನವಾಝರ

ಮಿತ್ರರು, ನಾವು ಹುಸೇನ ಸಾಹೇಬರಲ್ಲಿಗೆ ಹೋಗಿ ಹಸನಾಗಿ ಪರಿಶುದ್ಧರಾಗಿ ಬಂದೆವು; ನಮ್ಮ ಮುಸಲ್ಮಾನ ಸ್ನೇಹಿತರ ಸಂಗದಲ್ಲಿ ಪಾರಮಾರ್ಥಿಕ ಫಕೀರರಾಗಿ ಸವಿಸವಿ ಪ್ರಸಾದ ಉಂಡೆವು.

'ಅಂದವಾದ ಶ್ರೀಗಂಧದ ಗಿಡದೊಳು' ಎಂಬ ಅಜ್ಞಾತ ಕವಿಯೊಬ್ಬನ ಹಾಡಿನಲ್ಲಿ 'ಅಲ್ಲಮ ಪ್ರಭುವು, ಅಲ್ಲಮ ಸಾಹೇಬರೆಂದೂ ಉಲ್ಲೇಖಗೊಂಡಿದ್ದಾನೆ. ಜತೆಗೆ ಈ ಹಾಡಿನಲ್ಲಿ ಅನೇಕ ಉರ್ದು ಶಬ್ದಗಳೂ ಬಳಕೆಯಾಗಿವೆ. ಮೇಲೆ ಉಲ್ಲೇಖಿಸಿದ ಎರಡೂ ಪದಗಳ ತಿರುಳು ಸನಾತನ ಬೆಲೆಯುಳ್ಳದ್ದು. ಅನ್ಯ ಮತ ವಿಡಂಬನೆ-ಖಂಡನೆಗಳು ಕಾಣಿಸಿಕೊಳ್ಳದೆ ತತ್ತ್ವಜ್ಞಾನದ ಪರಂಪರೆಯೊಳಗೆ ಬಂದವರಲ್ಲಿ ಪರಮತ ಪುರಸ್ಕಾರ ಮುಗಿಲೆತ್ತರದಲ್ಲಿ ಬಾವುಟದಂತೆ ಹಾರುತ್ತಿದೆ. ವೈಷ್ಣವಕವಿಗಳು ಶಿವಸ್ತುತಿ ಮಾಡಿರುವುದನ್ನೂ ಶಿವಕವಿಗಳು ವಿಷ್ಣುಸ್ತುತಿ ಮಾಡಿರುವುದನ್ನೂ ವೀರಶೈವ ಕವಿಗಳು ಮುಸಲ್ಮಾನರ ಪರಂಪರೆಯನ್ನು ಗೌರವಿಸಿರುವುದೂ ಮುಸಲ್ಮಾನರು, ವೀರಶೈವ-ಬ್ರಾಹ್ಮಣ ಧರ್ಮೀಯರ ಗುಣಗಾನ ಮಾಡಿರುವುದೂ ಅಸಾಮಾನ್ಯವಾದ ವಿಚಾರಗಳಾಗಿವೆ. ಇಲ್ಲಿ ಐಹೊಳೆಯ ವೆಂಕಟೇಶರನ್ನೂ ಕೈವಾರ ನಾರಾಯಣಪ್ಪನವರನ್ನೂ ಸಿದ್ಧೇಶ್ವರರನ್ನೂ, ಶರೀಫ-ಕಬೀರರನ್ನೂ ವಿಶೇಷವಾಗಿ ಸ್ಮರಿಸಿಕೊಳ್ಳಬೇಕು.

'ಅವಧೂತನವನು', ಎಂಬ ಕೂಡಲೂರೇಶ್ವರರ ಸ್ವರವಚನವನ್ನಿಲ್ಲಿ ಅವಲೋಕಿಸಬೇಕು.[೧೫]

ಗುರುವಿನಾಜ್ಞೆಯ ಮೀರದೆ ನಡೆವವನ
ನರನೆನ್ನಬೇಡ ಅವನೆ ಪರಮಾತ್ಮ
ಅರಿಯದ ಅಜ್ಞಾನಿ ಜನರೇನು ಬಲ್ಲರು
ಪರಕೆ ಪರತರ ವಸ್ತು ಅವನು.

ಮುತ್ತು ನೀರೊಳು ಪುಟ್ಟಿ ಮತ್ತೆ ನೀರಾಗುವದೆ ?
ಮುತ್ತು ಲಕ್ಷಾಂತರ ಬೆಲೆಯಾಯಿತು
ತತ್ತ್ವಜ್ಞಾನಿಯು ತಾನು ಸತ್ತು ಹುಟ್ಟುವನಲ್ಲ
ಅತ್ಯಂತ ಆನಂದ ಪರಿಪೂರ್ಣನವನು.

ಜಾತಿಯೊಳು ಪುಟ್ಟಿ ಅಜಾತನಾದವಗೆ
ಜಾತಿ ಭೇದಂಗಳು ಆತನಿಗುಂಟೆ ?
ಜ್ಯೋತಿ ಪ್ರಕಾಶ ಕೂಡಲೂರೇಶನೆ
ದಾತ ಪ್ರಖ್ಯಾತ ಅವಧೂತನವನು !

ಜಾತಿ-ಮತಗಳ ನಿರ್ಬಂಧಗಳನ್ನು ಬದಿಗೊತ್ತಿ ಹಾಗೂ ಜನನ-ಮರಣಗಳ ಚಕ್ರವನ್ನು ತಡೆದು ನಿಲ್ಲಿಸಿ ಸಂತರು ಪರಮಾತ್ಮನೊಡನೆ ಏಕತೆಯನ್ನು ಪಡೆಯುವರು ಮತ್ತು ಮಾನವತೆಯ ಕಲ್ಯಾಣವನ್ನು ಸಾಧಿಸುವರು ; ಆತ್ಮಜ್ಞಾನಿಯ ಪುನರ್ಜನ್ಮ ವಿಮುಕ್ತಿಯ ಉತ್ಕೃಷ್ಟವಾದ ವರ್ಣನೆ ಈ ಹಾಡು ; ಇಲ್ಲಿನ ದುಷ್ಟಾಂತಗಳ ಸ್ವಾರಸ್ಯವನ್ನು ಪರಿಭಾವಿಸಬೇಕು.

'ಗುಲಾಲ' ಎಂಬ ಹಿಂದೀ ಸಂತರು ಪರಮಾನಂದಾನುಭವದ ನಂತರ 'ಅಬನಹೀ ಅವನಾ ಜಾವನಾಹೋ' (ಇನ್ನು ಬರುವುದು ಹೋಗುವುದು ಉಳಿಯಲಿಲ್ಲ) ಎಂಬುದಕ್ಕೆ ಸಂವಾದಿಯಾಗಿದೆ ಕೂಡಲೂರೇಶರ ಪದ. ಕಬೀರರ 'ಅಮರಹೋ ಯಕಬಹೂಂ ನಮರೇಂ' (ಅವನು ಅಮರನಾಗುವ, ಅವನೆಂದೂ ಸಾಯಲರಿಯ) ಎಂಬ ಮಾತು ಮೇಲಿನ ಇಬ್ಬರ ಮಾತುಗಳಿಗೂ ಸಂವಾದಿಯಾಗಿದೆ. ಆದ್ದರಿಂದಲೇ ಮೇಲೆ ನಿರೂಪಿಸಿದ್ದು, ಅನುಭಾವಿಗಳು ಯಾವ ದೇಶದವರೇ ಆಗಲಿ, ಯಾವ ಭಾಷೆಯವರೇ ಆಗಲಿ, ಅವರ ಅನುಭವ ಪ್ರಕಾಶದಲ್ಲಿ ಸಾರ್ವತ್ರಿಕಾನ್ವಯದ ಸಮಾನ ಲಕ್ಷಣಗಳನ್ನು ಗುರುತಿಸಬಹುದು ಎಂದು.

"ತನು ಮನ ಧನದ ಆಸೆಯ ಕೆಡಿಸೊ
ಹೀನ ವಿಷಯಂಗಳ ಬಿಡಿಸೊ
ಮನವ ನಿನ್ನಾಜ್ಞೆಯೊಳು ನಿಲಿಸೊ
ಘನಯೋಗನಿದ್ರೆಯೊಳಗಿರಿಸೊ"[೧೬]

'ತನ್ನ ಮೂಲ ಪಾರಮಾರ್ಥಿಕ ಸ್ವರೂಪವನ್ನು ಸಾಕ್ಷಾತ್ಕರಿಸಿಕೊಂಡು ಮನುಜನು ಮರಳಿ ಎಂದೂ ಜನಿಸಲರಿಯುನು' ಎಂಬ ರಾನಡೆಯವರ ಮಾತನ್ನಿಲ್ಲಿ ಸ್ಮರಿಸಿಕೊಳ್ಳಬೇಕು.[೧೭] ಜಾತಿಯ ಬಂಧನಗಳನ್ನು ಮೀರಿದವನು ಒಂದು ಜಾತಿಯಲ್ಲಿ ಹುಟ್ಟಿದರೂ ಅವನ ಮನಸ್ಸು ಜಾತಿಮತ ಧರ್ಮಗಳ ವಿಚಾರಗಳಿಂದ ಎಂದೂ ಕಲುಷಿತವಾಗುವುದಿಲ್ಲವೆಂಬುದು ಆಶುಕವಿ ಕೂಡಲೂರೇಶ್ವರರ ಕಿವಿಮಾತು. 'ಹೊಲೆಯರು ನಾವು. ಮಿಂಡಲಾಡಿ, ಪಂಡಿತರೆ, ಕರ್ಮವೆಲ್ಲಿಹುದು ಜ್ಞಾನಿಗೆ, ಕಲ್ಲು ಅಲ್ಲ ನೀನು ಹೋಗಬ್ಯಾಡೊ ತಮ್ಮ ಇದು ಏನು ಸೋಜಿಗವೋ,[೧೮] 'ಚೇಳು ಕಚ್ಚಿತವ್ವಾ'[೧೯] 'ನೋಡಿದ್ಯಾ ಬ್ರಹ್ಮನಾಟವ' ಎಂಬ ತತ್ತ್ವಪದಗಳನ್ನೂ ಹಲವಾರು ದೃಷ್ಟಿಗಳಿಂದ ಗಮನಿಸಬೇಕು.

ಬಗೆಬಗೆಯ ಮತ-ಧರ್ಮಗಳಿಗೆ ಸೇರಿದ ಅನುಭಾವಿಗಳು ಯಾವ ಮತೀಯರನ್ನೂ ಖಂಡಿಸಿಲ್ಲ, ನಿಂದಿಸಿಲ್ಲ, ವಿಡಂಬಿಸಿಲ್ಲ ಎಂಬುದರ ನಿರೂಪಣೆಗೆ ಕೈವಾರ ನಾರಾಯಣಪ್ಪನವರ ಕೃತಿಯೊಂದನ್ನೆತ್ತಿಕೊಳ್ಳುತ್ತೇನೆ :[೨೦]

"ಕರ್ನಾಟಕಂಬೆಲ್ಲ-ಕಲಗೂರುಗಂಪಾಯ
ತಬ್ಬಲಿ ಗುರುವುಲು-ದಂಡಿಂಚಲೇರು
ಅಲ್ಲಾ ಮತಮುವಕಟಿ-ಅದ್ದು ಗಾನಿಲಿಚೆರಾ
ನಾದ ಬ್ರಹ್ಮಾನಂದ-ನಾರೇಯಣ ಕವಿ"[೨೧]

("ಕರ್ನಾಟಕ ರಾಜ್ಯದಲ್ಲಿ ಅನೇಕ ದೇವತೆಗಳನ್ನು ಪೂಜಿಸುವ ಸಂಪ್ರದಾಯ ಬೆಳೆದಿದ್ದರಿಂದ ಮತಗಳ ಸಂಖ್ಯೆಯೂ ಹೆಚ್ಚಿ ಹಿಂದು ಮತವು ಹಲವು ಸೊಪ್ಪುಗಳನ್ನು ಕೂಡಿಸಿದ ಕಲಬೆರಕೆ ಸೊಪ್ಪುಗಳ ಪುಟಿಕೆಯಂತೆ ಹಲವಾರು ಮತ-ಪಂಗಡಗಳ ಬೆರಕೆಯುಳ್ಳ ಮತವಾಯಿತು. ಹೀಗೆ ಮತಚ್ಛಿದ್ರಕ್ಕೆ ಕಾರಣರಾದವರನ್ನು ದಂಡಿಸುವ ಸಾಮರ್ಥ್ಯವಿಲ್ಲದೆ ಗುರುಗಳೆನಿಸಿಕೊಂಡವರು ತಬ್ಬಲಿಗಳೇ ಆದರು ; ಅಥವಾ ಮತವು ಛಿದ್ರವಾಗುತ್ತಿದ್ದರೂ ದಂಡಿಸದೆ, ಸರಿಯಾದ ಮಾರ್ಗದರ್ಶನ ಮಾಡದೆ ನೋಡುತ್ತ ಕುಳಿತರು-ತಬ್ಬಲಿ ಗುರುಗಳು! ಮಹಮ್ಮದೀಯ ಮತವೊಂದು ಮಾತ್ರ ಬಹುದೇವತೋಪಾಸನೆಗೆ ಒಳಗಾಗದೆ 'ಅಲ್ಲಾ' ಒಬ್ಬನೇ ಉಪಾಸ್ಯದೈವವೆಂದು ನಿರ್ಣಯಿಸಿಕೊಂಡು ಕಟ್ಟುನಿಟ್ಟಾದ ಒಂದು ಮತವಾಗಿ ನಿಂತಿತಣ್ಣ") ನಾರೇಯಣ ಯತೀಂದ್ರರ ಮತೀಯ ಸಹಿಷ್ಣುತೆಗೆ ಇದೊಂದು ಒಳ್ಳೆಯ ನಿದರ್ಶನ. ಕೈವಾರ ನಾರಾಯಣಪ್ಪನವರು ಅಸ್ಪೃಶ್ಯನ ಹೃದಯ ಮಂದಿರದಲ್ಲಿಯೇ ದೇವರಿದ್ದಾನೆಂಬುದನ್ನು ಸಾರಿದ್ದಾರೆ :

"ಮಾಲವಾಡನಿಜನುಲು ಯೇಲ ನಿಂದಿಂತುರು
ಮಾನವಾನಿ ಆತ್ಮ ಮಂದಿರ ಮುನ
ಸಕಲ ದೇಹವಿಹಾರಿ ಸದ್ಗುರುಕುವುಂಡಾರಾ
ನಾದ ಬ್ರಹ್ಮಾನಂದ ನಾರೇಯಣ ಕವಿ".

ಅಲ್ಪಜಾತಿಯವರು ಎಂಬುವರೇ ಇಲ್ಲ ; ಆದ್ದರಿಂದ ಜಾತಿಭೇದವನ್ನೇಕೆ ಮಾಡಬೇಕು? ಉತ್ತಮ ಜಾತಿಯವರು ತಾವು ಎಂದು ಹೇಳಿಕೊಳ್ಳುವವರ ಪ್ರಾಬಲ್ಯ ಒಂದು ದಿನ ಕಡಿಮೆಯಾಗುವುದರಲ್ಲಿ ಸಂಶಯವಿಲ್ಲವೆಂಬ ಅಭಿಪ್ರಾಯವನ್ನವರು ವ್ಯಕ್ತಪಡಿಸಿದ್ದಾರೆ. "ಆದರ್ಶಜೀವನದ ದೃಷ್ಟಿಯಿಂದ ಅವರು ಸದ್ಗೃಹಸ್ಥರು ; ಜನತೆಯಲ್ಲಿನ ಮಿಥ್ಯಾಚರಣೆಗಳನ್ನು ತೊಲಗಿಸಿ, ಪ್ರಗತಿ ಪಥವನ್ನು, ನಿರ್ಮಿಸಿದ ಸಮಾಜ ಸುಧಾರಕರು; ದೀನದಲಿತರ ಬಗೆಗೆ ಸೇವಾಮನೋಭಾವನೆಯನ್ನು ಮೂಡಿಸಿದ ಆಪ್ತಬಂಧುಗಳು ; ಎಲ್ಲ ಜೀವಿಗಳ ಸೌಖ್ಯವನ್ನು ಕೋರಿದ ಲೋಕಬಂಧುಗಳು. ಪರಮಾತ್ಮನ ವಾಣಿಯನ್ನು ಲೋಕಕ್ಕೆ ಘೋಷಿಸಿದ ದೇವದೂತರು; ವೈರಾಗ್ಯ ಪುರುಷರು... ಬ್ರಹ್ಮಜ್ಞಾನಿಗಳು.; ತಾವು ಕಂಡುಕೊಂಡ ಜ್ಞಾನಾಮೃತವನ್ನು ಕೀರ್ತನೆ-ಸ್ತೋತ್ರ -ಶತಕಾದಿ ಸಾಹಿತ್ಯರೂಪಗಳಲ್ಲಿ ಜನತೆಗೆ ಹಂಚಿಕೊಟ್ಟು ಹೋಗಿರುವ ವರಕವಿಗಳಾಗಿದ್ದಾರೆ... ತಮ್ಮ ಕಾಲದ ಕೆಲವು ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿಗಳನ್ನು ಪ್ರಾಸಂಗಿಕವಾಗಿ ಪ್ರಸ್ತಾಪಿಸಿರುವುದರಿಂದ ಇತಿಹಾಸದಲ್ಲಿ ಅಭಿರುಚಿಯುಳ್ಳವರಿಗೂ ಈ ಗ್ರಂಥವು ಪ್ರತ್ಯಕ್ಷದರ್ಶಿಯೊಬ್ಬರ ಸಾಕ್ಷ್ಯವುಳ್ಳ ಅಮೂಲ್ಯ ದಾಖಲೆಯೆನಿಸಿ ಮಹತ್ವಪೂರ್ಣವಾಗಿದೆ."[೨]

ಜಂಗಮಕ್ಕೆ ಕುಲವಿಲ್ಲ, ಲಿಂಗಕ್ಕೆ ಹೊಲೆಯಿಲ್ಲ, ಶಿವಭಕ್ತರಿಗೆ ಈಗ ಸಾರಿದೆನೋ" ಎನ್ನುವ ಕೈವಾರ ನಾರಾಯಣಪ್ಪನವರ ಮಾತುಗಳು; "ಹೊಲೆಯುಂಟೇ"

ಲಿಂಗವಿದ್ದೆಡೆಯಲ್ಲಿ, ಕುಲವುಂಟೇ ಜಂಗಮವಿದ್ದೆಡೆಯಲ್ಲಿ" ಎಂಬ ಬಸವಣ್ಣನವರ ಮಾತುಗಳಿಗೆ ಸಂವಾದಿಗಳಾಗಿವೆ. ವಚನ ಸಾಹಿತ್ಯದ ಪ್ರಭಾವ- ತತ್ತ್ವಪದಕಾರರ ಮೇಲೆ ಆಗಿದೆ ಎಂಬುದಕ್ಕೆ ಸಾಕಷ್ಟು ನಿದರ್ಶನಗಳು ಲಭಿಸುತ್ತವೆ. 'ಬಯಲು, ಬಯಲಾಗುವ ಕ್ರಿಯೆ, ನಿರ್ಬಯಲು' ಎಂಬಿವೇ ಮುಂತಾದ ಶಬ್ದಗಳು ಗಟ್ಟಹಳ್ಳಿ ಆಂಜನಪ್ಪನವರ ಹಾಡುಗಳಲ್ಲಿ ಬಳಕೆಯಾಗಿರುವುದನ್ನಿಲ್ಲಿ ಸ್ಮರಿಸಿಕೊಳ್ಳಬಹುದು. 'ದೇಹವೇ ದೇಗುಲ'. ಎಂಬ ಬಸವಣ್ಣನವರ ವಚನದ ಸಾಲಿಗೆ ಸಂವಾದಿಯಾಗಿರುವ ಗಟ್ಟಹಳ್ಳಿ ಆಂಜನಪ್ಪನವರ ಈ ಮಾತನ್ನು ಗಮನಿಸಿ : "ದೇಹ ಮುಲೋನೆ ದೇವಳ ಮುನ್ನದಿ, ದೇವುನಿಕನವಲೆನು". ಅಕ್ಕಮಹಾದೇವಿಯ ಐದು ಸಾಲಿನ ವಚನವೊಂದರ ಭಾವಾಭಿವ್ಯಕ್ತಿ ಕೈವಾರ ನಾರಾಯಣಪ್ಪನವರಲ್ಲಿ ಒಂದು ಹಾಡಾಗಿದೆ :

"ಪಚ್ಚೆಯ ನೆಲಗಟ್ಟು ಕನಕದ ತೋರಣ ವಜ್ರದ ಕಂಬ
ಪವಳದ ಚಪ್ಪರವಿಕ್ಕಿ ಮುತ್ತು ಮಾಣಿಕದ ಮೇಲುಕಟ್ಟು ಕಟ್ಟಿ
ಮದುವೆಯ ಮಾಡಿದರು, ಎಮ್ಮವರೆನ್ನ ಮದುವೆಯ ಮಾಡಿದರು
ಕಂಕಣ ಕೈಧಾರೆ ಸ್ಥಿರಸೇಸೆಯನಿಕ್ಕಿ
ಚನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯ ಮಾಡಿದರು".

"ಮುಹೂರ್ತವಾಯಿತೋ
ಲಗ್ನ ಮುಹೂರ್ತವಾಯಿತೋ
ಮಮ್ಮೊಲೆ ಮನೆಯೊಳಗೆ ರಾಜಯೋಗ ಮುಕ್ತಿರಮಾಮಣಿಯೊಡನೆ
ಮುಹೂರ್ತವಾಯಿತೋ
ಲಗ್ನ ಮುಹೂರ್ತವಾಯಿತೋ ॥ ಪ ॥
ಪರತತ್ತ್ವವೆಂಬ ಒಳ್ಳೇ ಪಚ್ಚೆಯ ಚಪ್ಪರದಡಿ
ನಾಗಸ್ವರ ಮೇಳಗಳು ಮೇಟಿ ನವಭತ್ತು
ಝೇಂಕಾರ ಘನಗರ್ಜಿತವಾದ ಹೊಂಗೆಜ್ಜೆಗಳ
ನಾದವು ಮೊಳಗೆ ಹೆಚ್ಚಾದ ಶುಭ ಲಗ್ನದಲ್ಲಿ
ಬೆಳುದಿಂಗಳ ಬೆಳಕಿನೊಳು
ಮುಹೂರ್ತವಾಯಿತೋ...

ಆದಿ ಮೂಲವೆಂಬ ಅಗ್ರಜನು ಅಲ್ಲಿ ನಿಂತು
ಆಗಮೋಕ್ತಿಯಂತೆ ಅಡ್ಡತೆರೆ ಹಿಡಿದು
ಸಾವಧಾನವೆನುತ ಮಂತ್ರ ಪಠಣವ
ಪಠಿಸುವ ಸಮಯದಿ ಕಂಠಲಿಂಗವನು

ಮದುಮಗಳ ಕಂಠದಿ ಕಟ್ಟಿದ ವೇಳೆ
ಮುಹೂರ್ತವಾಯಿತೋ...

ಭಾವಾತೀತರಾದ ಭಾಗವತ ಜನಸಂಬಂಧಿಗಳು
ಬಾರಿ ಬಾರಿಗೂ ತೀರದ ತುಂಬು ಅಕ್ಕರೆಯಿಂದ
ಮುಸಿ ಮುಸಿ ನಗುತ್ತಾ ಮುತ್ತೈದೆಯರು ಬಳಿಸಾರಿ
ರಮಣಿ ಮಣಿಯ ಕಯ್ಯಾರ ಸೇಸೆಯಿಕ್ಕಿದ ವೇಳೆ
ಮುಹೂರ್ತವಾಯಿತೋ...

ಅಷ್ಟಾಂಗಯೋಗವೆಲ್ಲ ಆಕ್ರಮಿಸಿ ಧರಣಿಯೊಳು
ಯಾರಿಗೂ ತಿಳಿಯದ ಬೆಲೆಯುಳ್ಳ ಶುಭವತಿ ಬಂದು
ಸಖಿಯ ಸಲಹೆಂದು ಕರಗಳ ಕೂಡಿಸಿ ಮುದದಿ
ಧಾರೆಯೆರೆದು ದೀರ್ಘಾಯುವಾಗೆಂದು ದೀವಿಸಿದ ವೇಳೆ
ಮುಹೂರ್ತವಾಯಿತೋ...

ಆದಿ ಪರಂಜ್ಯೋತಿ ಅಮರ ನಾರೇಯಣ ಹರಿಗುರುವಿನ
ಬೋಧಲೋಲನಾಗಿಹ ಬಹುಯೋಧ ಯೋಗೀಶ್ವರನ
ಆನಂದಭರಿತವಾದ ಅಪರಂಜಿ ಪೀಠದಿ ಇರಿಸಿ
ಮಂಗಳ ಮಂಗಳವೆನುತ ಮಂಗಳಾರತಿಯೆತ್ತಿದ ವೇಳೆ
ಮುಹೂರ್ತವಾಯಿತೋ..." (ತೆಲುಗು ಮೂಲ : ಕೈವಾರ ನಾರಾಯಣಪ್ಪ. ಕನ್ನಡಾನುವಾದ : ಪ್ರೊ. ವಿ. ಚಂದ್ರಶೇಖರ ನಂಗಲಿ : ಕನ್ನಡ ತತ್ತ್ವಪದಕಾರರು : ಪುಟ; ೭೬–೭೮. ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ ; ೧೯೯೩).

"ಸರ್ವ ಜೀವರಿಗೆ ಸರ್ವ ಭಾವರಿಗೆ
ಸರ್ವ ದೇವರಿಗೆ ಶರಣಾರ್ಥಿ";[೨೩]
"ಸ್ಥಿರವಿಲ್ಲವೋ ಈ ಸಂಸಾರ । ಗಾಳಿ
ಗಿರಿಸಿದ ದೀವಿಗೆ ಪ್ರಕಾರ";[೨೪]

'ಕುಲಭಲಕ್ಹೋರಾಡಿ । ತಾ ಪ್ರ
ಜ್ವಲಿಸುವ ಮುಖಮಾಡಿ
ಹಲಬರ ಹಳಿದಾಡಿ । ಪುಣ್ಯದ
ಫಲ ಹೋಯಿತು ಜ್ಯಾಡಿ
ಕಲಕಿನೊಳಗೆ ಕೂಡಿ ! ನಡ
ದೆಲ್ಲ ನೆಲಮನಿಗೆಲೆ ಖೋಡಿ"[೨೫]

"ಯಾಕೆ ಚಿಂತೆ ಮಾಡತೀರಿ ಎಲೆ ಮನವೆ" ಎಂಬ ಮುಂತಾಗಿ ಹಾಡಿದವರು ಕಡಕೋಳ ಮಡಿವಾಳೇಶ್ವರರು. 'ಕುಲಛಲಕೆ ಹೊಡೆದಾಡಬೇಡಿರೋ ಮುಂದೆ ನೆಲೆವಾಡಿಕೊಳ್ಳುವುದು ನೋಡಿರೋ', ಕುಲಛಲವೆಲ್ಲಾ ಸುಳ್ಳು ; ಇಹಲೋಕಾದಭಿಮಾನ ಬಿಡಿ' ಎಂದು ಘೋಷಿಸಿದ ಇವರು ಧರ್ಮದೃಷ್ಟಿಯುಳ್ಳವರು. ವೈದಿಕ ಸಂಸ್ಕೃತಿಯ ಬಳುವಳಿಯಾದ ಶ್ರೇಣೀಕೃತ ವ್ಯವಸ್ಥೆಯ ವರ್ಣಾಶ್ರಮ ಮತ್ತದರ ಇನ್ನಿತರ ನಂಬಿಕೆ, ಆಚರಣೆ, ಮೇಲರಿಮೆ, ಪ್ರತಿಷ್ಠೆಗಳನ್ನಂತೂ ತತ್ತ್ವಪದಕಾರರೆಲ್ಲರೂ ನೇರ ಮತ್ತು ಖಚಿತವಾದ ಮಾತುಗಳಲ್ಲಿ ತಿರಸ್ಕರಿಸಿದ್ದಾರೆ. ಕಡಕೋಳದ ಮಡಿವಾಳೇಶ್ವರರು ಜಗತ್ತು ಮಿಥ್ಯ ಎಂದು ಹಳಿಯುವ ವೇದಾಂತಿಗಳ ಬಾಯಿ ಮುಚ್ಚಿಸಿ, ಶಕ್ತಿ ವಿಶಿಷ್ಟಾದ್ವೈತವನ್ನು ಮೆರೆದಿದ್ದಾರೆ. ಅವರ 'ಮುಕ್ತಿಪಡಿ' ಎಂಬ ಸ್ವರವಚನದ ಕೆಲವು ಸಾಲುಗಳನ್ನು ಗಮನಿಸಿ:

ಉಚ್ಚ ನೀಚ ಅನ್ನತೀದಿ ಹುಚನಾಯಿ
ಉಚ್ಚಿಯೊಳು ಬಂದೀದಿ ಹುಚನಾಯಿ ॥
ಕುಲಕುಲ ಅನ್ನತೀದಿ ಕುಲಗೇಡಿ ।
ಕುಲದ ಖೂನ ಹೇಳು ನಿಜ ನೋಡಿ ॥
ಕೆಳಗೆಂದು ಮೇಲೆಂದು ಹಾರಾಡತೀದಿ ।
ನಾವೆಲ್ಲರೂ ಒಂದರಿ ತಿಳಿಗೇಡಿ ನೀ ।
ಹಮ್ಮೊಳು ಬಿದ್ದು ಉಪರಾಟಿ ಸಾಯತೀದಿ । ಸುಮ್
ಸುಮ್ಮನೆ ವೇದಾಂತವ ಹೇಳತೀದಿ ಖೋಡಿ ನೀ ॥

(ಕಡಕೋಳಮಡಿವಾಳೇಶ್ವರ ವಿರಚಿತ ಸ್ವರ ವಚನಗಳು : ಪುಟ : ೨೪... ೨೫–೧೨೧)

ಮಡಿವಾಳೇಶ್ವರರ ಸ್ವರವಚನಗಳಲ್ಲಿ ಬ್ರಾಹ್ಮಣ, ಮಡಿ, ವೇದಾಂತ ಮತ್ತು ಮೂರ್ತಿ ಪೂಜೆಯ ಬಂಡವಾಳವನ್ನು ನಿರ್ದಾಕ್ಷಿಣ್ಯವಾಗಿ ಬಯಲು ಮಾಡುವ ಸಾಕಷ್ಟು ಉದಾಹರಣೆಗಳನ್ನು ನಾವು ನೋಡಬಹುದಾಗಿದೆ. (ಹೆಚ್ಚಿನ ವಿವರಗಳಿಗೆ ನೋಡಿ : ಕನ್ನಡ ತತ್ತ್ವಪದಕಾರರು : ಪುಟ ; ೧೫–೧೭ : ಲಕ್ಷ್ಮೀಪತಿ ಕೋಲಾರ ಅವರ ಲೇಖನ: 'ವಸಾಹತು ಶಾಹಿ ಹಿನ್ನೆಲೆಯಲ್ಲಿ ತತ್ತ್ವಪದಕಾರರ ರಚನೆಗಳು') 'ಆಶುಕವಿತ್ವದ' ಮೂಲ ಸೆಲೆಯನ್ನು ಇವರ ಸ್ವರವಚನಗಳಲ್ಲಿ ಕಾಣಬಹುದು. ಇವರ ಲೋಕಾನುಭವ ಅಪಾರ. ಮನಸ್ಸಿನ ನೀಚತನ, ಪಕ್ಷಪಾತ ಮನೋಧರ್ಮ ಹಾಗೂ ಬದುಕಿನ ಅಶಾಶ್ವತತೆಯನ್ನು ಸುಂದರವಾಗಿ ನಿರೂಪಿಸಿದ್ದಾರೆ. ನಿಂದಕರನ್ನು, ಮಹಾಂತ ಸ್ವರೂಪಿಗಳೆಂದೇ ಭಾವಿಸುವ; ವೈರಿಗಳನ್ನು ದೇವರಂತೆ ನೋಡುವ ಮನೋವೈಶಾಲ್ಯ ಮಡಿವಾಳಪ್ಪನವರನ್ನು ಮುಗಿಲೆತ್ತರಕ್ಕೆ ಎತ್ತಿ ನಿಲ್ಲಿಸಿದೆ. "ಧನವ ಗಳಿಸಬೇಕು ಇಂಥಾದ್ದು. ಈ ಜನರಿಗೆ ತಿಳಿಯುವಂಥಾದ್ದು" ಎಂಬ ಹಾಡು ಆಧ್ಯಾತ್ಮಿಕ ಸಂಪತ್ತಿನ ಸಾರವನ್ನೇ ಹಿಡಿದಿಟ್ಟಿರುವಂಥದ್ದು. ವೈರಾಗ್ಯ, ಸದಾಚಾರ, ಗುರುಸ್ತುತಿ, ಜ್ಞಾನ ಸಂಪತ್ತಿನ ಸಾರವನ್ನಿಲ್ಲಿ ಕಾಣಬಹುದು.

ಜಂಗಮನಾದ ಮೇಲೆ ಮನಲಿಂಗ ಮಾಡಿಕೊಂಡಿರಬೇಕು' ಎಂದು ಹಾಡಿದವರು ಚೆನ್ನೂರ ಜಲಾಲ್ ಸಾಹೇಬರು:

"ಸಬ್ ಕಹತೇ ಈಶ್ವರ ಅಲ್ಲಾ
ಇದರ ಬೇಫ್ ಯಾರಿಗೆ ತಿಳಿಯಲಿಲ್ಲ ‖ ಪ ‖
ನಿರಾಕಾರಸೇ ಆಕಾರ ಹುವೇ
ವೇದ ಶಾಸ್ತ್ರಕೆ ನಿಲುಕಲಿಲ್ಲ
ಹಿಂದೂ ಮುಸ್ಲಮಾನ ಶಾಸ್ತ್ರ ಪಡತಪ್ಪೆ
ಗುರುಮನಿ ಕೀಲ ಸಿಗಲಿಲ್ಲ ‖ ೧ ‖

ಲಾಯಕೆ ಗುರುಕು ಸಬ್ ಧೂಂಡ್‌ಲಾಂಕೇ
ಏನು ಬೇಡಿದ್ದು ಕೊಡಬೇಕಲ್ಲ
ತನುಮನಧನ ಲೋಭ ಛೋಡಕರ್
ಆಗಬೇಕು ಗುರುವಿನ ಚೇಲಾ ‖ ೨ ‖

ಹಮ್‌ಭಿ ಕಹತೆ ತುಮ್‌ಭೀ ಕಹತೇ
ಮಾಡಬ್ಯಾಡರೀ ಮ್ಯಾಲಿನ ಶೀಲ
ಗುರು ಮಡಿವಾಳನ ಹೋಕರೆ
ಬೋಲೆ ತೊಳಿಯಬೇಕರಿ ಒಳಗಿನವೆಲ್ಲಾ"[೬] ‖ ೩ ‖

ಎಂಬ ಹಾಡಿನಲ್ಲಿಯೂ 'ಅಲ್ಲಾನ ಜಾತ್ರೆ'[೭] ಎಂಬ ಪದದಲ್ಲಿಯೂ ಹಿಂದೂ-ಮುಸ್ಲಿಂ ಮತೀಯರಿಬ್ಬರನ್ನೂ ಸಂಬೋಧಿಸಿ ನುಡಿದಿರುವ ಮಾತುಗಳಲ್ಲಿ ಮತೀಯ ಸಹಿಷ್ಣುತೆಯ ಉಜ್ವಲ ಮಾದರಿಗಳನ್ನು ಕಾಣಬಹುದು[೮] :

"ಗಂಡನ ಸುಖವು ಎನಗೆ ತೋರಿತವ್ವ । ಭವ ನೀಗಿದೆನವ್ವ"
"ಎಂಥ ಕುದುರಿ ಕೊಂಡಕೊಂಡು ನಾ ಬಂದೆ"
"ಹಿಂದಿನ ಪುಣ್ಯ ಫಲದಿಂದ ಬ್ರಾಹ್ಮಣನಾಗಿ
ಹಿಂದಿನ ಗತಿ ಇಂದಿಗಾಗುದೇನು"[೯]

ಎಂದು ಹಾಡಿದವರು ಕಹಿನೂರ ಕೃಷ್ಣಪ್ಪನವರು. ಸತಿ-ಪತಿ ಭಾವದ ಪದಗಳು ಉಳಿದ ತತ್ತ್ವಪದಕಾರರಲ್ಲಿ ಕಾಣಿಸಿಕೊಳ್ಳುವಂತೆ ಇವರಲ್ಲೂ ಇವೆ. ಅನುಭಾವದನುಭವ- ಜಾತಿಯ ಉಲ್ಲೇಖದೊಡನೆ ಸಮನ್ವಯ ಸಾಧನೆ ಮೇಲಿನ ಪದಗಳಲ್ಲಿ ವ್ಯಕ್ತವಾಗಿವೆ. ಶಂಕರಾನಂದ ಶಿವಯೋಗಿಗಳು ಹೀಗೆ ಹಾಡಿದ್ದಾರೆ :

'ಶಿವನೆ ಪಾಲಿಸು ಯನ್ನನೂ ।
ಜಗದೊಡೆಯ ಶಿವಪದವಿಯಿತ್ತು ಮುದವೀ । ಘನದೀ ‖ ಪ ‖

ಶಿವಬ್ರಹ್ಮವಿಷ್ಣುರುದ್ರ । ಇಂದ್ರ ಶಶಿ । ಶಿವಮಹಿಗೆ ಭೋಬೀಜವಾಗಿ ।
ಶಿವಭೋಜ್ಯ ಭೋಕ್ತನೆನಿಸಿ । ಸರ್ವದಲಿ ಶಿವಶಕ್ತಿಯಾಗಿ ಪೊರೆವ ।
ಜಗವ[೩೧]॥

ಶ್ಲೋಕ ; ಬ್ರಹ್ಮಬೀಜಮಿದಂ ಸರ್ವಂ ನಾನಾಯೋನಿಸಮುದ್ಭವಂ ।
ಅನ್ಯಜಾತಿ ವಿಜಾತೀನಾಂ । ವರ್ಣನಾಂ ಕಿಂ ಪ್ರಯೋಜನಂ ।
ಜಾತಿ ಸೂಚಕವೆಂಬ ಮಾತಿಲ್ಲ
ಸುಜ್ಞಾನ ಮಾರ್ಗದಿ । ಜಾತಿ ಕರ್ಮಾದಿಗಳು ಮೊದಲಿಲ್ಲ ॥ ಪ ॥

ಜಾತಿ ಗೋತ್ರಗೆ ಬದ್ಧರಾಗುವ । ಆತ್ಮನರಿಯದ ಕರ್ಮಿಗಲ್ಲದೆ ।
ಜಾತಿಕಲ್ಪನೆಯಳಿದು ಆತ್ಮ । ಜ್ಯೋತಿಯಲಿ ಮುಳುಗಿದ ಮಹಾತ್ಮಗೆ" ॥ ಅ ॥

"ನಮ್ಮ ಕುಲ ಮೇಲೆನುತ ವಂದಿಸಿ
ನಿಮ್ಮ ಕುಲ ಕೀಳೆನುತ ನಿಂದಿಸಿ
ಇಲ್ಲ ಜಾತಿಯು ಸ್ವರ್ಗ–ನರಕದೊಳು
ಇಲ್ಲ ಜಾತಿಯು ತೀರ್ಥಕ್ಷೇತ್ರದೊಳು
ಜಾತಿ ಜೀವಿಗಳಿಂದ ನಿರ್ಮಿತವು"

ಎಂಬ ನುಡಿದ ಶಂಕರಾನಂದ ಶಿವಯೋಗೀಶ್ವರರ ಮಾತುಗಳು ಮನನೀಯವಾಗಿವೆ. 'ಜ್ಞಾನಮಾರ್ಗಿಗಳಿಗೆ ಜಾತಿಸೂಚಕಗಳಿಲ್ಲ'ವೆಂಬುದು ಇಲ್ಲಿ ವ್ಯಕ್ತವಾಗಿರುವ ವಿಶ್ವ ವಿಶಾಲದೃಷ್ಟಿ. ಶಂಕರಾನಂದರ ಹಾಡುಗಳಿಗೆ ರಾಗ–ತಾಳಗಳ ನಿರ್ದೇಶನವಿದೆ. ಅಲ್ಲಿ ಇಲ್ಲಿ ಸಂಸ್ಕೃತ ಮಾತುಗಳನ್ನು ಬಳಸಿರುವುದು ಮಡಿವಂತರಿಗೂ ಅರಿವು ಮೂಡಿಸಲು ಎಂದು ತೋರುತ್ತದೆ.

ಬಾಲಲೀಲಾಮಹಾಂತ ಶಿವಯೋಗೀಶ್ವರರು ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿರುವ 'ಕೈವಲ್ಯ ದರ್ಪಣದ' ಹಾಡುಗಳು ನೇರವಾಗಿವೆ ; ತುಂಬ ಸರಳವಾಗಿವೆ:

"ಎಲೆ ಮಾನವನೆ ಕೇಳು ಸ್ಥಿರವೆಂದು ಸಂಸಾರ
ಮಲದೇಹವನು ನೆಚ್ಚಿ ಕೆಡಬೇಡ ಬರಿದೆ"[೩೧]

ಎಂದು ಸಂಸಾರಲೋಲುಪ್ತರನ್ನು ಬಡಿದೆಚ್ಚರಿಸಲು ಕಾರಣ ಅವರು ವಿರತಿಯ ಸಿರಿಯಾಗಿದ್ದದ್ದು. ಎಲ್ಲ ಮತ ಧರ್ಮದವರ ಅಜ್ಞಾನ–ದುಃಖ–ಮರವೆಗಳನ್ನು ಕಂಡಿವರು ಮರುಗಿದ್ದಾರೆ. "ಬಾಲಲೀಲಾ ಮಹಾಂತ ಶಿವಯೋಗಿಗಳ ದೃಷ್ಟಿ ತುಂಬ ವಿಶಾಲವಾದದ್ದು, ಸರ್ವವ್ಯಾಪಕವಾದುದು. ಧರ್ಮದ ಎತ್ತರವಾದ ವೇದಿಕೆಯ ಮೇಲೆ ನಿಂತು ಇಡೀ ಮಾನವತನೆಯನ್ನೇ ಒಟ್ಟಾಗಿ ನೋಡಬಲ್ಲ ನಿಲುವು ಇವರದು. ಇಲ್ಲಿರುವ ಧಾರ್ಮಿಕ ಸಾಧನೆಯ ಹಿಂದೆ ಮಾನವೀಯ ಭಾವನೆಯ ಏಕತೆ ಇದೆ. ಆ ಎತ್ತರದಲ್ಲಿ ಎಲ್ಲವೂ

ಸಮಾನವಾಗಿ ಗೋಚರವಾಗುತ್ತದೆ. ಅವರ ಉಜ್ವಲವಾದ ವ್ಯಕ್ತಿತ್ವವನ್ನು ಈ ಹಾಡಿನಲ್ಲಿ ನೋಡಬಹುದು"[೩೨];

"ಅವರವರ ಭಕ್ತಿಗೆ ಅವರವರ ಭಾವಕ್ಕೆ
ಅವರವರ ತೆರನಾಗಿ ಇರುತಿಹನು ಶಿವಯೋಗಿ ॥ ಪ ॥

ಇರುವೊಂದು ಕನ್ನಡಿಯ ನೂರಾರು ಜನ ಪಿಡಿಯೆ
ಸರಳಾಗಿ ಅವರವರ ರೂಪು ಕಾಣುವಂತೆ
ಹರಿಯ ಭಕ್ತರಿಗೆ ಹರಿ, ಹರನ ಭಕ್ತರಿಗೆ ಹರ
ನರರೇನು ಭಾವಿಸುವರದರಂತೆ ತೋರುವನು ॥ ೧ ॥

ಮತಭೇದವರು ದುರ್ಮತಿಯಿಂದ ಯತಿವರಗೆ
ಸ್ತುತಿನಿಂದೆ ಮಾಡಿದರೆ ಅವರಿಗೆ ತಿರುಗುವುವು
ಯತಿವರನು ತಾ ತನ್ನ ಪಥದಲ್ಲಿ ಇರುವನು
ಕ್ಷಿತಿಯ ಜನರ ಪಾಪಪುಣ್ಯ ಫಲ ಪರೀಕ್ಷೆ ॥ ೨ ॥

ಕುಲಛಲವ ಹಿಡಿದಿರುವ ಕಲುಕುಮನದವರಲ್ಲಿ
ತಿಳಿವಳಿಕೆ ಶಿವ ಚಂದ್ರನು ಕಾಣುವ ಪರಿಯೆಂತು
ಕುಲಛಲವನತಿಗಳೆದ ತಿಳಿಯ ಮನದವರಲ್ಲಿ
ಸಲೆ ಮಹಂತಲಿಂಗ ಚಿತ್ಸೂರ್ಯ ಕಾಣುವನು ॥ ೩ ॥

ಮುಪ್ಪಿನ ಷಡಕ್ಷರಿಗಳ "ಅವರವರ ಭಾವಕ್ಕೆ, ಅವರವರ ಪೂಜೆಗಂ, ಅವರವರಿಗೆಲ್ಲ ದೇವ ನೀನೊಬ್ಬನೇ" ಎಂಬ ಪದ ಇಲ್ಲಿ ನೆನಪಾಗುತ್ತದೆ. ತತ್ತ್ವಪದಕಾರರ ವಿಚಾರಗಳೇ ಹಾಗೆ ! ಷಟ್ಪದಿ, ಕಂದಪದ್ಯಗಳೂ ಸರಳವಾಗಿಯೂ ಜಾನಪದ ಧಾಟಿಯನ್ನೂ ಧಾರಣೆ ಮಾಡಿರುವುದರಿಂದ ಇವು ಜನಪದ ಗೀತೆಗಳಾಗಿ ಪರಿಣಮಿಸಿದುದರಲ್ಲಿ ಆಶ್ಚರ್ಯವಿಲ್ಲ. ಕೈವಲ್ಯಾನುಭವವನ್ನು ಜನತೆಯತ್ತ ಒಯ್ದುದರಿಂದ ಇವು ಎಲ್ಲ ಮತೀಯರ ಮನಸ್ಸುಗಳನ್ನು ಸೆರೆ ಹಿಡಿದವು.

"ಗುಪ್ತಯೋಗಿಯಂತಿದ್ದ ವರ್ತಕ ವೃತ್ತಿಯ ಬಸಪ್ಪಶೆಟ್ಟಿಯೇ ಮುಂದೆ ಮೈಲಾರ ಬಸವಲಿಂಗ ಶರಣರಾದರು. ಇವರ ಗುರುಗಳು ಚೆನ್ನವೀರ ಸ್ವಾಮಿಗಳು. ಸರ್ವಮತೀಯರಿಗೂ ಅನ್ವಯಿಸುವಂಥ ಇವರ ನೀತಿ-ನಿಷ್ಠೆಯ ಆತ್ಮೀಯ ನಿಲುವು ನೈತಿಕ ಜೀವನದ ಪೂರ್ಣ ಚಿತ್ರವನ್ನು ನೀಡುತ್ತದೆ :

"ಅರುವಿನೆಚ್ಚರವಿಡಿದನ್ಯವ ಮರೆಮುದೆ ಸತ್ಯವಣ್ಣ
ಕರದಿಷ್ಟಲಿಂಗ ನಾಮಾಮೃತಗರೆಮುದೆ ಸತ್ಯವಣ್ಣ
ಪರರ ದ್ರವ್ಯದ ಮೇಲಣಾಶೆಯ ತೊರೆದುದೆ ಸತ್ಯವಣ್ಣ
ತ್ವರಿತತನವೆ ಮಹಪುಣ್ಯವೆಂದರಿದುದೆ ಸತ್ಯವಣ್ಣ"[೩೩]

"ನೋಡಿರಮ್ಮ ಮೈಲಾರಲಿಂಗನ ಜಾತ್ರೆಯಾಗುತಿದೆ"[೩೪] ಎಂಬ ಹಾಡಿನಲ್ಲಿ "ಹೊರಗಡೆಯ ಮೈಲಾರಲಿಂಗನ ಜಾತ್ರೆ ಈ ದೇಹವೆಂಬ ತೇರನ್ನು ಮುಂದಿಟ್ಟುಕೊಂಡು ಹೊರಟ ಜೀವನ ವ್ಯವಸ್ಥೆಯಲ್ಲಿ ಸಾಧಕನ ಚೈತನ್ಯದ ಮಿಡಿತವನ್ನು ಧ್ವನಿಸುತ್ತದೆ.[೩೫]

'ಗೋವಿಂದನಾದಿ ಗೋವಿಂದ' ಎಂಬ ಹಾಡನ್ನೂ, 'ಹರಿಯೆ ಬ್ರಹ್ಮಾಂಡ ಪಿಂಡಾಂಡ ಎಂಬ ಷಟ್ಪದಿಯನ್ನೂ[೩೬] ಗಮನಿಸಿದರೆ ಬಸವಲಿಂಗ ಶರಣರ ಮನೋವೈಶಾಲ್ಯ-ಸಮನ್ವಯ ದೃಷ್ಟಿ ವಿಶದವಾಗುತ್ತದೆ. ತಿಂಥಿಣಿಯ ಮೌನೇಶ್ವರರು ಶರೀಫ್ ಸಾಹೇಬರಂತೆ ಧರ್ಮಸಮನ್ವಯದ ತತ್ತ್ವಪದಕಾರರು. ಇವರು ಕಾಲಜ್ಞಾನದ ಹಾಡುಗಳನ್ನು ರಚಿಸಿದ್ದಾರೆ:

"ದಿಳ್ಳಿನ ಖಾನರ ಅಳಿವಾ ದಿನ ಬಂತು ಸುವ್ವಿ ।
ಬಾಜಾರ ಬಂದಿತು ವಾಜ್ಯ ಉಂಟಾದೀತು !
ಸೂಚಿ ಹೊನ್ನಿಗೊಂದು ಮಾರೀತು ಸುವ್ವಿ ।
ಮರ್ತ್ಯದಾ ಸೋಜಿಗವ ನೋಡೋ ಬಸವಣ್ಣ"
(ಜಾನಪದ ಪರಿಮಳ : ಸಂ : ಬಿ. ಎಸ್. ಕುಲಕರ್ಣಿ ; ಪುಟ–೫೨)

ಒಂದು ಮುಖ್ಯಾಂಶವನ್ನಿಲ್ಲಿ ಉಲ್ಲೇಖಿಸಬೇಕು : ಈ ಬಗೆಯ ಸಾಹಿತ್ಯ ಎರಡು ರೀತಿಗಳಲ್ಲಿ ಬೆಳೆದುಬಂದಿತು : ಮೊದಲನೆಯದು, ವೀರಶೈವ ತಾತ್ತ್ವಿಕ ಹಿನ್ನೆಲೆಯಲ್ಲಿ ತತ್ತ್ವಪದಗಳು ಸೃಷ್ಟಿಯಾದದ್ದು : ಮೈಲಾರ ಬಸವಲಿಂಗ ಶರಣ, ಕಡಕೋಳದ ಮಡಿವಾಳಪ್ಪ, ಬಾಲಲೀಲಾ ಮಹಾಂತ ಶಿವಯೋಗಿಗಳ ತತ್ತ್ವಪದಗಳಿದಕ್ಕೆ ನಿದರ್ಶನ. ಎರಡನೆಯದು, ವೇದಾಂತ ಪರಿಣತಿ ಹಾಗೂ ಅದ್ವೈತಾನುಭವದಲ್ಲಿ ನಿರ್ಮಿತವಾದ ತತ್ತ್ವಪದಗಳು: ಇದಕ್ಕೆ ಶಂಕರಾನಂದ ಶಿವಯೋಗಿ, ಶಿಶುನಾಳ ಶರೀಫರಂಥವರ ತತ್ತ್ವಪದಗಳು ನಿದರ್ಶನ.

ಹೆಚ್ಚು ತತ್ತ್ವಪದಗಳು ಉತ್ತರ ಕರ್ನಾಟಕದ ಜನಜೀವನದೊಡನೆ ಮೈಯ ತೊಗಲಾಗಿ ಹೋದವು. ಈ ತತ್ತ್ವಾನುಭಾವ ಮಾರ್ಗ ಸಮಾನ್ಯ ಜನತೆಯ ಜೀವನ ವಿಧಾನವಾಗಿ ಪರಿಣಮಿಸಿತು. ಸಣ್ಣ ಪುಟ್ಟ ಹಳ್ಳಿ ಹಳ್ಳಿಗಳ ಮತಧರ್ಮ ಭಜನೆಗಳಲ್ಲಿ ತತ್ತ್ವಪದಗಳು ಪ್ರಾಮುಖ್ಯವನ್ನು ಪಡೆದವು ; ಇದನ್ನು ಗಮನಿಸಿದರೆ ತತ್ತ್ವಪದಕಾರರ ಮತೀಯ ಸೌಹಾರ್ದಕ್ಕೂ ಇಂದಿನ ಜನತೆಯ ವಿವೇಚನೆಗೂ ಮತಸಮನ್ವಯ ದೃಷ್ಟಿಗೂ ಉಜ್ವಲವಾದ ನಿದರ್ಶನವಾಗಿದೆ. ಜನಪದ ಸಂಸ್ಕೃತಿಯ ರೂಪಣದಲ್ಲಿ ತತ್ತ್ವಪದಗಳು ಪ್ರಮುಖವಾದ ಪಾತ್ರ ವಹಿಸಿವೆ. ಸಾಮರಸ್ಯದ ನಿಲುವನ್ನು ಬಿತ್ತುತ್ತಾ ತೋರಿಕೆಯ ಬದುಕಿನ ವಿಷಮತೆಯನ್ನು ಬದಿಗೊತ್ತಿ ಸೃಷ್ಟಿಯಾದ ಈ ತತ್ತ್ವಪದಗಳು ಮಾನವ ಜೀವನದ ಸಂಗಾತಿಗಳಾದವು.

"ಕೈವಲ್ಯ ಸಾಹಿತ್ಯ, ಸಾಮಾಜಿಕ ಪರಿವರ್ತನೆಯ ಕರ್ತೃತ್ವ ಶಕ್ತಿಯಿಂದ ಪ್ರೇರಿತವಾದದ್ದಲ್ಲ. ಅದರ ವಲಯ ಸಾಮಾಜಿಕವಲ್ಲ, ಆಧ್ಯಾತ್ಮಿಕ ; ಸಾಮೂಹಿಕವಲ್ಲ, ವೈಯಕ್ತಿಕ. ಅಂತಿಮ ಪರಿಣಾಮದಲ್ಲಿ ಇದು ಸಮಾಜವನ್ನೂ ಸಮೂಹವನ್ನೂ

ಪರಿಣಾಮಗೊಳಿಸುತ್ತದೆಂಬುದು ನಿಜ. ಆದರೆ ಅದು ಆತ್ಮದ ಅನುಸಂಧಾನದಿಂದ ಅವಿರಳವಾಗಿ ನಡೆಯುವ ಆಂತರಿಕ ಕ್ರಿಯೆ. ಇದಕ್ಕೆ ಕಾರಣ, ಕೈವಲ್ಯ ಸಾಹಿತ್ಯವನ್ನು ಕೈಗೆತ್ತಿಕೊಂಡವರೆಲ್ಲಾ ಲೌಕಿಕದ ಗಲಿಬಿಲಿಯಿಂದ ಸಿಡಿದು ಕೈವಲ್ಯಾನುಭವಕ್ಕೇ ತಮ್ಮನ್ನು ಮೀಸಲಾಗಿಟ್ಟುಕೊಂಡವರು; ವೀರವಿರಾಗಿಗಳು ; ವಿರಕ್ತರು ; ಮಠದ ಸ್ವಾಮಿಗಳು. ಇದನ್ನು ಒಂದರ್ಥದಲ್ಲಿ ಸಂನ್ಯಾಸಿಗಳ ಸಾಹಿತ್ಯ ಎಂದು ಕರೆಯಬಹುದು. ಆದರೆ ಈ ಸಂನ್ಯಾಸಿಗಳು ಜನಜೀವನವನ್ನು ಹಸನುಗೊಳಿಸುವ ಅಭೀಪ್ಸೆಯಿಂದ ದೀಪ್ತರಾದ ಪ್ರವೃತ್ತಿಪರ ಸಂನ್ಯಾಸಿಗಳು. ಅವರ ಅನುಭವ, ಅಧ್ಯಾತ್ಮ ಸಾಧನೆಗೆ ಸೀಮಿತವಾದದ್ದು. ಆದರೆ ಲೌಕಿಕವನ್ನು ತಿರಸ್ಕರಿಸಿದ್ದಲ್ಲ, ಲೌಕಿಕದಲ್ಲಿದ್ದು ಅವನ್ನು ಮೀರುವ ಗುಪ್ತಯೋಗವನ್ನು ಅದು ಪುರಸ್ಕರಿಸಿತು.[೩೭] ಹೀಗೆ ತತ್ತ್ವಪದಕಾರರಿಗೆ ಮಾನಸಿಕ, ತಾತ್ತ್ವಿಕ ಹಾಗೂ ಸಾಮಾಜಿಕ ಒತ್ತಡಗಳುಂಟಾದಾಗ ಕನ್ನಡ ಸಾಹಿತ್ಯ ಪರಂಪರೆಯ ಪ್ರತೀಕ–ಪ್ರತಿಮೆ–ರೂಪಕ–ದೃಷ್ಟಾಂತಗಳ ನೆಲೆಯಿಂದಲೇ ಸಾಹಿತ್ಯವನ್ನು ನಿರ್ಮಿಸಿದರು. ಕನ್ನಡ ದೇಸೀ ಛಂದೋವಿಧಾನದ ವೈವಿಧ್ಯಮಯ ಬಳಕೆಯನ್ನು ತತ್ತ್ವಪದಗಳು ಪ್ರಕಟಪಡಿಸುವುದರ ಹಿನ್ನೆಲೆ ಸಮನ್ವಯದ ಮನೋಭಾವನೆಯೇ ಆಗಿದೆ.

“ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ೧೯ನೆಯ ಶತಮಾನದ ಕೊನೆಯ ತಲೆಮಾರಿಗೆ ಒಂದು ವಿಶಿಷ್ಟ ಸ್ಥಾನವಿದೆ. ಅನೇಕ ಸತ್ಪುರುಷರ ಪ್ರಾದುರ್ಭಾವದ ಕಾಲವದು. ಈ ಆಧ್ಯಾತ್ಮಿಕ ಕೃಪಾಛತ್ರದ ಶ್ರೇಯಸ್ಸಿನಲ್ಲಿಯೇ ಒಂದು ರೀತಿಯಿಂದ ಇಂದಿನ ಕನ್ನಡ ಸಾಹಿತ್ಯಕ್ಕೆ ಪ್ರಾರಂಭವಾಯಿತು” ಡಾ॥ ವಿ.ಕೃ. ಗೋಕಾಕರು ಹೇಳಿರುವುದು ಸೂಕ್ತವಾಗಿದೆ.[೩೮] ಪುರೋಹಿತ ಶಾಹಿಯ ಭದ್ರವಾದ ನೆಲೆಯಾಗಿದ್ದ ವರ್ಣ ವ್ಯವಸ್ಥೆಗೆ ಪೂರ್ಣ ವಿರೋಧವಾದ ಈ ಪಂಥ... ಎಲ್ಲ ಮನುಷ್ಯರಿಗೂ, ಸಾಮಾಜಿಕ– ಧಾರ್ಮಿಕ ಸಮಾನತೆಯ ಅಂಶವನ್ನು ಘೋಷಿಸಿದವು.”[೩೯] ‘ಸರ್ವಂ ಖಲಿದ್ವಂ ಬ್ರಹ್ಮಂ’ ಎಂಬ ಉಪನಿಷದ್ವಾಕ್ಯವನ್ನು ಅಕ್ಷರಶಃ ಪರಿಪಾಲಿಸಿದವರು ತತ್ತ್ವಪದಕಾರರು.

ತತ್ತ್ವಪದಗಳು ಸರಳವಾಗಿವೆ ; ಪ್ರಾಮಾಣಿಕವಾದ ಧಾರ್ಮಿಕ ಕಳಕಳಿಗಳಿಂದ ಕೂಡಿವೆ. ಮಾನವೀಯ ಅನುಕಂಪೆಯನ್ನೊಳಗೊಂಡಿವೆ. ಹೀಗಾಗಿ ಮುಮುಕ್ಷುಗಳ ಮನೋರಂಗದಲ್ಲವು ನಾಟುತ್ತವೆ. ಇವನ್ನು ಎತ್ತರದ ಧ್ವನಿಯಲ್ಲಿ ಮಧುರವಾಗಿ ಹಾಡಿದಾಗ ಒಂದು ವಿಶೇಷ ಆಧ್ಯಾತ್ಮಿಕ ವಾತಾವರಣವೊಂದನ್ನು ಸೃಷ್ಟಿಸಿ ಸಹೃದಯರನ್ನು ತನ್ಮಯರನ್ನಾಗಿ ಮಾಡಿಬಿಡುತ್ತವೆ. ತಮ್ಮ ಸುತ್ತಲ ಸಮಾಜದಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಜಾತಿ–ಮತ–ಪಂಥ ಇವುಗಳನ್ನೊಂದೂ ಲೆಕ್ಕಿಸದೇ ಬಹುಆಸ್ಥೆಯಿಂದ ಭಾಗವಹಿಸಿ ಎಲ್ಲರಿಗೂ ‘ಬೆಲ್ಲದ ಹೇರಾಗಿ, ಜನಮನದಲ್ಲಿ ಚಿರಸ್ಥಾಯಿಯಾಗಿ ನೆಲೆಗೊಂಡರು’ ಎಂದು ಶರೀಫರನ್ನು ಕುರಿತು ಡಾ. ಶಿವಾನಂದ ಗುಬ್ಬಣ್ಣವರ ಅವರು ಹೇಳಿರುವ ಮಾತುಗಳು ನಾವು ಪರಿಶೀಲಿಸಿದ ಎಲ್ಲಾ ತತ್ತ್ವಪದಕಾರರಿಗೂ ಅನ್ವಯಿಸುತ್ತವೆ.[೪೦] ‘ಮತೀಯ ಸಹಿಷ್ಣುತೆ’ ಎಂಬ ಶಬ್ದವನ್ನು ಶಬ್ದಗಳಲ್ಲಿ ವ್ಯಾಖ್ಯಾನಿಸುವುದಕ್ಕಿಂತ ಗುರು ಗೋವಿಂದ ಭಟ್ಟ ಮತ್ತು ಶಿಷ್ಯ ಶಿಶುನಾಳ ಶರೀಫರ ಉದಾಹರಣೆಯನ್ನು ಕೊಟ್ಟು ಬಿಡುವುದೊಳ್ಳೆಯದು.

ಕೈವಾರ ನಾರಾಯಣಪ್ಪ, ಬಾಲಲೀಲಾ ಮಹಾಂತ ಶಿವಯೋಗಿ, ಶಿಶುನಾಳ ಶರೀಫ ಕಡಕೋಳದ ಮಡಿವಾಳಪ್ಪ, ಹರಪ್ಪನಳ್ಳಿ ವಿರೂಪನಗೌಡ ಮುಂತಾದವರು ವಿದೇಶೀಯರ ವಸಾಹತುಶಾಹಿ ಪ್ರಭುತ್ವ ಮತ್ತು ಸ್ವದೇಶೀ ವಸಾಹತುಶಾಹಿ ವೈದಿಕ ಸಂಸ್ಕೃತಿ ಹಾಗೂ ಅರಸರ ಬಗ್ಗೆ ತೋರಿಸಿರುವ ಪ್ರತಿಕ್ರಿಯೆ ಗಮನಾರ್ಹವಾದುದು. ಇತರ ಮತೀಯರೊಡನೆ ಸಹಬಾಳ್ವೆ ನಡೆಸುವ ಮುಖಾಂತರ ಐಕ್ಯತೆಯನ್ನು ಸಾಧಿಸಿ ಸ್ವಾತಂತ್ರ್ಯವನ್ನು ಪಡೆಯುವ ಹಂಬಲವಿಲ್ಲಿರುವುದು ಒಂದು ವಿಶೇಷ ವಿಚಾರ.[೪೧] ಅನುಭಾವವು ಮಾನವತೆಯನ್ನು ಒಂದುಗೂಡಿಸುವ ಆಧ್ಯಾತ್ಮಿಕ ಜೀವನದ ಒಂದು ಬಗೆ ; ಸಂತರು ಎಲ್ಲ ಧರ್ಮಗಳಲ್ಲಿ ಸಮಾನವಾಗಿ ಕಾಣಬರುವ ಅಸಾಮಾನ್ಯ ವ್ಯಕ್ತಿಗಳು ಎಂಬುದು ಮೇಲಿನ ನಿರೂಪಣೆಯಿಂದ ವ್ಯಕ್ತವಾಗುತ್ತದೆ. ಕುವೆಂಪು ಅವರ ಕೆಲವು ವಿಚಾರಗಳನ್ನು ಪ್ರಸ್ತಾಪಿಸಿ ಈ ಪ್ರಬಂಧವನ್ನು ಮುಗಿಸಬಹುದು.

ಮತ ಧರ್ಮ ದೇವರುಗಳ ಹೆಸರಿನಲ್ಲಿ ಮುಗ್ಧಜನರನ್ನು ಶೋಷಿಸಲು ಹೊರಟಿರುವ ಈ ಕಾಲದಲ್ಲಿ ಈ ಅನುಭಾವಿಗಳ ಮಾರ್ಗದರ್ಶನ ನಮಗೆ ಅತ್ಯಂತ ಪ್ರಿಯವಾಗಿ ಪ್ರಸ್ತುತವಾಗಿ ಕಂಡುಬರುತ್ತದೆ. ಎಲ್ಲ ಮತಗಳ ಅಂತಿಮ ಉದ್ದೇಶ ಪರಮಾತ್ಮ ಸಾಕ್ಷಾತ್ಕಾರ ಮತ್ತು ಆ ಪರಮಾತ್ಮನಲ್ಲಿ ಜೀವಾತ್ಮ ಸಮರಸಗೊಳ್ಳುವುದೇ ಆಗಿದೆ. "ಮತಾಂಧತೆಯ ವಿಷಯವನ್ನು ತನ್ನ ಹೃದಯದಲ್ಲಿ ತುಂಬಿಕೊಂಡ ಭಾರತವನ್ನು ಮಾನಸಿಕ ದಾಸ್ಯದಿಂದ ವಿಮೋಚನೆಗೊಳಿಸಬೇಕಾದದ್ದು ಎಲ್ಲಾ ಭಾರತೀಯರ ಕರ್ತವ್ಯವಾಗಿದೆ" ಎಂಬ ವಿಮರ್ಶಕರ ಮಾತು ತುಂಬ ವಿವೇಕದಿಂದ ಕೂಡಿದೆ :

"ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕಹಿತಕೆ
ಆ ಮತದ ಈ ಮತದ ಹಳೆ ಮತದ ಸಹವಾಸ
ಸಾಕಿನ್ನು ಸೇರಿರೈ ಮನುಜಮತಕೆ
ಓ, ಬನ್ನಿ ಸೋದರರೆ ವಿಶ್ವಪಥಕೆ"[೪೨]

ಕುವೆಂಪು ಅವರ ಈ ಮಾತುಗಳು ತತ್ತ್ವಪದಕಾರರ ಮಾತುಗಳಿಗೆ ಸಂವಾದಿಯಾಗಿವೆ. ಇವರೆಲ್ಲರೂ ಮತದ ಬಂಧನದಿಂದ ಪಾರಾಗಿದ್ದರಿಂದಲೇ ವಿಶ್ವಮಾನವರಾದದ್ದು. ಮತವನ್ನು ತೊರೆದು ಆಧ್ಯಾತ್ಮಪಥವನ್ನು ಸ್ವೀಕರಿಸಿದ ಪ್ರತಿಯೊಬ್ಬ ವ್ಯಕ್ತಿಯೂ ವಿಶ್ವಮಾನವನಾಗುತ್ತಾನೆ. ಆಧ್ಯಾತ್ಮ ಕಾಲ-ದೇಶಾತೀತವಾದದ್ದು. ಅದು ದೇಶದಿಂದ ದೇಶಕ್ಕೆ ಜನಾಂಗದಿಂದ ಜನಾಂಗಕ್ಕೆ ವ್ಯತ್ಯಾಸವಾಗಲಾರದು."[೪೩] ರಾಷ್ಟ್ರ ಕಲ್ಯಾಣದ ದೃಷ್ಟಿಯಿಂದ ವರ್ಣಸಂಘರ್ಷಕ್ಕಿಂತ ವರ್ಣಸಮನ್ವಯವೇ ಉತ್ತಮೋತ್ತಮ ಮಾರ್ಗವೆಂಬ ಸತ್ಯ ಕುವೆಂಪು ಅವರ ಮಾತುಗಳಿಂದ ವ್ಯಕ್ತವಾಗುತ್ತದೆ.

'ಸಮಾಜವಾದದ-ಪ್ರಜಾಸತ್ತೆಯ ದೃಷ್ಟಿ ತತ್ತ್ವಪದಕಾರರಲ್ಲಿದೆ ಎಂಬುದನ್ನು 'ವಸಾಹತುಶಾಹಿ ಹಿನ್ನೆಲೆಯಲ್ಲಿಯೂ ಸ್ಪಷ್ಟಪಡಿಸಿಕೊಳ್ಳಬಹುದು. ೧೮-೧೯ನೆಯ

ಶತಮಾನದ ರಾಜಕೀಯ ಅಸ್ಥಿರತೆ ಹಾಗೂ ಅರಾಜಕತೆ, ದಾರಿದ್ರ್ಯ, ಕ್ಷಾಮ- ಡಾಮರಗಳು, ಸಮರ, ಅಂತಃಕಲಹ, ಮಾನಸಿಕ ವೇದನೆ, ಪಾರತಂತ್ರ್ಯದ ಪಿಡುಗಿನಂಥ ಹಲವು ಹತ್ತು ಸಂಗತಿಗಳು, ವಸಾಹತುಶಾಹಿ ನೆಲಕಚ್ಚುತ್ತಿದ್ದ–ಸ್ಥಿತ್ಯಂತರದ – ಪರಿಣಾಮಗಳಲ್ಲದೆ ಬೇರೆಯಲ್ಲ. ಉತ್ತರ ಕರ್ನಾಟಕದ ಅಂದಿನ ತತ್ತ್ವಪದಕಾರರಿಗೆ ಈ ಅನಿಷ್ಟಗಳೇ ಕೃತಿಸೃಷ್ಟಿಗೆ ಮೂಲಪ್ರೇರಣೆಯಾಗಿದ್ದವು. ಐತಿಹಾಸಿಕ ಹಾಗೂ ಇನ್ನಿತರ ಸಾಮಾಜಿಕ-ಸಾಂಸ್ಕೃತಿಕ ಕಾರಣಗಳ ಒತ್ತಡಕ್ಕೆ ಸಿಲಿಕಿದ ತತ್ತ್ವಪದಕಾರರು ವ್ಯವಸ್ಥೆಯೊಡನೆ ರಾಜಿ ಮಾಡಿಕೊಳ್ಳದೆ ಅದರಿಂದ ಸಿಡಿದು ನಿಂತದ್ದು ಸಾಮಾನ್ಯವಾದ ವಿಚಾರವೇನಿಲ್ಲ.

**ಅಡಿ ಟಿಪ್ಪಣಿಗಳು :**

ಕರ್ನಾಟಕ ಸಾಹಿತ್ಯ ಅಕಾಡೆಮಿ ವತಿಯಿಂದ ೬-೬-೧೯೯೩ರಂದು ಧಾರವಾಡ ಜಿಲ್ಲೆಯ ಹಾವೇರಿಯಲ್ಲಿ ನಡೆದ 'ಕನ್ನಡತತ್ತ್ವಪಕದಾರರು' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

೧. ಧ್ಯಾನಶೀಲ ಸಾಹಿತ್ಯ, ಧರ್ಮ ನಿರಪೇಕ್ಷಕ ಸಾಹಿತ್ಯ, ಸಂತ ಸಾಹಿತ್ಯ, ಅದ್ವೈತ ಸಾಹಿತ್ಯ, ಆಶುಕವಿ ಸಾಹಿತ್ಯ, ಚಾರಣ ಸಾಹಿತ್ಯ, ಭಜನೆಯ ಹಾಡುಗಳ ಸಾಹಿತ್ಯ, ಜನಪ್ರಿಯ ಸಾಹಿತ್ಯ, ಸನ್ಯಾಸಿಗಳ ಸಾಹಿತ್ಯ, ಅವಧೂತ ಪಂಥೀಯ ಸಾಹಿತ್ಯ ಎಂಬಿವೂ ಸಂವಾದಿ ಶಬ್ದಗಳು.

೨. ಕರ್ನಾಟಕ ಜಾನಪದ : ಪುಟ ; ೩೬-೪೯. ಪ್ರೊ. ಕಿ. ರಂ. ನಾಗರಾಜ ಅವರ 'ಜಾನಪದ ಮತ್ತು ಆಧುನಿಕ ಸಾಹಿತ್ಯ' ಎಂಬ ಲೇಖನ ನೋಡಿ.

೩. ನಿಜಗುಣ ಶಿವಯೋಗಿ : ಕೈವಲ್ಯ ಪದ್ಧತಿ ; ಕ್ರಿ.ಶ.ಸು. ೧೫೦೦. ಇವರು ಮೊದಲಿಗರು.

೪. ನವಲಗುಂದದ ನಾಗಲಿಂಗಪ್ಪ, ಮೈಲಾರ ಬಸವಲಿಂಗಶರಣ, ತಿಂಥಿಣಿಯ ಮೌನೇಶ್ವರ, ಶಂಕರದಾಸ, ಭವತಾರಕ, ಸಾಲೋಟಗಿ ಶಿವಯೋಗಿ, ಐಹೊಳೆಯ ವೆಂಕಟೇಶ, ಮುಪ್ಪಿನ ಮುನಿ, ಘಟ್ಟಹಳ್ಳಿ ಆಂಜನಪ್ಪ, ಕಡಲೆವಾಳ ಸಿದ್ದಪ್ಪ, ಹುಲಗಪ್ಪ, ಶ್ರೀನಿವಾಸದಾಸ, ಶ್ರೀನಿವಾಸ ತೀರ್ಥ, ಬೆರಟೂರೇಶ, ಗಿರಿಮಲ್ಲೇಶ, ಶ್ರೀ ಘನಮಠ ಶಿವಯೋಗಿ,ಪಂಚಾಕ್ಷರಿ ನೀರಲಕೇರಿ, ನರಸಿಂಹ, ನಂದ್ಯಾಳ ಸಂಗ, ದೊಡ್ಡಪೇಟೆ ಬಸವ, ಚಿದಾನಂದ ಅವಧೂತ, ಸಿರಸಿಂಗಿಯ ಬಲಭೀಮ, ಕೆಸ್ತೂರದೇವ, ಗುರು ಮಹಾಲಿಂಗ, ಡಾ. ರುಕ್ನುದ್ದೀನ್ ಸಾಹೇಬಕಲ್ಕಂಬ, ಗುರುಬಸವವಾರ್ಯ, ಸರ್ಪಭೂಷಣ ಶಿವಯೋಗಿ, ನಿಂಬರ್ಗಿಯ ಸಂತ, ಮೈಸೂರು ವೇದಾಂತ ಶಿವರಾಮಶಾಸ್ತ್ರಿ, ಭಗವಂತಪ್ಪ, ಪೀರಸಾಹೇಬ ಮುಪ್ಪಿನ ಷಡಕ್ಷರಿ. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ; ಸಂ ೫ ರಲ್ಲಿರುವ ಪ್ರೊ. ಕಿ. ರಂ. ನಾಗರಾಜ ಅವರ 'ಅನುಭಾವ ಸಾಹಿತ್ಯ' ಎಂಬ ಲೇಖನವನ್ನೂ ನೋಡಿ.

೫. ಶರೀಫ಼ರು ತೆಲುಗು, ಉರ್ದು, ಮರಾಠಿಯಲ್ಲಿಯೂ, ಕೈವಾರ ನಾರಾಯಣಪ್ಪನವರು ತೆಲುಗು ಭಾಷೆಯಲ್ಲಿಯೂ ಕೃತಿಗಳನ್ನು ರಚಿಸಿದ್ದಾರೆ. ಕನ್ನಡದಲ್ಲಂತಲೂ ಇದ್ದೇ ಇದೆ.

೬. R.D. Ranade, Pathway to God in Marathi Literature, Preface.

೭ ಆರ್.ಡಿ. ರಾನಡೆ ; ಕನ್ನಡ ಸಂತರ ಪರಮಾರ್ಥ ಪಥ : ಪುಟ ೨೫೬–೨೫೭.

೮. ಅದೇ ಪುಟ : ೨೫೯.

೯. ಅದೇ : ಪುಟ ೨೦೩.

೧೦. ಶಿಶುನಾಳ ಶರೀಫ಼ರ ಗೀತೆಗಳು : ಪುಟ ೨೭೬, ಸಂಖ್ಯೆ ೨೮೧.

೧೧. ಅದೇ : ಪುಟ ೨೨೭.

೧೨. ಅದೇ ಪ್ರಸ್ತಾವನೆ : ಪುಟ ೫೧.

೧೩. ಕನ್ನಡದಲ್ಲಿ ಕೈವಲ್ಯ ಸಾಹಿತ್ಯ : ಪುಟ ೮೨–೮೩.

೧೪. ಜಾತಿ ಭ್ರಮೆ, ವರ್ಣ ಭ್ರಮೆ, ಆಶ್ರಮ ಭ್ರಮೆ, ಕುಲಭ್ರಮೆ, ಗೋತ್ರ ಭ್ರಮೆ, ನಾಮಭ್ರಮೆ ಎಂಬಿವು ಷಟ್‌ಭ್ರಮೆಗಳು.

೧೫. ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು : ಪುಟ ೭–೮.

೧೬. ಅದೇ : ಪುಟ ೮.

೧೭ ನೋಡಿ 'ಕನ್ನಡ ಸಂತರ ಪರಮಾರ್ಥ ಪಥ'.

೧೮. ಪ್ರತಿಮೆಗಳ ಬಳಕೆಯನ್ನು ಗಮನಿಸಬೇಕು.

೧೯. ಉರ್ದು, ಕನ್ನಡ ತೆಲುಗುಗಳಲ್ಲಿ ಪದ್ಯಗಳು ರಚನೆಯಾಗಿವೆ.

೨೦. ನಾರಾಯಣಪ್ಪನವರು ಕನ್ನಡ–ತೆಲುಗು ಭಾಷೆಗಳೆರಡರಲ್ಲಿಯೂ ಕೀರ್ತನೆ–ಶತಕಗಳನ್ನು ರಚಿಸಿದ್ದಾರೆ.

೨೧. ಶ್ರೀ ಯೋಗಿ ನಾರೇಯಣ ಯತೀಂದ್ರ ವಿರಚಿತ ಕಾಲಜ್ಞಾನ ಮತ್ತು ನಾದ ಬ್ರಹ್ಮಾನಂದ ನಾರೇಯಣ ಕವಿಶತಕ (ಮೂಲ ಮತ್ತು ಕನ್ನಡ ಅನುವಾದ) ಪುಟ ೧೬೯, ಪದ್ಯ ೨೨೨.

೨೨. ನೋಡಿ : ಪ್ರಕಾಶಕರ ಬಿನ್ನಹ.

೨೩. 'ಕಡಕೋಳದ ಮಡಿವಾಳೇಶ್ವರ ವಿರಚಿತ ಸ್ವರ ವಚನಗಳು' ಪುಟ ೫೧.

೨೪. ಅದೇ : ಪುಟ ೪೦

೨೫. ಅದೇ : ಪುಟ ೩೨.

೨೬ ಅದೇ : ಪುಟ ೧೯.

೨೭. ಶ್ರೀ ಕಡಕೋಳ ಮಡಿವಾಳೇಶ್ವರ ತತ್ತ್ವಪದಗಳು : ಭಾಗ ೧, -ಪುಟ ೬೮.

೨೮. ಈ ಸಂದರ್ಭದಲ್ಲಿ ಡಾ. ರುಕ್ನುದ್ದೀನ ಸಾಹೇಬ ಕಲ್ಕಂಬ ಇವರನ್ನು ಸ್ಮರಿಸಿಕೊಳ್ಳಬೇಕು. ಶ್ರೀ ಕರಿಘೂಳೇಶ್ವರರನ್ನು ಗುರುಗಳನ್ನಾಗಿ ಸ್ವೀಕರಿಸಿ ಆಧ್ಯಾತ್ಮ ತತ್ತ್ವಗಳಿಂದೊಡಗೂಡಿದ ಭಕ್ತಿಗೀತೆಗಳನ್ನು ರಚಿಸಿದ್ದಾರೆ ; ನೋಡಿ 'ಸ್ವಯಂ ಜ್ಯೋತಿ' ೧೯೮೯. ಪ್ರ : ವಾಡಿ. ಚಿತ್ತಾಪೂರ ತಾಲ್ಲೂಕು.

೨೯. ಶ್ರೀ ಕಡಕೋಳ ಮಡಿವಾಳೇಶ್ವರ ತತ್ತ್ವಪದಗಳು : ಭಾಗ -೧. ಪುಟ ೬೨-೭೧.

೩೦. ಕೈವಲ್ಯ ನವನೀತ : ಪುಟ ೧೩.

೩೧. ಭಕ್ತಿಗೀತೆಗಳು : ೮೬.

೩೨. ಕನ್ನಡದಲ್ಲಿ ಕೈವಲ್ಯ ಸಾಹಿತ್ಯ : ಪುಟ ೯೪.

೩೩. ಮೈಲಾರ ಬಸವಲಿಂಗ ಶರಣರ ಸಮಗ್ರ ಸಾಹಿತ್ಯ : ಪುಟ ೨೩೯.

೩೪. 'ಅಲ್ಲನ ಜಾತ್ರೆ' ಎಂಬ ಚೆನ್ನೂರ ಜಲಾಲಸಾಬರ ಪದದೊಡನೆ ಈ ಪದವನ್ನು ಹೋಲಿಸಿ ನೋಡಬೇಕು.

೩೫. ಕನ್ನಡದಲ್ಲಿ ಕೈವಲ್ಯ ಸಾಹಿತ್ಯ : ಪುಟ ೧೦೪.

೩೬ ಮೈಲಾರ ಬಸವಲಿಂಗ ಶರಣರ ಸಮಗ್ರ ಸಾಹಿತ್ಯ : ಪುಟ ೧೮೭ ಮತ್ತು ೨೭೧. ಗುರು ಕರುಣ ತ್ರಿವಿಧಿ, ಷಟ್‌ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ, ಷಟ್‌ಸ್ಥಲ ಜ್ಞಾನಾನುಭಾವ, 'ಲಿಂಗ ಪೂಜಾ ವಿಧಾನ', 'ಶಿವಾನುಭವದರ್ಪಣ', 'ಭಕ್ತಿ ಬಿನ್ನಹ ದಂಡಕ', ಮೈಲಾರ ಬಸವಲಿಂಗ ಶರಣರ ಕೃತಿಗಳು. - ಅವರ 'ಸಮಗ್ರ ಸಾಹಿತ್ಯ' ಕೃತಿಯಲ್ಲಿ ಇವು ಇವೆ.

೩೭ 'ಕನ್ನಡದಲ್ಲಿ ಕೈವಲ್ಯ ಸಾಹಿತ್ಯ' : ಪುಟ ೧೪೩.

೩೮. ಉತ್ತರೋತ್ತರ ಕಾಲೀನ 'ಹರಿದಾಸರು' ಮತ್ತು 'ಅನುಭಾವ ಕವಿಗಳು' ಪುಟ ೫೫-೬೮. ೪೧-೪೭ ಮತ್ತು ಕನ್ನಡ ಸಂತರ ಪರಮಾರ್ಥ ಪಥ ಎಂಬ ಗ್ರಂಥಗಳನ್ನು ಹೆಚ್ಚಿನ ವಿವರಗಳಿಗಾಗಿ ನೋಡಿ.

೩೯. ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ, ಪುಟ ೮೨.

೪೦. ಶಿಶುನಾಳ ಶರೀಫರ ಗೀತೆಗಳು : ಪ್ರಸ್ತಾವನೆ ನೋಡಿ.

೪೧. ಶ್ರೀ ಯೋಗಿ ನಾರೇಯಣ ಯತೀಂದ್ರ ವಿರಚಿತ ಕಾಲಜ್ಞಾನ ಮತ್ತು ನಾದ ಬ್ರಹ್ಮಾನಂದ ನಾರೇಯಣ ಕವಿ ಶತಕ : ಪ್ರಚಂಡ ನಾರೇಯಣ ಕವಿ ಪದ್ಯಮುಲು ಎಂಬ ಭಾಗದಲ್ಲಿ ಪುಟ ೨೭--೩೬ರಲ್ಲಿ ಬರುವ ೧-೧೬ ಪದ್ಯಗಳನ್ನು ನೋಡಿ.

೪೨. ಕೋಗಿಲೆ ಮತ್ತು ಸೋವಿಯಟ್ ರಷ್ಯಾ : ಪುಟ ೨೩-೨೪.

೪೩. 'ವಿಚಾರ ಕ್ರಾಂತಿಗೆ ಕುವೆಂಪು ಕರೆ' : ಪುಟ ೩೨.

**ಸಹಾಯಕ ಗ್ರಂಥ ಸೂಚಿ :**

೧. ಕನ್ನಡ ಸಂತರ ಪರಮಾರ್ಥ ಪಥ : ಮೂಲ : ಡಾ. ಆರ್. ಡಿ. ರಾನಡೆ, ಅನು: ಎಂ.ಎಸ್. ದೇಶಪಾಂಡೆ, ೧೯೬೨. ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಕನ್ನಡದಲ್ಲಿ ಕೈವಲ್ಯ ಸಾಹಿತ್ಯ : ಡಾ. ಎಚ್. ತಿಪ್ಪೇರುದ್ರಸ್ವಾಮಿ, ೧೯೮೩ ಪ್ರ: ಚಿತ್ತರಗಿ ಶ್ರೀ ವಿಜಯ ಮಹಾಂತೇಶ್ವರ ಧರ್ಮಪ್ರಸಾರಕ ಮಂಡಲ, ಇಲಕಲ್ಲ.

೩. ಶಿಶುನಾಳ್ ಶರೀಫ಼್ ಸಾಹೇಬರು : ಡಾ. ಶಿವಾನಂದ ಗುಬ್ಬಣ್ಣವರ, ೧೯೮೯ ಪ್ರ : ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ-ಬೆಂಗಳೂರು.

೪. ಕೆಸ್ತೂರ ದೇವರ ಸ್ವರ ವಚನಗಳು. ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.

೫. ಶ್ರೀ ಶಂಕರಾನಂದ ಯೋಗೀಶ್ವರ ವಿರಚಿತ 'ಕೈವಲ್ಯ ನವನೀತವು' : ಪರಿಶೋಧಕರು': ಬ್ರಹ್ಮ ಶ್ರೀ ಶಿವರಾಮಶಾಸ್ತ್ರಿಗಳು : ೧೯೯೨.

೬ ಅ) ಬಸವಪಥ : ಸಂಪುಟ ೧೪, ಸಂಚಿಕೆ ೭, ಅಕ್ಟೋಬರ್-೧೯೯೨. ಆ) ಬಸವಪಥ : ಸಂಪುಟ ೧೪, ಸಂಚಿಕೆ ೧೧. ಫೆಬ್ರವರಿ ೧೯೯೩. ಪ್ರಧನ ಸಂಪಾದಕರು : ಪ್ರೊ. ವಿರೂಪಾಕ್ಷಪ್ಪ, ಸಂ : ಪ್ರೊ. ಆರ್. ರಾಚಪ್ಪ, ಪ್ರ: ಬಸವ ಸಮಿತಿ, ಬಸವೇಶ್ವರ ವೃತ್ತ, ಬೆಂಗಳೂರು-೯.

೭ ಭಕ್ತಿಗೀತೆಗಳು : ಸಂ : ಜಿ.ಪಿ. ಗುರುಪಾದ ದೇವರ ಮಠ, ೧೯೫೨. ಧಾರವಾಡ.

೮. ವಚನ ಚಿಂತನ : ಸಂ : ಗೊ. ರು. ಚನ್ನಬಸಪ್ಪ. ೧೯೯೨ ಪ್ರ : ಶ್ರೀ ಸರ್ಪಭೂಷಣ ಮಠ, ಕೆಂಪೇಗೌಡ ವೃತ್ತ, ಬೆಂಗಳೂರು-೧.

೯. ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ : ಸಂ : ಡಾ. ಜಿ. ಎಸ್. ಶಿವರುದ್ರಪ್ಪ, ೧೯೮೯. ಪ್ರ : ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೨.

೧೦. ಧರ್ಮದೀಪ್ತಿ : ಸಂಸ್ಮರಣ ಸಂಚಿಕೆ : ೧೯೮೨. ಸಂ : ಟಿ.ಆರ್. ಮಹಾದೇವಯ್ಯ ಪ್ರ : ನರಗಂದ ದೇವರ ಮಠ ಮತ್ತು ತೋಟದ ದೇವರ ಮಠ, ಅರಳೇಪೇಟೆ. ಬೆಂಗಳೂರು-೫೩.

೧೧. ಹೊಸಗನ್ನಡದ ಅರುಣೋದಯ : ಡಾ. ಶ್ರೀನಿವಾಸ ಹಾವನೂರ, ೧೯೭೪, ಪ್ರ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೧೨. ಹೊಸಗನ್ನಡ ಸಾಹಿತ್ಯದ ಉದಯಕಾಲ : ಡಾ. ರಾ. ಯ. ಧಾರವಾಡಕರ, ೧೯೭೫, ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೩. ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ : ಡಾ. ಬಸವರಾಜ ಕಲ್ಗುಡಿ, ೧೯೮೮, ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

೧೪. ಕೈವಾರದ ಯತೀಂದ್ರರಾದ ಶ್ರೀ ಯೋಗಿ ನಾರೇಯಣ ತಾತಯ್ಯನವರ ಜೀವನ ಚರಿತ್ರೆ ಮತ್ತು ಕೈವಾರ ಕ್ಷೇತ್ರ ಮಹಿಮೆ : ೧೯೭೦. 'ಕೈಪು' ಲಕ್ಷ್ಮೀನರಸಿಂಹಶಾಸ್ತ್ರಿ.

೧೫. ಶ್ರೀ ಯೋಗಿ ನಾರೇಯಣ ಯತೀಂದ್ರ ವಿರಚಿತ ಕಾಲಜ್ಞಾನ ಮತ್ತು ನಾದ ಬ್ರಹ್ಮಾನಂದ ನಾರೇಯಣ ಕವಿಶತಕ : ೧೯೯೨. ಪ್ರ : ಶ್ರೀ ಯೋಗಿ ನಾರೇಯಣ ಯತೀಂದ್ರರ ಆಶ್ರಮ ಟ್ರಸ್ಟ್, ಕೈವಾರ, ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ.

೧೬. ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ : ೧೯೮೩. ಎ.ಎಸ್. ಜಯರಾಂ, ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

೧೭. ಕೈವಲ್ಯ ದರ್ಪಣ : ಶ್ರೀ ನಿ. ಪ್ರ. ಬಾಲಲೀಲಾ ಮಹಾಂತ ಶಿವಯೋಗಿ ಸಂ. ಪ್ರೊ. ಶಿ. ಶಿ. ಬಸವನಾಳ : ೧೯೫೨, ಪ್ರ : ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ.

೧೮. ಕರ್ನಾಟಕ ಜಾನಪದ : ಸಂ : ಡಾ.ಜಿ.ಎಸ್. ಶಿವರುದ್ರಪ್ಪ, ೧೯೮೧, ಪ್ರ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೧೯. ಶರಣರ ಅನುಭಾವ ಸಾಹಿತ್ಯ : ಡಾ. ಎಚ್. ತಿಪ್ಪೇರುದ್ರಸ್ವಾಮಿ, ೧೯೬೩ ಪ್ರ : ಡಿ.ವಿ.ಕೆ. ಮೂರ್ತಿ, ಮೈಸೂರು-೪.

೨೦. ಕರ್ನಾಟಕ ಕವಿ ಚರಿತ್ರೆ : ಸಂ. ೩, ೧೯೭೪, ಆರ್. ನರಸಿಂಹಾಚಾರ್, ಪ್ರ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮.

೨೧. ಶಿಶುನಾಳ ಶರೀಫರ ಗೀತೆಗಳು (ಬರಕೋ ಪದ ಬರಕೋ) ೧೯೮೫, ಸಂ: ಡಾ. ಶಿವಾನಂದ ಗುಬ್ಬಣ್ಣವರ, ಪ್ರ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೨.

೨೨. ಕೈವಲ್ಯ ಪದ್ಧತಿ : ನಿಜಗುಣ ಶಿವಯೋಗಿ, ೧೯೮೫. ಸಂ : ಪಂಡಿತ ನಾಗಭೂಷಣ ಶಾಸ್ತ್ರಿಗಳು, ಶಾಸ್ತ್ರೀ ಮಠ, ಪ್ರ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು-೨.

೨೩. ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ : ಸಂ: ಡಾ. ಸಿ. ಯು. ಮಂಜುನಾಥ್, ಬಿ.ಸಿ. ವೀರಪ್ಪ, ೧೯೯೩. ಪ್ರ : ಶ್ರೀ ಸರ್ಪಭೂಷಣ ಶಿವ ಯೋಗೀಶ್ವರಮಠ, ಕೆಂಪೇಗೌಡ ವೃತ್ತ, ಬೆಂಗಳೂರು-೨.

೨೪. ಉತ್ತರೋತ್ತರ ಕಾಲೀನ ಹರಿದಾಸರು ಮತ್ತು ಅನುಭಾವಿ ಕವಿಗಳು : ಪ್ರೊ. ಎಂ. ವಿ. ಸೀತಾರಾಮಯ್ಯ, ೧೯೯೮. ಪ್ರ : ರಾಘವ ಪ್ರಕಾಶನ ಬೆಂಗಳೂರು-೧೯.

೨೫. 'ಕಲ್ಲು ಸಕ್ಕರೆ ಕೊಳ್ಳಿರೋ' : ಸಂ : ಡಾ. ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ, ೧೯೭೯. ಪ್ರ : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೨೬. ಶಿವದಾಸ ಗೀತಾಂಜಲಿ : ಸಂ : ಡಾ. ಎಲ್. ಬಸವರಾಜು, ಮೈಸೂರು.

೨೭ ಶ್ರೀ ಕಡಕೋಳ ಮಡಿವಾಳೇಶ್ವರ ತತ್ತ್ವಪದಗಳು ಭಾಗ-೧, ೧೯೮೫, ಸಂಗ್ರಹಕಾರರು : ಶಿವಪುತ್ರಪ್ಪ ಮಹಾಂತೇಶ್ವರ, ಸಂ : ಎಸ್. ಎನ್. ಭಾವಿಕಟ್ಟೆ ಪ್ರ : ಶರಣ ಪ್ರಕಾಶನ, ಕಲಬುರ್ಗಿ.

೨೮. ಸ್ವಯಂಜ್ಯೋತಿ : ಡಾ. ರುಕ್ನುದ್ದೀನ ಸಾಹೇಬ ಕಲ್ಕಂಬ. ೧೯೮೯.

ಪ್ರ : ವಾಡಿ, ತಾ॥ ಚಿತ್ತಾಪೂರ. ಜಿ॥ ಕಲಬುರ್ಗಿ.

೨೯. "ಕಡಕೋಳದ ನಾ ಗುಲಾಮ" : ಭಾಗ ೧-೨, ಪ್ರ ; ಶರಣ ಪ್ರಕಾಶನ, ಕಲಬುರ್ಗಿ.

೩೦. 'ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು : ಸಂ : ಡಾ. ಮಲ್ಲಿಕಾರ್ಜುನ ಲಠ್ಠೆ, ೧೯೮೨, ಪ್ರ ; ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟಾದಾರ್ಯ ಸಂಸ್ಥಾನ ಮಠ, ಗದಗ-೫೮೨ ೧೦೧.

೩೧. ಮೈಲಾರ ಬಸವಲಿಂಗ ಶರಣರ 'ಸಮಗ್ರ ಸಾಹಿತ್ಯ' : ಸಂ : ಡಾ. ಎಸ್. ವ್ಹಿ. ಅಯ್ಯನಗೌಡರ ೧೯೮೪. ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ, ಗದಗ.

೩೨. ಜಿಗುಣಿ ಮರಳದೇವರ ಕೃತಿಗಳು : ಸಂ. ಡಾ. ಎಸ್. ವಿದ್ಯಾಶಂಕರ, ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ ೧೯೮೩.

೩೩. ಜಾನಪದ ಪರಿಮಳ : ಪ್ರಧಾನ ಸಂಪಾದಕರು ; ಡಾ. ಬಿ.ಎಸ್. ಕುಲಕರ್ಣಿ, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೪.

೩೪. ವಿಚಾರ ಕ್ರಾಂತಿಗೆ ಕುವೆಂಪು ಕರೆ : ಡಾ. ದೇ. ಜವರೇಗೌಡ, ೧೯೯೩, ಪ್ರ ; ಭಾರತ ಜನಜ್ಞಾನ ವಿಜ್ಞಾನ ಜಾಥ ಕೇರಾಫ್ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಭಾರತೀಯ ವಿಜ್ಞಾನ ಮಂದಿರದ ಆವರಣ, ಬೆಂಗಳೂರು-೫೬೦೦೧೨.

೩೫. ಕೂಡಲೂರು ಬಸವಲಿಂಗ ಶರಣರ ಸ್ವರವಚನಗಳು : ಸಂ : ಶಾಂತರಸ, ೧೯೮೩. ಪ್ರ : ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.

೩೬. Pathway to God in Marathi Literature : Dr. R.D. Ranade.

೩೭. Pathway to God in Kannada Literature : Dr. R.D. Ranade, 1960, Bharatheeya Vidya Bhavan, Bombay.

೩೮. ಕೋಮು ಸಮಸ್ಯೆ ಮತ್ತು ಆಧುನಿಕ ಕನ್ನಡ ಸಾಹಿತ್ಯ ; ವಿವಿಧ ಲೇಖಕರು, ಸಂ : ಬರಗೂರು ರಾಮಚಂದ್ರಪ್ಪ, ೧೯೯೨, ಪ್ರ : ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು-೨.

೩೯. ಶಿಶುನಾಳ ಷರೀಫ಼ ಸಾಹೇಬರ ಗೀತೆಗಳು: ಸಂ : ಡಾ. ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ, ೧೯೮೮. ಪ್ರ ; ಕ್ಷಮಾ ಪ್ರಕಾಶನ, ಬನಶಂಕರಿ ಎರಡನೆಯ ಹಂತ, ಬೆಂಗಳೂರು-೭೦.

೪೦. ಕಬೀರ್ : ಪಾರಸನಾಥ ತಿವಾರಿ, ೧೯೬೮. ಪ್ರ ; ನ್ಯಾಶನಲ್ ಬುಕ್ ಟ್ರಸ್ಟ್ ಆಫ್ ಇಂಡಿಯಾ, ನವದೆಹಲಿ.

೪೧. ಶ್ರೀ ಕಡಕೋಳ ಮಡಿವಾಳ ಯೋಗಿ ವಿರಚಿತ ಕೈವಲ್ಯ ವಾಕ್ಯಾಮೃತ : ಸಂ : ಸಿದ್ಧರಾಮ ಶಿವಾಚಾರ್ಯ, ೧೯೮೧. ಕಾರ್ತಿಕೇಯ ಪ್ರಕಾಶನ, ಕಲಬುರ್ಗಿ.

೪೨. ಶ್ರೀ ಮುಪ್ಪಿನ ಷಡಕ್ಷರಿ ಸ್ವಾಮಿಗಳ ಸುಬೋಧಸಾರ : ಸಂ. ಹರ್ಡೇಕರ ಮಂಜಪ್ಪನವರು, ೧೯೪೦. ವೀರಶೈವ ವಿದ್ಯಾಲಯ, ಆಲಮಟ್ಟಿ.

೪೩. Hindu Mysticism : S. N. Dasgupta, 1927. Open Court, Chicago.

೪೪. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಸಂ. ೫, ಸಂ : ಡಾ. ಜಿ. ಎಸ್. ಶಿವರುದ್ರಪ್ಪ, ಪ್ರ ; ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.

೪೫. ಕನ್ನಡದಲ್ಲಿ ಅನುಭಾವ ಸಾಹಿತ್ಯ : ಡಾ. ಎಚ್. ತಿಪ್ಪೇರುದ್ರಸ್ವಾಮಿ, ೧೯೬೨, ಪ್ರಥಮ ಮುದ್ರಣ. ಪ್ರ : ಮೈಸೂರು ವಿಶ್ವವಿದ್ಯಾನಿಲಯ.

೪೬. ಸಾಲೋಟಗಿ ಶಿವಯೋಗೀಶ್ವರ ಡಂಗುರ ಪದಗಳು : ಸಂ. ಡಾ. ಎ. ಎಸ್. ವಾಲಿ, ೧೯೮೦. ಪ್ರ: ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೊಂಟದಾರ್ಯ ಮಠ, ಗದಗ.

೪೭ ಕೈವಲ್ಯ ಸಾರ : ಸಂ. ಹೀ. ಚಿ. ಶಾಂತವೀರಯ್ಯ, ಪ್ರ: ನೊಳಂಬ ಪ್ರಕಾಶನ, ಬೆಂಗಳೂರು-೮೨.

೪೮. ಗುರುಬಸವಾರ್ಯನ ಸ್ವರವಚನಗಳು: ಸಂ : ಮೊರಬದ ಮಲ್ಲಿಕಾರ್ಜುನ; ಪ್ರ: ವೀರೇಶ್ವರ ಅಧ್ಯಯನ ಸಂಸ್ಥೆ; ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ-೧೯೮೬.

[ಈ ಪ್ರಬಂಧವನ್ನು ಸಿದ್ಧಪಡಿಸಲು ಕೆಲವು ಗ್ರಂಥಗಳನ್ನು ನೀಡಿ ಸಹಕರಿಸಿದ ಶ್ರೀ ಎಸ್. ವೆಂಕಟೇಶಯ್ಯನವರು (ಶ್ರೀ ಯೋಗಿ ನಾರೇಯಣ ಯತೀಂದ್ರರ ಆಶ್ರಮ ಟ್ರಸ್ಟ್, ಕೈವಾರ), ಡಾ. ಎಸ್. ವ್ಹಿ. ಅಯ್ಯನಗೌಡರ, ಡಾ. ರುಕ್ನುದ್ದೀನ ಸಾಹೇಬ ಕಲ್ಕಂಬ, ಪ್ರೊ. ಎಸ್. ಶ್ರೀನಿವಾಸನ್, ಪ್ರೊ. ಆರ್. ರಾಚಪ್ಪ, ಎಚ್. ಎಸ್. ಶಿವಪ್ರಕಾಶ್, ಡಾ. ಎಂ.ಎಸ್. ಲಠ್ಠೆ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ ; ನಾ. ಗೀತಾಚಾರ್ಯ – ಇವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ].

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೯. ಯಾದಗಿರಿ ಪರಿಸರದ ಕನ್ನಡ ನಾಮಪದಗಳ ಧ್ವನ್ಯಾತ್ಮಕ ರಚನೆ

- ಪ್ರೊ. ಬಸವರಾಜ ಕೋಡಗುಂಟಿ*
ಅಜಪ್ಪ ಬಾಬು*

ಕನ್ನಡದಲ್ಲಿ ಪದವರ್ಗಗಳ ಮೇಲೆ ಹೆಚ್ಚಿನ ಅಧ್ಯಯನಗಳು ಬಂದಿಲ್ಲ. ಪದಗಳ ರಚನೆ, ಸ್ವರೂಪ, ಬೆಳವಣಿಗೆ, ಬಳಕೆ, ಅರ್ಥ ಹೀಗೆ ಹಲವು ನೆಲೆಗಳಲ್ಲಿ ಪದವರ್ಗಗಳನ್ನು ಅಧ್ಯಯನ ಮಾಡಬೇಕಾದ ಅವಶ್ಯಕತೆ ಇದೆ. ಈಗಿನ ಪ್ರಬಂಧದಾಗ ಕನ್ನಡ ನಾಮಪದಗಳ ಧ್ವನಿರಚನೆಯನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಿದೆ. ಕನ್ನಡ ನಾಮಪದಗಳಲ್ಲಿ ವಿವಿದ ಧ್ವನಿಗಳು ಬರುವ ಪರಿಸರಗಳನ್ನು ತಿಳಿದುಕೊಳ್ಳುವ ಪ್ರಯತ್ನ ಇಲ್ಲಿದೆ. ಒಂದು ಧ್ವನಿ ಪದಮೊದಲು, ಪದನಡುವೆ ಮತ್ತು ಪದಕೊನೆ ಹೀಗೆ ಮೂರು ಪರಿಸರಗಳಲ್ಲಿ ಬರುವ ಅವಕಾಶವನ್ನು ಹೊಂದಿರುತ್ತದೆ. ಒಂದು ಮಾತಿನಲ್ಲಿ ಕೆಲವು ಧ್ವನಿಗಳು ಮೂರೂ ಪರಿಸರಗಳಲ್ಲಿ ಬಳಕೆಯಾಗುತ್ತವೆ. ಇನ್ನು ಕೆಲವು ಬಗೆಬಗೆಯ ನಿರ್ಬಂದಗಳನ್ನು ಹೊಂದಿರುತ್ತವೆ. ಕೆಲವು ಧ್ವನಿಗಳು ಬಳಕೆಯಾಗಬಹುದಾದ ಮೂರು ಪರಿಸರಗಳಲ್ಲಿ ಎರಡು ಕಡೆ ಬಳಕೆಯಾಗಬಹುದು, ಇನ್ನು ಕೆಲವು ಒಂದು ಕಡೆ ಮಾತ್ರ ಬಳಕೆ ಆಗಬಹುದು. ಆಯಾ ಮಾತಿನ ಕೆಲವು ಸಾಮಾನ್ಯ ಧ್ವನಿ ನಿಯಮಗಳು ಇದನ್ನು ತಿಳಿದುಕೊಳ್ಳುವುದಕ್ಕೆ ಹೆಚ್ಚು ಅನುಕೂಲವಾಗುತ್ತವೆ. ಉದಾ: ಇಂದಿನ ಕನ್ನಡದಾಗ ಪದಗಳು ಸಾಮಾನ್ಯವಾಗಿ ವ್ಯಂಜನಕೊನೆಯಾಗಿರುತ್ತವೆ ಎಂಬುದು ಒಂದು ಸಾಮಾನ್ಯ ನಿಯಮ. ಇದರಿಂದಾಗಿ ಕನ್ನಡದಾಗ ವ್ಯಂಜನಗಳು ಪದಕೊನೆಯಲ್ಲಿ ಬರುವ ಅವಕಾಶವನ್ನು ಹೊಂದಿರುವುದಿಲ್ಲ ಎಂಬುದನ್ನು ತಿಳಿದುಕೊಳ್ಳಬಹುದು. ಇನ್ನು ಕೆಲವು ವಿಶಿಶ್ಟವಾದ ನಿಯಮಗಳು ಕೆಲವು ಧ್ವನಿಗಳ ಬಳಕೆಯ ಪರಿಸರದ ನಿರ್ಬಂದಗಳನ್ನು ತಿಳಿಸುತ್ತವೆ.

---

* ಪ್ರೊ. ಬಸವರಾಜ ಕೋಡಗುಂಟಿ (ಸಹಾಯಕ ಪ್ರಾಧ್ಯಾಪಕರು) ಮತ್ತು ಶ್ರೀ ಅಜಪ್ಪ ಬಾಬು (ಸಂಶೋಧನ ವಿದ್ಯಾರ್ಥಿ). ಕನ್ನಡ ವಿಭಾಗ. ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ. ಗುಲಬರ್ಗಾ ೫೮೫೧೦೬, ಮೊ : ೯೧೯೯೧೬೦೫೩೦೫೭

ಕನ್ನಡದಾಗ ಪದಗಳಲ್ಲಿ ಬಳಕೆಯಾಗುವ ದ್ವನಿಗಳ ಬಗೆಗೆ ಒಂದು ಸರಳವಾದ ತಿಳುವಳಿಕೆ ಇದೆ. ಪಾರಂಪರಿಕ ವ್ಯಾಕರಣಗಳಲ್ಲಿ ಳ್, ಣ್ ಮೊದಲಾದ ದ್ವನಿಗಳು ಪದಮೊದಲಲ್ಲಿ ಬರುವುದಿಲ್ಲ ಎಂಬುದನ್ನು ದಾಕಲಿಸಿದೆ. ಆದರೆ, ಕನ್ನಡದ ದೊಡ್ಡ ಸಂಕೆಯ ಪದಗಳನ್ನು ಇಟ್ಟುಕೊಂಡು ಕನ್ನಡಪದಗಳ ದ್ವನಿರಚನೆಯನ್ನು ತಿಳಿದುಕೊಳ್ಳುವ ಪ್ರಯತ್ನ ಆಗಿಲ್ಲ. ಈಗಿನ ಪ್ರಬಂದ ಇಂತದೊಂದು ಸಣ್ಣ ಪ್ರಯತ್ನ.

ಕನ್ನಡದಾಗ ಪದಗಳ ರಚನೆಯ ಕುರಿತು ವಿಶೇಶವಾದ ಅದ್ಯಯನಗಳು ಬಂದಿಲ್ಲ. ಕನ್ನಡದ ಪದಗಳ ಇತಿಹಾಸ, ಅವುಗಳ ದ್ವನ್ಯಾತ್ಮಕ ರಚನೆ, ಅವುಗಳ ಬಳಕೆ, ಪದಗಳಿಗೆ ಹತ್ತುವ ವಿವಿದ ಪ್ರತ್ಯಯಗಳು, ಪದದ ವಿವಿದ ರೂಪಗಳು, ಹೊಸ ಪದಗಳ ಬೆಳವಣಿಗೆ ಹೀಗೆ ಅನೇಕ ನೆಲೆಗಳಲ್ಲಿ ಪದಗಳನ್ನು ಅದ್ಯಯನ ಮಾಡಬೇಕಿದೆ. ಇದರಿಂದ ಕನ್ನಡದ ಇತಿಹಾಸ, ರಚನೆಯನ್ನು ತಿಳಿದುಕೊಳ್ಳುವುದಕ್ಕೆ ಸಹಾಯಕ. ಇದು ಕನ್ನಡವನ್ನು ಕಂಪ್ಯೂಟರಿಗೆ ಕಲಿಸುವ ಪ್ರಯತ್ನಕ್ಕೆ ಹೆಚ್ಚು ಪೂರಕವಾಗುತ್ತದೆ.

ಈಗಿನ ಅದ್ಯಯನಕ್ಕೆ ಯಾದಗಿರಿ ಪರಿಸರದಲ್ಲಿ ಬಳಕೆಯಲ್ಲಿರುವ ಕನ್ನಡದಿಂದ ಮಾಹಿತಿಯನ್ನು ಸಂಗ್ರಹಿಸಿದೆ. ಅಂದಾಜು ೫೦೦೦ ನಾಮ ಪದಗಳನ್ನು ಇದಕ್ಕೆ ಬಳಸಿಕೊಂಡಿದೆ.

ದ್ವನಿರಚನೆಯನ್ನು ತಿಳಿದುಕೊಳ್ಳುವುದಕ್ಕೆ ಪೂರಕವಾಗಿ ಈ ಒಳನುಡಿಯ ದ್ವನಿ/ದ್ವನಿಮಾಗಳ ತಿಳುವಳಿಕೆ ಅವಶ್ಯ. ಇದುವರೆಗೆ ಈ ಪರಿಸರದ ಒಳನುಡಿಯ ಮೇಲೆ ವಿಶೇಶ ಅದ್ಯಯನ ಇಲ್ಲ. ಹಾಗಾಗೆ ಯಾದಗಿರಿ ಪರಿಸರದಲ್ಲಿ ಬಳಕೆಯಲ್ಲಿರುವ ಕನ್ನಡದ ಒಂದು ಅಂದಾಜು ದ್ವನಿಗಳ ತಿಳುವಳಿಕೆಯನ್ನು ಬಳಸಿಕೊಂಡಿದೆ. ದ್ವನಿಗಳನ್ನು ಈ ಕೆಳಗೆ ಪಟ್ಟಿ ಮಾಡಿದೆ:

**ಸ್ವರಗಳು:**

**ಗಿಡ್ಡಕ್ಕರಗಳು:** ಅ, ಇ, ಉ, ಎ, ಒ, ಅ್ಯ, ಅ್ವ, ಅ.

**ಉದ್ದಕ್ಕರಗಳು:** ಆ, ಈ, ಊ, ಏ, ಓ, ಆ್ಯ, ಆ್ವ

**ವ್ಯಂಜನಗಳು:**

**ವರ್ಗೀಯಗಳು:**

ಕಂಟ್ಯ : ಕ್, ಗ್, ಙ್

ತಾಲವ್ಯ : ಚ್, ಜ್, ಞ್

ಮೂರ್ದನ್ಯ : ಟ್, ಡ್, ಣ್

ದಂತ್ಯ : ತ್, ದ್, ನ್

ಓಷ್ಟ್ಯ : ಪ್, ಬ್, ಮ್

ಚ್, ಜ್, ನ್.

ವರ್ತ್ಸ್ಯಗಳು:

ರ್, ಲ್, ಸ್, ಳ್

ಅರೆವ್ಯಂಜನ/ಅರೆಸ್ವರ: ಯ್, ವ್

ಇವುಗಳಲ್ಲಿ ಪ್ರತಿಯೊಂದು ಧ್ವನಿಬಳಕೆಯಾಗುವ ಪರಿಸರವನ್ನು ತಿಳಿದುಕೊಳ್ಳುವ ಪ್ರಯತ್ನ ಈ ಪ್ರಬಂದದಲ್ಲಿದೆ. ಇಲ್ಲಿ ಮೊದಲು ಸ್ವರಗಳನ್ನು ನಂತರ ವ್ಯಂಜನಗಳನ್ನು ಪರಿಗಣಿಸಿದೆ. ಪದಮೊದಲು, ಪದನಡುವೆ ಮತ್ತು ಪದಕೊನೆ ಈ ಕ್ರಮವನ್ನು ಬರವಣಿಗೆಯಲ್ಲಿ ಇಟ್ಟುಕೊಂಡಿದೆ. ಪ್ರತಿಯೊಂದು ದ್ವನಿ ಬಳಕೆಯಾಗುವ ವಿವಿದ ಪರಿಸರಗಳನ್ನು ಬಳಕೆಗಳೊಂದಿಗೆ ತೋರಿಸಿದೆ. ಅವಶ್ಯವೆನಿಸಿದಲ್ಲಿ ಚರ್ಚೆಯನ್ನು ಬೆಳೆಸಿದೆ. ಒತ್ತಕ್ಕರಗಳ ಸಂದರ್ಬದಲ್ಲಿ ವ್ಯಂಜನ ದ್ವನಿಗಳ ಬಳಕೆಯನ್ನು ವಿಶೇಶವಾಗಿ ಅನಂತರ ತೋರಿಸಿದೆ.

ಕನ್ನಡ ಮಾತಿನ ಪದರಚನೆಯಲ್ಲಿನ ಕೆಲವು ಸಾಮಾನ್ಯ ಅಂಶಗಳನ್ನು ಇಲ್ಲಿ ಗಮನಿಸಬಹುದು. ಪದಕೊನೆ ಪರಿಸರದಲ್ಲಿ ಎಲ್ಲ ಹ್ರಸ್ವಸ್ವರಗಳು ಬರುತ್ತವೆ. ಆದರೆ ಯಾವುದೆ ದೀರ್ಗಸ್ವರ ಬರುವುದಿಲ್ಲ. ಕೆಲವೆಡೆ ದೀರ್ಗಸ್ವರ ಪದದ ಕೊನೆಯಲ್ಲಿ ಇದೆ ಎನ್ನುವಂತಾ ಅವಲೋಕನೆಗಳು ಇವೆ. ಆದರೆ, ಅದು ದೀರ್ಗಸ್ವರ ಆಗಿರುವಂತೆ ಕಾಣುವುದಿಲ್ಲ. ಅಲ್ಲಿ ಎರಡು ಅವಕಾಶಗಳನ್ನು ಗಮನಿಸಬಹುದು. ಬಳಕೆಯಾಗಿರುವ ದ್ವನಿ ಮೊದಲನೆಯದು ಹ್ರಸ್ವಸ್ವರದ ಕಾಲಕ್ಕಿಂತ ಹೆಚ್ಚು ಮತ್ತು ದೀರ್ಗಸ್ವರದ ಕಾಲಕ್ಕಿಂತ ಕಡಿಮೆ ಸಮಯ ಹೊಂದಿರಬಹುದು. ಇದನ್ನು ಪ್ರತಿಶ್ಟಾಪಿಸಲು ಹೆಚ್ಚು ಅವಲೋಕನೆ ಅವಶ್ಯ. ಇನ್ನೊಂದು ಅವಕಾಶವೆಂದರೆ ಒತ್ತು ಕೊಡುವುದಕ್ಕೆ ಇಲ್ಲವೆ ಇನ್ನಿತರ ಯಾವುದೆ ಕಾರಣಕ್ಕಾಗಿ ಕೊನೆಯ ಸ್ವರವನ್ನು ಎಳೆಯುವುದು ಸಾಮಾನ್ಯ. ದೀರ್ಗಸ್ವರ ಪದಕೊನೆಯಲ್ಲಿ ಬರುವ ಪರಿಸರವನ್ನು ಸ್ಪಶ್ಟವಾಗಿ ಅವಲೋಕಿಸಿದಾಗ ಒಂದು ಸಾಮಾನ್ಯ ನಿಯಮವನ್ನು ಹೇಳುವುದಕ್ಕೆ ಬರುವುದಿಲ್ಲ. ಬದಲಿಗೆ, ಕೆಲವೆಡೆ ಮಾತ್ರ ಬಳಕೆಯಾಗುವಂತೆ ತೋರುತ್ತದೆ. ಈಗಿನ ಪ್ರಬಂದದಲ್ಲಿ ಪದಕೊನೆಗೆ ದೀರ್ಗಸ್ವರಗಳನ್ನು ಪರಿಗಣಿಸಿಲ್ಲ. ಹಾಗಾಗಿ ದೀರ್ಗಸ್ವರಗಳ ಬಳಕೆಯ ಪರಿಸರ ಪದಮೊದಲು ಮತ್ತು ಪದನಡುವೆ ಮಾತ್ರ ಆಗುತ್ತದೆ. ಉದಾಹರಣೆಗಳನ್ನು ಕೊಡುವಾಗ ಪದಕೊನೆ ಪರಿಸರದಲ್ಲಿ ದೀರ್ಗಸ್ವರ ಇರುವ ಉದಾಹರಣೆಗಳು ಇಲ್ಲ.

ಸ್ವರಗಳಿಗೆ ಸಂಬಂದಿಸಿದ ಇನ್ನು ಕೆಲವು ವಿಶಯಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಕನ್ನಡದಲ್ಲಿ ಯ್ ಮತ್ತು ವ್ ಇವು ಅರೆಸ್ವರಗಳಾಗಿವೆ. ಅನೇಕ ಬಾರಿ, ಮುಕ್ಯವಾಗಿ ಪದಮೊದಲಿನ ಪರಿಸರದಲ್ಲಿ ಇವು ಸ್ವರದ ಗುಣದೊಂದಿಗೆ ಬಳಕೆಯಾಗುತ್ತವೆ. ಆಡುಮಾತಿನಲ್ಲಿ ಇವು ಇನ್ನೂ ಹೆಚ್ಚು ಸ್ಪಶ್ಟವಾಗಿ ಬಳಕೆಯಾಗುತ್ತವೆ. ಕನ್ನಡದ ಎ ಸ್ವರದ ಗುಣವನ್ನು ಯ್ ದ್ವನಿ ಮತ್ತು ಒ ಸ್ವರದ ಗುಣವನ್ನು ವ್ ದ್ವನಿ ಪಡೆದುಕೊಂಡು ಬಳಕೆಯಾಗುತ್ತವೆ. ಹೀಗಾಗಿ ಅನೇಕ ಸಂದರ್ಬಗಳಲ್ಲಿ ಎ ಮತ್ತು ಯ್ ದ್ವನಿಗಳು ಮತ್ತು

ಒ ಮತ್ತು ವ್ ಧ್ವನಿಗಳು ಪರಸ್ಪರ ಪೂರಕ ಪರಿಸರದಲ್ಲಿ ಇವೆ ಎನ್ನುವಂತೆ ತೋರುತ್ತದೆ. ಅದರಿಂದಾಗಿ ಪದಮೊದಲಿನ ಪರಿಸರದಲ್ಲಿ ಬಳಕೆಯಾದ ಧ್ವನಿ ಯಾವುದು ಎಂಬುದನ್ನು ತಿಳಿದುಕೊಳ್ಳುವುದು ಕಶ್ಟದ ಕೆಲಸ. ಈಗಿನ ಪ್ರಬಂದದಲ್ಲಿ ಎ ಮತ್ತು ಒ ಮೊದಲಿನ ಪದಗಳಿಗೆ ಉದಾಹರಣೆಗಳನ್ನು ಕೊಟ್ಟಿದೆ. ಆದರೆ, ಈ ಉದಾಹರಣೆಗಳು ಕ್ರಮವಾಗಿ ಯ್ ಮತ್ತು ವ್ ಮೊದಲಿನ ಪದಗಳಂತೆ ಬಳಕೆಯಾಗುವ ಅವಕಾಶವನ್ನು ಹೊಂದಿವೆ ಎಂಬುದನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು.

ಇನ್ನು ಕನ್ನಡದ ವರ್ಣಮಾಲೆಯಲ್ಲಿ ಇಲ್ಲದ ಆದರೆ, ಕನ್ನಡದಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ ಕೆಲವು ಸ್ವರ ಧ್ವನಿಗಳೆಂದರೆ, ಅ, ಆ್ಯ, ಅ್ವ, ಆ್ವ ಈ ಧ್ವನಿಗಳು ಅನೇಕ ಕನ್ನಡಗಳಲ್ಲಿ ಬಳಕೆಯಲ್ಲಿರುವುದನ್ನು ವಿವಿದ ವರ್ಣನಾತ್ಮಕ ವ್ಯಾಕರಣಗಳು ತೋರಿಸಿಕೊಟ್ಟಿವೆ. ಈಗಿನ ಪ್ರಬಂದಕ್ಕೆ ಮಾಹಿತಿಯನ್ನು ಸಂಗ್ರಹಿಸಿರುವ ಯಾದಗಿರಿ ಕನ್ನಡದಲ್ಲಿಯೂ ಈ ಧ್ವನಿಗಳು ಸಾಮಾನ್ಯವಾಗಿ ಬಳಕೆಯಲ್ಲಿವೆ. ಆ್ಯ, ಆ್ವ ಧ್ವನಿಗಳನ್ನು ಹೆಚ್ಚಿನ ವರ್ಣನಾತ್ಮಕ ವ್ಯಾಕರಣಗಳು ಗುರುತಿಸಿವೆ (ಹಿರೇಮಟ. ೧೯೬೩, ಉಪಾದ್ಯಾಯ. ೧೯೭೬ ಮೊ.). ಇವುಗಳು ಉದ್ದಕ್ಕರಗಳಾಗಿವೆ. ಇವಕ್ಕೆ ಸಂವಾದಿಯಾಗಿ ಗಿಡ್ಡಕ್ಕರಗಳೂ ಕೂಡ ಉತ್ತರ ಕರ್ನಾಟಕದ ಕನ್ನಡಗಳಲ್ಲಿ ಬಳಕೆಯಲ್ಲಿವೆ ಎಂಬುದನ್ನು ಈ ಪ್ರಬಂದದ ಮೊದಲ ಲೇಕಕರು ಬೇರೆ ಕಡೆ (ಮಸ್ಕಿ ಕನ್ನಡದಾಗ ವಿಬಕ್ತಿ ರೂಪಗಳು. ೨೦೧೨.) ಪ್ರಸ್ತಾಪಿಸಿದ್ದಾರೆ. ಯಾದಗಿರಿ ಕನ್ನಡದಲ್ಲಿಯೂ ಈ ಎರಡು ಉದ್ದಕ್ಕರ ಮತ್ತು ಗಿಡ್ಡಕ್ಕರಗಳು ಬಳಕೆಯಲ್ಲಿವೆ. ಈಗಿನ ಪ್ರಬಂದದಲ್ಲಿ ಈ ಎರಡೂ ಜೋಡಿಗಳನ್ನು ಪರಿಗಣಿಸಿದ್ದು ಪ್ರತಿಯೊಂದಕ್ಕೂ ಉದಾಹರಣೆಗಳನ್ನು ಕೊಟ್ಟಿದೆ. ಇವುಗಳು ಸಾಮಾನ್ಯವಾಗಿ ಪದನಡುವೆ ಬರುತ್ತವೆ. ಕೆಲವು ಸಂದರ್ಬಗಳಲ್ಲಿ ಮಾತ್ರ ಪದಮೊದಲು ಮತ್ತು ಪದಕೊನೆಯಲ್ಲಿ ಬರುತ್ತವೆ. ಆದರೆ, ಅವುಗಳಿಗೆ ನಿರ್ಬಂದಗಳನ್ನು ತಿಳಿದುಕೊಳ್ಳಲು ಇಲ್ಲವೆ ಯಾವುದೆ ಅಂಶಗಳನ್ನು ಸಾಮಾನ್ಯೀಕರಿಸಲು ಸದ್ಯಕ್ಕೆ ಸಾದ್ಯವಿಲ್ಲ. ಅದೇ ರೀತಿ ಅ. ಧ್ವನಿಗಳು ಕೆಲವು ಪರಿಸರಗಳಲ್ಲಿ ಪದ ನಡುವೆ ಬಳಕೆಯಾಗುತ್ತವೆ.

ಇನ್ನು ವ್ಯಂಜನ ಧ್ವನಿಗಳ ಕುರಿತು ಒಂದು ಸಾಮಾನ್ಯ ಚರ್ಚೆಯನ್ನು ಬೆಳೆಸಬಹುದು. ಮಹಾಪ್ರಾಣ ಧ್ವನಿ ಯಾದಗಿರಿ ಪರಿಸರದ ಕನ್ನಡದಲ್ಲಿ ಬಳಕೆಯಲ್ಲಿ ಇಲ್ಲ. ಅನುನಾಸಿಕ ಧ್ವನಿಗಳಲ್ಲಿ ಙ್, ಞ್ ಇವುಗಳು ಸ್ವತಂತ್ರವಾಗಿ ಎಲ್ಲಿಯೂ ಬಳಕೆ ಆಗಿಲ್ಲ. ಇವು ಪದ ನಡುವಿನ ಪರಿಸರದಲ್ಲಿ ಸವರ್ಗ ವ್ಯಂಜನ ಧ್ವನಿಗಳೊಂದಿಗೆ ಬಳಕೆಯಾಗುತ್ತವೆ. ಇವುಗಳ ಹೊರತಾಗಿ ಕನ್ನಡ ವರ್ಣಮಾಲೆಯಲ್ಲಿ ಗುರುತಿಸಿರುವ ಇತರ ಅನುನಾಸಿಕಗಳಲ್ಲಿ ಣ್ ಇದು ಕೇವಲ ಪದ ನಡುವಿನ ಪರಿಸರದಲ್ಲಿ ಬಳಕೆ ಆಗುತ್ತದೆ. ಇನ್ನುಳಿದ ನ್ ಮತ್ತು ಮ್ ಧ್ವನಿಗಳು ಪದಮೊದಲು ಮತ್ತು ಪದನಡುವಿನ ಪರಿಸರಗಳಲ್ಲಿ ಬಳಕೆಯಾಗಿವೆ. ಇವುಗಳೊಂದಿಗೆ ತೀರಾ ಕೆಲವು ಕಡೆ ನ್. ಧ್ವನಿಯು ಬಳಕೆಯಲ್ಲಿರುವುದನ್ನು ಗಮನಿಸಬಹುದು.

ಕನ್ನಡದಲ್ಲಿ ಸಾವಿರದಶ್ಟು ವರುಶಗಳ ಹಿಂದೆ ಪದಗಳು ವ್ಯಂಜನಾಂತವಾಗಿದ್ದವು ಎಂಬುದು ತಿಳುವಳಿಕೆ. ಆನಂತರ ಸ್ವರಕೊನೆಯಾಗುವ ಪ್ರಕ್ರಿಯೆ ನಡೆದು, ಎಲ್ಲ ಪದಗಳು ವ್ಯಂಜನಕೊನೆ ಆಗಿ ಬೆಳೆದಿವೆ. ಆದರೆ, ಪದಗಳ ಬಳಕೆಯನ್ನು ಅವಲೋಕಿಸುವಾಗ ಸ್ವರಕೊನೆ ಮತ್ತು ವ್ಯಂಜನಕೊನೆ ಎಂಬ ಅನುಮಾನ ಉಳಿಯುತ್ತದೆ. ಯಾದಗಿರಿ ಪರಿಸರದಲ್ಲಿ ಬಳಕೆಯಲ್ಲಿರುವ ಹಲವು ಪದಗಳು ವ್ಯಂಜನಕೊನೆ ಆಗಿರಬಹುದೆ ಎಂಬ ಅನುಮಾನ ಕಾಣಿಸುತ್ತದೆ. ಯಾದಗಿರಿ ಪರಿಸರದಲ್ಲಿ 'ಅ'ಕೊನೆ ಮತ್ತು 'ಇ'ಕೊನೆ ಪದಗಳು ಸಾಮಾನ್ಯವಾಗಿ ಕಾಣಿಸುತ್ತವೆ. 'ಉ'ಕೊನೆ ಪದಗಳು ಕಡಿಮೆ ಸಂಕೆಯಲ್ಲಿ ಬಳಕೆಯಲ್ಲಿವೆ. ಶಿಶ್ಟಕನ್ನಡದಲ್ಲಿ 'ಉ'ಕೊನೆಯಾಗಿ ಬಳಕೆಯಲ್ಲಿರುವ ಮಣ್ಣು, ಕಾಲು ಇಂತಾ ಪದಗಳು ಯಾದಗಿರಿ ಪರಿಸರದಲ್ಲಿ 'ಅ'ಕೊನೆ ಪದಗಳಾಗಿ ಬಳಕೆಯಾಗುತ್ತವೆ. ಇವುಗಳಲ್ಲಿ ಶಿಶ್ಟಕನ್ನಡದಲ್ಲಿ 'ಉ'ಕೊನೆ ಪದಗಳಾಗಿದ್ದು ಯಾದಗಿರಿ ಪರಿಸರದಲ್ಲಿ 'ಅ'ಕೊನೆ ಪದಗಳಂತೆ ಬಳಕೆಯಾಗುವ ಪದಗಳ ಬಳಕೆ ಅವು ಸ್ವರಕೊನೆ ಇಲ್ಲವೆ ವ್ಯಂಜನಕೊನೆ ಎಂಬ ಅನುಮಾನ ತರುತ್ತವೆ. ಆದರೆ ಕನ್ನಡದಲ್ಲಿ ಹೆಚ್ಚಿನ ವಿದ್ವಾಂಸರು ಸ್ವರಕೊನೆ ಪದಗಳು ಇವೆ ಎಂಬುದನ್ನು ವಿವರಿಸುತ್ತಾರೆ, ನಾವು ವ್ಯಂಜನಕೊನೆ ಪದಗಳನ್ನು ಗುರುತಿಸಿಲ್ಲ. ಹೀಗಾಗಿ ಈಗಿನ ಪ್ರಬಂದದಲ್ಲಿಯೂ ವ್ಯಂಜನಕೊನೆ ಎಂಬ ಅನುಮಾನ ತರುವಂತಾ ಪದಗಳನ್ನು ಸ್ವರಕೊನೆ ಎಂದೆ ಪರಿಗಣಿಸಿದೆ.

ಇನ್ನು ಪ್ರತಿಯೊಂದು ದ್ವನಿಯ ಬಳಕೆಯ ಪರಿಸರಗಳನ್ನು ತಿಳಿದುಕೊಳ್ಳಬಹುದು. ಇಲ್ಲಿ ಪ್ರತಿ ದ್ವನಿಗೆ ಅದರ ಬಳಕೆಯ ವಿವಿದ ಪರಿಸರಗಳಿಗೆ ಉದಾಹರಣೆಗಳನ್ನು ಕೊಟ್ಟಿದೆ. ಕನ್ನಡದಾಗ ಸಾಮಾನ್ಯವಾಗಿ ಒಂದಕ್ಕರದ ನಾಮಪದ ಸಿಗುವುದಿಲ್ಲ. ಎರಡಕ್ಕರದ ಮತ್ತು ಮೂರಕ್ಕರದ ಪದಗಳನ್ನು ಉದಾಹರಣೆಯಾಗಿ ಕೊಟ್ಟಿದೆ. ನಾಲ್ಕಕ್ಕರದ ಇಲ್ಲವೆ ಹೆಚ್ಚಿನ ಅಕ್ಕರದ ನಾಮಪದಗಳು ಸಿಗುವುದು ಕಶ್ಟ. ಕೆಲವು ಪದಗಳು ಹಾಗೆ ಸಿಕ್ಕರೂ ಅವು ಜೋಡುಪದ ಇಲ್ಲವೆ ಕೂಡುಪದ ಆಗಿರುತ್ತವೆ. ಮೂರಕ್ಕಿಂತ ಹೆಚ್ಚಿನ ಅಕ್ಕರದ ಕೆಲವು ಬೆಳೆದ ಇಲ್ಲವೆ ಸಾದಿತ ನಾಮಪದಗಳು ದೊರೆಯುತ್ತವೆ. ಸದ್ಯ ಅವುಗಳನ್ನು ಈಗಿನ ಲೇಕನದಲ್ಲಿ ಪರಿಗಣಿಸಿಲ್ಲ. ವ್ಯಂಜನಗಳ ಸಂದರ್ಬದಲ್ಲಿ ಒತ್ತಕ್ಕರದ ಪದಗಳನ್ನು ಉದಾಹರಣೆಯಾಗಿ ಪ್ರತ್ಯೇಕವಾಗಿ ಕೊಟ್ಟಿದೆ.

ಇಲ್ಲಿ ಪ್ರತಿಯೊಂದು ದ್ವನಿಯ ಬಳಕೆಯ ಅವಕಾಶಗಳನ್ನು ಉದಾಹರಣೆಯೊಂದಿಗೆ ಚರ್ಚಿಸಬಹುದು. ಅ–ಹಿಂಗೆಳಗಿನ ಗಿಡ್ಡ ತೆರೆಯುಲಿ/ಅವ್ರುತ್ತ ಹ್ರಸ್ವ: ಅ ದ್ವನಿಯು ಪದಮೊದಲು, ಪದನಡುವೆ ಮತ್ತು ಪದಕೊನೆಯ ಮೂರು ಪರಿಸರದಲ್ಲಿ ಎರಡಕ್ಕರದ ಮತ್ತು ಮೂರಕ್ಕರದ ಪದಗಳಲ್ಲಿ ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಅಸಿ, ಅಣಿ, ಅನಿ | ಸರ, ಕರ, ಕದ | ನೆಲ, ಕಸ, ಕಡ |
| ಮೂರಕ್ಕರದ | ಅವಳಿ | ಸರಗ,ಮಣಕ, ಮಗಡ | ಟಗರ, ಗವುಡ, ಮಳಕ |

ಆ–ಹಿಂಗೆಳಗಿನ ಉದ್ದ ತೆರೆಯುಲಿ/ಅವೃತ್ತ ಧ್ವನಿ: ಆ ಧ್ವನಿಯು ಪದಮೊದಲು ಮತ್ತು ಪದನಡುವಿನ ಪರಿಸರಗಳಲ್ಲಿ ಎರಡಕ್ಕರದ ಪದಗಳು ದೊರಕಿವೆ. ಮೂರಕ್ಕರದ ಪದಗಳಲ್ಲಿ ಪದಮೊದಲಲ್ಲಿ ಬಳಕೆಯಾಗಿರುವುದಕ್ಕೆ ಉದಾಹರಣೆ ದೊರಕಿವೆ, ಪದನಡುವೆ ಬಳಕೆಯಾಗಿರುವುದಕ್ಕೆ ಉದಾಹರಣೆಗಳು ಈಗಿನ ಮಾಹಿತಿಕೋಶದಲ್ಲಿ ಇಲ್ಲ. ಮತ್ತು ಮೂರಕ್ಕರದ ಪದಗಳಲ್ಲಿ ಬಳಕೆಯಾಗಿರುವುದಕ್ಕೆ ಉದಾಹರಣೆಗಳನ್ನು ಗಮನಿಸಬಹುದು.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಆನಿ, ಆರ, ಆಸಿ | ಕಾಡ, ಗಾಳಿ, ಕಾಲ | – |
| ಮೂರಕ್ಕರದ | ಆಸಿಗಿ | – | – |

ಇ–ಮುನ್ಮೇಲಿನ ಗಿಡ್ಡ ತೆರೆಯುಲಿ/ಉನ್ನತ ಪೂರ್ವ ಅವೃತ್ತ ಹ್ರಸ್ವ: ಇ ಧ್ವನಿಯು ಮೂರೂ ಪರಿಸರಗಳಲ್ಲಿ ಬಳಕೆಯಾಗಿದೆ. ಈ ಮೂರೂ ಪರಿಸರಗಳಲ್ಲಿ ಎರಡಕ್ಕರದ ಮತ್ತು ಮೂರಕ್ಕರದ ಪದಗಳಲ್ಲಿ ಬಳಕೆಯಾಗಿದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಇಡಿ, ಇಸ | ದಿನ. ಗಿಡ, ಮಿಣಿ, ನಿಜ | ವಳಿ, ಮಳಿ, ಮಗಿ |
| ಮೂರಕ್ಕರದ | ಇರಬಿ, ಇರಿಗಿ, ಇಳಿಗಿ | ಗಳಿಗಿ, ವಣೆಗಿ | ಬಣಿಮಿ, ಪಣಿತಿ |

ಈ–ಮುನ್ಮೇಲಿನ ಉದ್ದ ತೆರೆಯುಲಿ/ಅವೃತ್ತ ದೀರ್ಗಸ್ವರ: ಈ ಧ್ವನಿಯು ಎರಡಕ್ಕರದ ಪದಗಳಲ್ಲಿ ಪದಮೊದಲ, ಪದನಡುವಿನ ಪರಿಸರಗಳಲ್ಲಿ ಬಳಕೆಯಾಗುತ್ತದೆ. ಮೂರಕ್ಕರದ ಪದಗಳಲ್ಲಿ ಪದನಡುವೆ ಬಳಕೆಯಾಗಿರುವುದಕ್ಕೆ ಉದಾಹರಣೆ ಇವೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಈಸ | ಚೀಲ, ಬೀಜ, ಸೀರಿ | -- |
| ಮೂರಕ್ಕರದ | -- | ಜೀರಗಿ | -- |

ಉ–ಹಿನ್ಮೇಲಿನ ಗಿಡ್ಡ ತೆರೆಯುಲಿ/ಉನ್ನತ ಪಶ್ಚ ಸವೃತ್ತ ಹ್ರಸ್ವ: ಈ ಧ್ವನಿಯು ಮೂರೂ ಪರಿಸರಗಳಲ್ಲಿ ಬಳಕೆಯಾಗಿರುವುದಕ್ಕೆ ಎರಡಕ್ಕರದ ಮತ್ತು ಮೂರಕ್ಕರದ ಪದಗಳು ಸಿಗುತ್ತವೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಉಡಿ,ಉಳಿ, ಉರಿ | ಮುಡಿ, ಗುಡಿ, ಸುಳಿ | ಬಾವು, ಕಾವು |
| ಮೂರಕ್ಕರದ | ಉಡಗಿ, ಉಸಕ, ಉಗರ | ಸವುಳ, ಕವುಚ, ಕುಬಸ | ಗಳವು, ಕುರವು |

ಊ–ಹಿನ್ನೇಲಿನ ಉದ್ದ ತೆರೆಯುಲಿ/ಅವೃತ್ತ ದೀರ್ಘಸ್ವರ: ಈ ಎರಡಕ್ಕರದ ಪದಗಳಲ್ಲಿ ಪದಮೊದಲ ಮತ್ತು ಪದನಡುವಿನ ಪರಿಸರಗಳಲ್ಲಿ ಊ ಧ್ವನಿಯ ಬಳಕೆ ಕಾಣಸಿಗುತ್ತದೆ. ಮೂರಕ್ಕರದ ಪದಗಳಲ್ಲಿ ಪದನಡುವೆ ಈ ಧ್ವನಿ ಬಳಕೆಯಾಗಿರುವುದಕ್ಕೆ ಉದಾಹರಣೆಗಳು ದೊರಕುತ್ತವೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಊರ, ಊಟ | ಗೂಗಿ, ಕೂಲಿ, ಚೂರ | -- |
| ಮೂರಕ್ಕರದ | -- | ಕೂರಗಿ | -- |

ಎ–ಮುನ್ನಡುವಿನ ಗಿಡ್ಡ ತೆಲೆಯುಲಿ/ಅವನತ ಮಧ್ಯ ಅವೃತ್ತ ಹ್ರಸ್ವಸ್ವರ: ಎ ಧ್ವನಿಯು ಕನ್ನಡದಾಗ ಎರಡಕ್ಕರದ ಪದಗಳಲ್ಲಿ ಪದಮೊದಲ ಮತ್ತು ಪದನಡುವಿನ ಪರಿಸರಗಳಲ್ಲಿ ಹೆಚ್ಚು ವ್ಯಾಪಕವಾಗಿ ಕಂಡುಬರುತ್ತದೆ. ಆದರೆ, ಎರಡಕ್ಕರದ ಪದಕೊನೆ ಪರಿಸರದಲ್ಲಿ ಯಾದಗಿರಿ ಪರಿಸರದ ಕನ್ನಡದಾಗ ಕೆಲವೆ ಪದಗಳಲ್ಲಿ ಬಳಕೆಯಾಗುತ್ತದೆ. ಮೂರಕ್ಕರದ ಪದಗಳಲ್ಲಿ ಪದನಡುವಿನ ಪರಿಸರದಲ್ಲಿ ಈ ಧ್ವನಿಯು ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಎರಿ, ಎದಿ, ಎಮ್ಮಿ | ತೆನಿ, ಮೆದಿ, ಬೆದಿ | ದಡೆ, ಉಡೆ, ಗುಳೆ |
| ಮೂರಕ್ಕರದ | ಎದರ, ಎಸರ | ಸೆರಗ, ಯೆಣಾಲ | -- |

ಏ–ಮುನ್ನಡುವಿನ ಉದ್ದ ತೆರೆಯುಲಿ/ಅವೃತ ದೀರ್ಘಸ್ವರ: ಈಗಿನ ಅಧ್ಯಯನದ ಮಾಹಿತಿ ಕೋಶದಲ್ಲಿ ಏ ಧ್ವನಿಯು ಕೇವಲ ಎರಡಕ್ಕರದ ಪದಗಳಲ್ಲಿ ಪದನಡುವಿನ ಪರಿಸರದಲ್ಲಿ ಸಹಜವಾಗಿ ಬಳಕೆಯಾಗಿರುವುದಕ್ಕೆ ಬಳಕೆಗಳು ದೊರಕಿವೆ. ಅದರೊಂದಿಗೆ ಮೂರಕ್ಕರದ ಪದಗಳಲ್ಲಿ ಪದಮೊದಲ ಪರಿಸರದಲ್ಲಿ ಕಂಡುಬರುತ್ತದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಏರ | ಜೇನ, ಗೇಣ, ಮೇವು | -- |
| ಮೂರಕ್ಕರದ | ಏರಿಕಿ, ಏಳಿಗಿ | | -- |

ಒ–ಹಿನ್ನಡುವಿನ ಗಿಡ್ಡ ತೆರೆಯುಲಿ/ಉನ್ನತ ಸವೃತ್ತ ಪಶ್ಚ ಹ್ರಸ್ವಸ್ವರ: ಈ ಧ್ವನಿಯು ಪದನಡುವೆ ಬಳಕೆಯಾಗುವುದಕ್ಕೆ ಎರಡು ಮತ್ತು ಮೂರಕ್ಕರದ ನಾಮಪದಗಳ ಉದಾಹರಣೆಗಳು ಸಿಗುತ್ತವೆ. ಪದಮೊದಲಿನ ಪರಿಸರದಲ್ಲಿ ಈ ಧ್ವನಿಯು ವ್ ಧ್ವನಿಯೊಂದಿಗೆ ಸ್ವಚ್ಛಂದ ಪರಿಸರದಲ್ಲಿ ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | -- | ಬೊಕಿ, ಕೊರಿ, ಬೊಳೆ | -- |
| ಮೂರಕ್ಕರದ | ಒಗರ (ವಗರ) | ಬೊಗಣಿ | -- |

ಓ–ಹಿನ್ನಡುವಿನ ಉದ್ದ ತೆರೆಯುಲಿ/ಸವೃತ್ತ ಧ್ವನಿ ದೀರ್ಘಸ್ವರ: ಓ ಧ್ವನಿಯು ಪದನಡುವಿನ ಪರಿಸರದಲ್ಲಿ ಸಹಜವಾಗಿ ಬಳಕೆಯಲ್ಲಿದೆ. ಎರಡಕ್ಕರದ ಮತ್ತು ಮೂರಕ್ಕರದ ಪದಗಳು ಉದಾಹರಣೆಯಾಗಿ ದೊರೆಯುತ್ತವೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಓಣಿ,ಓರಿ,ಓಲಿ | ಕೋಳಿ,ಕೋಡ,ಕೋತಿ | -- |
| ಮೂರಕ್ಕರದ | ಓಳಿಗಿ | ಬೋಣಿಗಿ, ಸೋಪಾನ | -- |

ಅ್ಯ–ಉನ್ನತಾವನತ ಪೂರ್ವ ಅವೃತ್ತ ಹ್ರಸ್ವ: ಕನ್ನಡದಲ್ಲಿ ಅ್ಯ ಧ್ವನಿಯು ಪದನಡುವಿನ ಪರಿಸರದಲ್ಲಿ ಅತ್ಯಂತ ಸಹಜವಾಗಿ ಬಳಕೆಯಾಗುತ್ತದೆ. ಎರಡಕ್ಕರದ ಪದಗಳಲ್ಲಿ ಈ ಧ್ವನಿ ಪದನಡುವೆ ಬಳಕೆಯಾಗುವುದನ್ನು ಕಾಣಬಹುದು.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | -- | ಕ್ಯರಿ, ಚ್ಯಟ | -- |
| ಮೂರಕ್ಕರದ | -- | ತ್ಯಳಗ | -- |

ಆ್ಯ– ಉನ್ನತಾವನತ ಪೂರ್ವ ಅವೃತ್ತ ದೀರ್ಘಸ್ವರ: ಆ್ಯ ಧ್ವನಿಯು ಎರಡಕ್ಕರದ ಕೆಲವು ಪದಗಳಲ್ಲಿ ಪದಮೊದಲ ಪರಿಸರದಲ್ಲಿ ಬಳಕೆಯಾಗಿರುವುದನ್ನು ಕಾಣಬಹುದು. ಎರಡಕ್ಕರದ ಮತ್ತು ಮೂರಕ್ಕರದ ಪದಗಳಲ್ಲಿ ಈ ಧ್ವನಿಯು ಪದನಡುವಿನ ಪರಿಸರದಲ್ಲಿ ಬಳಕೆಯಾಗಿದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಆ್ಯಸಿ, ಆ್ಯಳಿ | ಕ್ಯಾಲ | -- |
| ಮೂರಕ್ಕರದ | -- | ಬ್ಯಾಸಗಿ, ಕ್ಯಾರಳ | -- |

ಅ್ವ: ಪದನಡುವಿನ ಪರಿಸರದಲ್ಲಿ ಎರಡು ಮತ್ತು ಮೂರು ಅಕ್ಕರದ ಪದಗಳಲ್ಲಿ ಈ ಧ್ವನಿಯು ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | -- | ಸ್ವಸಿ, ತ್ವಡಿ, ಕ್ವಡ | -- |
| ಮೂರಕ್ಕರದ | -- | ತ್ವಗಟಿ, ತ್ವಣಿಸಿ, ಕ್ವಡತಿ | -- |

ಉ್ವ: ಕನ್ನಡದಲ್ಲಿ ಉ್ವ ಧ್ವನಿಯು ಪದನಡುವಿನ ಪರಿಸರದಲ್ಲಿ ಸಹಜವಾಗಿ ಬಳಕೆಯಾಗುತ್ತದೆ. ಇದಕ್ಕೆ ಎರಡಕ್ಕರದ ಪದಗಳು ಉದಾಹರಣೆಯಾಗಿ ಸಿಗುತ್ತವೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | -- | ದ್ವಾಸಿ, ಗ್ವಾಡಿ, ಕ್ವಾಣ | -- |
| ಮೂರಕ್ಕರದ | -- | -- | -- |

ಅ: ಅವನತ ಮದ್ಯ ಅವೃತ್ತ ಹ್ರಸ್ವಸ್ವರ: ಇದು ಪದಮೊದಲ ಮತ್ತು ಪದನಡುವಿನ ಪರಿಸರಗಳಲ್ಲಿ ಬಳಕೆಯಾಗಿರುವ ಕೆಲವು ಪದಗಳನ್ನು ಗಮನಿಸಬಹುದು. ಇದಕ್ಕೆ ಸದ್ಯದ ಸಂಗ್ರಹದಾಗ ಎರಡಕ್ಕರದ ಪದಗಳು ಉದಾಹರಣೆಯಾಗಿ ದೊರಕಿವೆ.

| | ಪದಮೊದಲು | ಪದನಡುವೆ | ಪದಕೊನೆ |
|---|---|---|---|
| ಎರಡಕ್ಕರದ | ಅ.ತ್ತಿ | ಕ.ತ್ತಿ | -- |
| ಮೂರಕ್ಕರದ | -- | -- | -- |

**ವ್ಯಂಜನಗಳು:** ಕ್, ಗ್, ಜ್, ಚ್, ಜ್, ಞ್, ಟ್, ಡ್, ಚ್, ಜ್, ನ್, ತ್, ದ್, ನ್, ಪ್, ಬ್, ಮ್, ಯ್, ರ್, ಲ್, ವ್, ಸ್, ಳ್ ಈ ಎಲ್ಲಾ ಧ್ವನಿಗಳು ಯಾದಗಿರಿ ಕನ್ನಡದ ಜ್, ಞ್, ಚ್, ಜ್, ನ್, ಣ್ ಈ ಧ್ವನಿಗಳು ಕೇವಲ ಪದನಡುವಿನ ಪರಿಸರದಲ್ಲಿ ಬಳಕೆಯಾಗಿರುವುದಕ್ಕೆ ಉದಾಹರಣೆಗಳು ದೊರಕಿವೆ. ಉಳಿದೆಲ್ಲ ಧ್ವನಿಗಳು ನಾಮಪದಗಳ ಪದಮೊದಲ ಮತ್ತು ಪದನಡುವಿನ ಪರಿಸರಗಳಲ್ಲಿ ಬಳಕೆಯಾಗುತ್ತವೆ.

ಈ ಮೊದಲು ಚರ್ಚಿಸಿದಂತೆ ಕನ್ನಡದಾಗ ವ್ಯಂಜನಗಳು ಪದಕೊನೆ ಪರಿಸರದಲ್ಲಿ ಬರುವುದಿಲ್ಲ. ಕೆಲವು ಪದಗಳ ಬಳಕೆ ಈ ಅನುಮಾನ ತರುತ್ತಿರುವುದು ನಿಜವೆ ಆದರೂ ಹೆಚ್ಚಿನ ಅಧ್ಯಯನಗಳು ಸ್ಪಷ್ಟತೆಯನ್ನು ತರಬೇಕಿದೆ. ಈಗಿನ ಅಧ್ಯಯನವೂ ವ್ಯಂಜನಕೊನೆ ನಾಮಪದಗಳು ಇಲ್ಲ ಎಂಬ ನಿಲುವನ್ನು ಅವಲಂಬಿಸಿದೆ. ಈಗ ಪ್ರತಿಯೊಂದು ಧ್ವನಿಯನ್ನು ಗಮನಿಸಿ ಅವುಗಳಿಗೆ ಉದಾಹರಣೆಗಳನ್ನು ನೋಡಬಹುದು.

**ಕ್**-ತಡೆಯುಲಿ ಗುನುಗುನಿಸುವ/ಕಂಟ್ಯ ಅಗೋಶ: ಕ್ ಧ್ವನಿಯು ಪದಮೊದಲ, ಪದನಡುವಿನ ಪರಿಸರದಲ್ಲಿ ಎರಡಕ್ಕರದ ಮತ್ತು ಮೂರಕ್ಕರದ ಪದಗಳಲ್ಲಿ ಬಳಕೆಯಾಗಿದೆ. ಜೊತೆಯಲ್ಲಿ ಒತ್ತಕ್ಕರದ ಉದಾಹರಣೆ ಸಿಗುತ್ತವೆ. ಕ್ ಧ್ವನಿಯು ಒತ್ತಕ್ಕರದಲ್ಲಿಯೂ ಬಳಕೆಯಾಗಿದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಕಸ, ಕಿವಿ, ಕಾರ | ಬೊಕಿ, ಮೂಕ, ತೂಕ |
| ಮೂರಕ್ಕರದ | ಕ್ಯಾದಿಗಿ, ಕಾಡಿಕಿ | ಕುರವು, ಗಳವು |
| ಒತ್ತಕ್ಕರದ | ಅಕ್ಕ, ಬಕ್ಕ | ಬಕ್ಕಣ |

**ಗ್**–ತಡೆಯುಲಿ ಗುನುಗುನಿಸದ/ಕಂಟ್ಯ ಗೋಷ: ಪದಮೊದಲ ಮತ್ತು ಪದನಡುವಿನ ಪರಿಸರದಲ್ಲಿ ಎರಡು ಮತ್ತು ಮೂರು ಅಕ್ಕರದ ಪದಗಳಲ್ಲಿ ಗ್ ದ್ವನಿಯು ಬಳಕೆ ಆಗಿದೆ. ಇದು ಒತ್ತಕ್ಕರದ ಪದಗಳಲ್ಲಿಯೂ ಸಿಗುತ್ತವೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಗಿಡ, ಗೂಳಿ, ಗೋಲಿ | ಗೂಗಿ, ಕಾಗಿ |
| ಮೂರಕ್ಕರದ | ಗಾದಿಗಿ, ಗ್ವಂಗಡಿ, ಗಡಿಗಿ | ತ್ವಾಗಣಿ, ರಗಟ, ಗಣಸ |
| ಒತ್ತಕ್ಕರದ | ಗಗ್ಗಿ, ನುಗ್ಗ, ಬಗ್ಗು | |

**ಙ್**: ಮೂಗುಲಿ/ಕಂಟ್ಯ ಅನುನಾಸಿಕ: ಙ್ ದ್ವನಿಯು ಕಂಟ್ಯ ದ್ವನಿಗಳು ಇರುವ ಪದಗಳಲ್ಲಿ ಪದನಡುವಿನ ಪರಿಸರದಲ್ಲಿ ನಿರ್ಬಂದಿತ ಪರಿಸರದಲ್ಲಿ ಮಾತ್ರ ಬಳಕೆಯಾಗುತ್ತದೆ. ಎರಡಕ್ಕರದ ಮತ್ತು ಮೂರಕ್ಕರದ ಪದಗಳನ್ನು ಗಮನಿಸಬಹುದು. ಇವುಗಳನ್ನು ಒತ್ತಕ್ಕರದ ಪದಗಳಂತೆ ನೋಡಬಹುದು.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | -- | -- |
| ಮೂರಕ್ಕರದ | -- | -- |
| ಒತ್ತಕ್ಕರದ | | ಅಙ್ಗೆ, ಮಙ್ಗ, ಅಙ್ಗಳ |

**ಚ್**: ಗುನುಗುನಿಸದ ತಡೆಯುಲಿ/ತಾಲವ್ಯ ಅಗೋಶ: ಉತ್ತರ ಕರ್ನಾಟಕದ ಕನ್ನಡಗಳಲ್ಲಿ ಸಾಮಾನ್ಯವಾಗಿ ಎರಡು ಚ್ ಗಳು ಇವೆ. ತಾಲವ್ಯ ದ್ವನಿ ಚ್ ಇದು ಪದಮೊದಲ ಪರಿಸರದಲ್ಲಿ ಬರುತ್ತದೆ. ಆದರೆ, ಚ್. ಇದು ಪದನಡುವಿನ ಪರಿಸರದಲ್ಲಿ ಬಳಕೆಯಾಗುತ್ತದೆ. ಒತ್ತಕ್ಕರದಲ್ಲಿ ತಾಲವ್ಯ ದ್ವನಿ ಚ್ ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಚಿಣಿ, ಚೂರಿ, ಚಳಿ | |
| ಮೂರಕ್ಕರದ | ಚಿಮಣಿ, ಚಿಗರಿ | ಚಮಚ, ಇಲಾಚಿ |
| ಒತ್ತಕ್ಕರದ | -- | ಮಚ್ಚಿ, ಪಚ್ಚಿ, ನುಚ್ಚ |

**ಜ್**: ಗುನುನಿಸುವ ತಡೆಯುಲಿ/ತಾಲವ್ಯ ಗೋಶ: ಈ ಮೇಲೆ ತಾಲವ್ಯ ಮತ್ತು ದಂತ್ಯ ಚ್ ಧ್ವನಿಗಳ ಬಗೆಗೆ ಮಾತನಾಡಿದಂತೆ ಎರಡು ಜ್ ಕೂಡ ತಾಲವ್ಯ ಮತ್ತು ದಂತ್ಯ ಹೀಗೆ ಎರಡು ದ್ವನಿಗಳು ಬಳಕೆಯಲ್ಲಿರುವುದನ್ನು ಕಾಣಬಹುದು. ಇದು ಕೂಡ ಸಾಮಾನ್ಯವಾಗಿ ತಾಲವ್ಯ ಜ್ ಪದಮೊದಲ ಪರಿಸರದಲ್ಲಿ ಮತ್ತು ಜ್. ಇದು ಪದನಡುವಿನ ಪರಿಸರದಲ್ಲಿ ಬರುತ್ತವೆ. ತಾಲವ್ಯ ಜ್ ಇದು ಒತ್ತಕ್ಕರಗಳಲ್ಲಿ ಬರುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಜೀತ, ಜೇನ, ಜಡಿ | -- |
| ಮೂರಕ್ಕರದ | ಜಗಳ, ಜೋಗಳ | -- |
| ಒತ್ತಕ್ಕರದ | -- | ಚಜ್ಜಿ, ಮಜ್ಜಿಗಿ, ಕಜ್ಜಿ |

**ಞ್**: ಮೂಗುಲಿ/ತಾಲವ್ಯ ಅನುನಾಸಿಕ: ಞ್ ಧ್ವನಿಯು ತಾಲವ್ಯ ಧ್ವನಿಗಳು ಇರುವ ಪದಗಳಲ್ಲಿ ಪದನಡುವಿನ ಪರಿಸರದಲ್ಲಿ ನಿರ್ಬಂದಿತ ಪರಿಸರದಲ್ಲಿ ಮಾತ್ರ ಬಳಕೆಯಾಗುತ್ತದೆ. ಎರಡಕ್ಕರದ ಮತ್ತು ಮೂರಕ್ಕರದ ಪದಗಳನ್ನು ಗಮನಿಸಬಹುದು. ಇವುಗಳನ್ನು ಒತ್ತಕ್ಕರದ ಪದಗಳಂತೆ ನೋಡಬಹುದು.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | -- | -- |
| ಮೂರಕ್ಕರದ | -- | -- |
| ಒತ್ತಕ್ಕರದ | -- | ಎಞ್ಞ, ಕಞ್ಞ, ಕುಞ್ಞಗಿ |

**ಟ್**: ಗುನುಗುನಿಸಿದ ತಡೆಯುಲಿ/ಪರಿವೇಶ್ಟಿತ ಗೋಶ: ಈ ಧ್ವನಿಯು ಪದನಡುವಿನ ಪರಿಸರದಲ್ಲಿ ಎರಡು ಮತ್ತು ಮೂರು ಅಕ್ಕರದ ಪದಗಳಲ್ಲಿ ಸಾಮಾನ್ಯವಾಗಿ ಬಳಕೆಯಾಗಿರುವುದನ್ನು ಕಾಣುತ್ತೇವೆ. ಆದರೆ ಪದಮೊದಲ ಪರಿಸರದಲ್ಲಿ ಇದರ ಬಳಕೆ ಕಡಿಮೆ. ಇದಕ್ಕೆ ಕೇವಲ ಕೆಲವು ಮೂರಕ್ಕರದ ಪದಗಳು ಉದಾಹರಣೆಯಾಗಿ ದೊರೆಯುತ್ತವೆ. ಆದರೆ, ಎರಡಕ್ಕರದ ಪದಗಳು ಪ್ರಸ್ತುತ ಮಾಹಿತಿಯಲ್ಲಿ ಇಲ್ಲ. ಒತ್ತಕ್ಕರದಲ್ಲಿ ಈ ಧ್ವನಿ ಸಿಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | -- | ಗೂಟ, ಚೋಟ, ಬಾಟ |
| ಮೂರಕ್ಕರದ | ಟಗರ | ಪಟಾಣಿ, ಕಟಾಣಿ |
| ಒತ್ತಕ್ಕರದ | -- | ವಟ್ಟಿ, ಕಟ್ಟು, ಬಟ್ಟಿ |

**ಡ್**: ಗುನುಗುನಿಸುವ ತಡೆಯುಲಿ/ಪರಿವೇಶ್ಟಿತ ಗೋಶ: ಪದಮೊದಲು ಮತ್ತು ಪದನಡುವಿನ ಪರಿಸರದಾಗ ಎರಡು, ಮೂರು ಅಕ್ಕರದ ಪದಗಳಲ್ಲಿ ಮತ್ತು ಒತ್ತಕ್ಕರದ ಪದಗಳಲ್ಲಿ ಡ್ ಧ್ವನಿ ಇರುವ ಉದಾಹರಣೆಗಳು ಸಿಗುತ್ತವೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಡೋಣಿ, ಡೂಗ, ಡೋಗಿ | ಕಡ, ಗೂಡ, ರಾಡಿ |
| ಮೂರಕ್ಕರದ | ಡ್ಗಂಗರಿ | ಉಡಗ, ಉಡಕಿ |
| ಒತ್ತಕ್ಕರದ | -- | ಕಡ್ಡಿ, ಗಡ್ಡಿ, ಚಡ್ಡಿ |

**ಣ್**: ಮೂಗುಲಿ/ಪರಿವೇಶ್ಟಿತ ಅನುನಾಸಿಕ: ದ್ವನಿಯು ಪದನಡುವಿನ ಪರಿಸರದಲ್ಲಿ ಮಾತ್ರ ಎರಡು, ಮೂರು ಅಕ್ಕರದ ಪದಗಳಲ್ಲಿ ಬಳಕೆಯಾಗಿದೆ. ಒತ್ತಕ್ಕರದ ಪದಗಳಲ್ಲಿಯೂ ಈ ದ್ವನಿ ಸಿಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | -- | ಕಣ, ಮಣಿ, ಬಾಣಿ |
| ಮೂರಕ್ಕರದ | -- | ಮಣಕ, ವಣಿಗಿ, ಕಣಕ |
| ಒತ್ತಕ್ಕರದ | -- | ಬಣ್ಣ, ಕಣ್ಣ, ಮಣ್ಣ |

**ತ್**: ಗುನುಗುನಿಸದ ತಡೆಯುಲಿ/ದಂತ್ಯ ಅಗೋಶ: ಈ ದ್ವನಿಯು ಪದಮೊದಲ, ಪದಕೊನೆ ಪರಿಸರದಲ್ಲಿ ಎರಡು, ಮೂರು ಅಕ್ಕರದ ಪದಗಳಲ್ಲಿ ಮತ್ತು ಒತ್ತಕ್ಕರಗಳಲ್ಲಿ ಸಿಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ತುಟಿ, ತಳ, ತಾತ | ಬೂತ, ಮಾತ, ತೂತ |
| ಮೂರಕ್ಕರದ | ತಗಣಿ, ತಗಡ | ಪಣಿತಿ, ಬಾಣಿತಿ |
| ಒತ್ತಕ್ಕರದ | -- | ಬತ್ತಿ, ತತ್ತಿ, ಕತ್ತಿ |

**ದ್**: ಗುನುಗುನಿಸುವ ತಡೆಯುಲಿ/ದಂತ್ಯಗೋಶ: ದ್ ದ್ವನಿಯು ಎರಡು ಮತ್ತು ಮೂರಕ್ಕರದ ಪದಗಳಲ್ಲಿ ಪದಮೊದಲ ಮತ್ತು ಪದನಡುವಿನ ಪರಿಸರಗಳಲ್ಲಿ ಬಳಕೆಯಾಗಿದೆ. ಒತ್ತಕ್ಕರಗಳಲ್ಲಿಯೂ ಈ ದ್ವನಿ ಸಿಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ದಡಿ, ದಾರ, ದೂಳ | ಕದ, ಬೊದ, ಮೆದಿ |
| ಮೂರಕ್ಕರದ | ದಗದ, ದಿವಸ | ಗದವು, ಉದಗ, ಅಡದಿ |
| ಒತ್ತಕ್ಕರದ | -- | ಗದ್ದ, ಗದ್ದಿ, ನಿದ್ದಿ |

**ನ್**: ಮೂಗುಲಿ/ದಂತ್ಯ ಅನುನಾಸಿಕ: ಪದಮೊದಲ ಮತ್ತು ಪದನಡುವೆ ಈ ಎರಡು ಪರಿಸರಗಳಲ್ಲಿ ನ್ ದ್ವನಿಯು ಬಳಕೆಯಾಗುತ್ತದೆ. ಎರಡಕ್ಕರದ ಮತ್ತು ಮೂರಕ್ಕರದ ಪದಗಳಲ್ಲಿ ಮತ್ತು ಒತ್ತಕ್ಕರಗಳಲ್ಲಿ ಈ ದ್ವನಿ ಬಳಕೆ ಆಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ನಿಜ, ನರಿ, ನಾಯಿ | ಮನಿ, ದನ |
| ಮೂರಕ್ಕರದ | ನವುಲ, ನೆಲವು | ಕನುಸು, ಕುನಸ |
| ಒತ್ತಕ್ಕರದ | -- | ಬೆನ್ನ, ಜೆನ್ನಿಗಿ |

**ಪ್**: ಗುನಿಗುನಿಸದ ತಡೆಯುಲಿ/ಓಶ್ಟ ಅಗೋಶ: ಪ್ ದ್ವನಿಯು ಪದಮೊದಲ ಮತ್ತು ಪದನಡುವಿನ ಪರಿಸರಗಳಲ್ಲಿ ಬಳಕೆಯಾಗಿರುವುದಕ್ಕೆ ಎರಡಕ್ಕರದ ಪದಗಳು ಮಾತ್ರ ಉದಾಹರಣೆಯಾಗಿ ದೊರೆತಿವೆ. ಮೂರಕ್ಕರದ ಪದಗಳಲ್ಲಿ ಪ್ರಸ್ತುತ ಮಾಹಿತಿಯಲ್ಲಿ ಉದಾಹರಣೆಗಳು ಇಲ್ಲ. ಈ ದ್ವನಿ ಒತ್ತಕ್ಕರದಲ್ಲಿ ಬಳಕೆಯಾಗುವುದಕ್ಕೆ ಉದಾಹರಣೆಗಳು ದೊರೆಯುತ್ತವೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಪಳಿ, ಪಾಲ, ಪುಡಿ | ಪಾಪ, ಸೇಪ, ಸೊಪ |
| ಮೂರಕ್ಕರದ | -- | -- |
| ಒತ್ತಕ್ಕರದ | -- | ತಿಪ್ಪಿ, ಕಪ್ಪಿ, ರಪ್ಪಿ |

**ಬ್**: ಗುನಿಗುನಿಸುವ ತಡೆಯುಲಿ/ ಓಶ್ಟ ಗೋಶ: ಈ ದ್ವನಿಯು ಪದಮೊದಲು, ಪದನಡುವೆ ಪರಿಸರದಲ್ಲಿ ಎರಡು ಅಕ್ಕರದಿಂದ ಮೂರು ಅಕ್ಕರದ ಪದಗಳಲ್ಲಿ ಮಾತ್ರ ಪದಗಳಂತೆ ಒತ್ತಕ್ಕರದ ಪದಗಳಲ್ಲಿ ಬಳಕೆಯಾಗಿದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಬಳಿ, ಬೂದಿ, ಬೀಜ | ಡಾಬ, ಡೊಬ, ಡಾಬಿ |
| ಮೂರಕ್ಕರದ | ಬಡಗಿ, ಬದುಕ | ಮಸಬ |
| ಒತ್ತಕ್ಕರದ | -- | ಕಬ್ಬ, ಡುಬ್ಬ, ಗುಬ್ಬಿ |

**ಮ್**: ಮೂಗುಲಿ/ಉಬಯೋಶ್ಟ ಅನುನಾಸಿಕ: ಪದಮೊದಲ, ಪದನಡುವಿನ ಪರಿಸರಗಳಲ್ಲಿ ಎರಡು ಅಕ್ಕರದ ಮತ್ತು ಮೂರು ಅಕ್ಕರದ ಪದಗಳಲ್ಲಿ ಮ್ ದ್ವನಿಯು ಬಳಕೆಯಾಗುತ್ತದೆ. ಒತ್ತಕ್ಕರದ ಉದಾಹರಣೆಗಳು ದೊರೆಯುತ್ತವೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಮಗ, ಮಳಿ, ಮಗಿ | ದಾಮಿ, ತೂಮು |
| ಮೂರಕ್ಕರದ | ಮಸರ, ಮಸಳಿ | |
| ಒತ್ತಕ್ಕರದ | -- | ಗುಮ್ಮಿ, ಯೆಮ್ಮಿ(ಎಮ್ಮಿ) |

**ಯ್**: ಅರೆತೆರೆಯುಲಿ/ಅರ್ದಸ್ವರ: ಪದಮೊದಲ, ಪದನಡುವಿನ ಪರಿಸರಗಳಲ್ಲಿ ಎರಡಕ್ಕರದ, ಮೂರಕ್ಕರದ ಪದಗಳಲ್ಲಿ ಪದಮೊದಲಿಗೆ ಆ ದ್ವನಿ ಬಳಕೆ ಆಗಿರುವ ಕೆಲವು ಉದಾಹರಣೆಗಳು ದೊರಕಿವೆ. ಅಕ್ಕರದ ಪದಗಳಲ್ಲಿ ಯ್ ದ್ವನಿಯ ಬಳಕೆಯ ಉದಾಹರಣೆಗಳು ಸಿಗುತ್ತವೆ. ಆದರೆ ಒತ್ತಕ್ಕರದ ಪದಗಳು ಸಿಕ್ಕಿಲ್ಲ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಯಡ, ಯಣ, ಯಲಿ | ನಾಯಿ, ಕಾಯಿ, ಬಾಯಿ |
| ಮೂರಕ್ಕರದ | ಯಣಲ | -- |
| ಒತ್ತಕ್ಕರದ | -- | -- |

ರ್: ಹೊಡೆಯುಲಿ/ಕಂಪಿತ: ಈ ದ್ವನಿಯು ಪದಮೊದಲು ಮತ್ತು ಪದನಡುವಿನ ಪರಿಸರಗಳಲ್ಲಿ ಎರಡು ಮತ್ತು ಮೂರು ಅಕ್ಕರದ ಪದಗಳಲ್ಲಿ ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ರಾಡಿ, ರವ, ರಾಗಿ | ಆರಿ, ಊರ, ಕುರಿ |
| ಮೂರಕ್ಕರದ | ರಗಟಿ, ರಾವಳ | ಇರಬಿ, ಸರಗ, ಚವರಿ |
| ಒತ್ತಕ್ಕರದ | -- | -- |

ಲ್: ಬದಿಯುಲಿ/ಪಾರ್ಶ್ವಿಕ: ಎರಡಕ್ಕರ ಮತ್ತು ಮೂರಕ್ಕರದ ಪದಗಳಲ್ಲಿ ಮತ್ತು ಒತ್ತಕ್ಕರಗಳಲ್ಲಿ ಇದು ಪದಮೊದಲು, ಪದನಡುವಿನ ಪರಿಸರಗಳಲ್ಲಿ ಬಳಕೆಯಾಗುತ್ತದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಲಾಡಿ, ಲಾಳಿ | ಬಾಲ, ಗೋಲಿ |
| ಮೂರಕ್ಕರದ | ಲಾಳಿಕಿ | ಇಲಾಚಿ |
| ಒತ್ತಕ್ಕರದ | -- | ಬಿಲ್ಲ, ಗಲ್ಲ, ಕಲ್ಲ |

ವ್: ಅರೆತೆರೆಯುಲಿ/ಅರ್ದಸ್ವರ: ಪದಮೊದಲು, ಪದನಡುವೆ ಈ ಎರಡು ಪರಿಸರಗಳಲ್ಲಿ ಎರಡು ಮತ್ತು ಮೂರು ಅಕ್ಕರದ ಪದಗಳಲ್ಲಿ ಮತ್ತು ಒತ್ತಕ್ಕರದ ಪದಗಳಲ್ಲಿ ಈ ದ್ವನಿಯು ಬಳಕೆ ಆಗಿರುವುದಕ್ಕೆ ಬಳಕೆಗಳು ಇವೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ವಗಿ, ವಳಿ, ವಲಿ | ಬಾವ,ಕಾವು,ರಾವು,ಬೇವು |
| ಮೂರಕ್ಕರದ | ವಣಿಗಿ, ವತನ | ಬಾವುಗ, ಸವುಳ |
| ಒತ್ತಕ್ಕರದ | -- | ಅವ್ವ, ಉವ್ವ |

ಸ್: ಉಜ್ಜುಲಿ/ಅಗೋಶ: ಸ್ ದ್ವನಿಗೆ ಪದಮೊದಲ, ಪದನಡುವಿನ ಪರಿಸರಗಳಲ್ಲಿ ಎರಡು, ಮೂರಕ್ಕರದ ಪದಗಳಲ್ಲಿ ಉದಾಹರಣೆ ಸಿಗುತ್ತವೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | ಸರ, ಸುಳಿ, ಸ್ವಸಿ | ಅಸಿ, ಕಸ, ಮಸಿ |
| ಮೂರಕ್ಕರದ | ಸರಗ, ಸವುಳ, ಸೆರಗ | ಮಸರ, ಮಸಳಿ |
| ಒತ್ತಕ್ಕರದ | -- | -- |

**ళ్:** ಬದಿಯುಲಿ/ಪರಿವೇಶ್ಟಿತ ಪಾರ್ಶ್ವಿಕ: ళ್ ದ್ವನಿಯು ಪದನಡುವಿನ ಪರಿಸರದಲ್ಲಿ ಎರಡು, ಮೂರು ಅಕ್ಕರದ ಪದಗಳಲ್ಲಿ ಮತ್ತು ಒತ್ತಕ್ಕರದ ಪದಗಳಲ್ಲಿ ಬಳಕೆ ಆಗಿದೆ.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | -- | ತళ, ಬೀళ, ಮళಿ |
| ಮೂರಕ್ಕರದ | -- | ಬళಕ, ಸವುళ, ಗళವು |
| ಒತ್ತಕ್ಕರದ | -- | ಕళ್ಳ, ಸುళ್ಳ, ಅళ್ಳ |

**ನ್:** ಉತ್ತರ ಕರ್ನಾಟಕದ ಕೆಲವು ಕನ್ನಡಗಳಲ್ಲಿ ನ್. ದ್ವನಿಯು ಕೆಲವು ನಿರ್ಬಂದಿತ ಪರಿಸರಗಳಲ್ಲಿ ಬಳಕೆಯಲ್ಲಿದೆ. ಇದನ್ನು ಪದನಡುವಿನ ಪರಿಸರಗಳಲ್ಲಿ ಕಾಣಬಹುದು. ಒತ್ತಕ್ಕರದ ಪದಗಳಲ್ಲಿ ಇದನ್ನು ಕಾಣಬಹುದು.

| | ಪದಮೊದಲು | ಪದನಡುವೆ |
|---|---|---|
| ಎರಡಕ್ಕರದ | -- | -- |
| ಮೂರಕ್ಕರದ | -- | -- |
| ಒತ್ತಕ್ಕರದ | -- | ಅನ್ನ, ಕನ್ನ |

ಬಾಗದಾಗ ಕನ್ನಡದ ವಿವಿದ ದ್ವನಿಗಳು ಬಳಕೆಯಾಗುವ ಪರಿಸರಗಳನ್ನು, ಇದಕ್ಕೆ ಸಂಬಂದಿಸಿದ ನಿಯಮ, ನಿರ್ಬಂದಗಳನ್ನು ಚರ್ಚಿಸಲಾಗುವುದು. ಮೊದಲಿಗೆ ಸ್ವರ ನಂತರ ವ್ಯಂಜನ ದ್ವನಿಗಳನ್ನು ಮಾತಿಗೆತ್ತಿಕೊಳ್ಳಲಾಗುವುದು.

**ಕನ್ನಡದಾಗ ಸ್ವರದ್ವನಿಗಳ ಬಳಕೆ:**

ಕನ್ನಡದಾಗ ಪದಮೊದಲು, ಪದನಡುವೆ ಮತ್ತು ಪದಕೊನೆ ಈ ಮೂರೂ ಪರಿಸರಗಳಲ್ಲಿ ಬಳಕೆಯಾಗುವ ಸ್ವರಗಳು ಅ, ಇ, ಉ, ಎ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಈ ಎಲ್ಲವೂ ಗಿಡ್ಡಕ್ಕರಗಳಾಗಿವೆ. ಅಲ್ಲದೆ ಕನ್ನಡದಲ್ಲಿ ಬಳಕೆಯಲ್ಲಿರುವ ಎಲ್ಲ ಗಿಡ್ಡಕ್ಕರಗಳೂ ಹೀಗೆ ಮೂರು ಪರಿಸರಗಳಲ್ಲಿ ಬಳಕೆಯಾಗಿಲ್ಲ ಎಂಬುದನ್ನು ಅವಲೋಕಿಸಬೇಕು. ಈ ನಾಲ್ಕು ಸ್ವರಗಳಲ್ಲಿ ಅ, ಇ ಮತ್ತು ಉ ಈ ಮೂರು ದ್ವನಿಗಳು ಎರಡು ಮತ್ತು ಮೂರು ಅಕ್ಕರದ ಪದಗಳಲ್ಲಿ ಮೂರೂ ಪರಿಸರಗಳಲ್ಲಿ ಬಳಕೆಯಾಗಿವೆ. ಆದರೆ ಎ ದ್ವನಿಯು ಕೇವಲ ಎರಡಕ್ಕರದ ಪದಗಳಲ್ಲಿ ಮಾತ್ರ ಈ ಮೂರೂ ಪರಿಸರಗಳಲ್ಲಿ ಬಳಕೆಯಾಗಿರುವುದು ಕಾಣಿಸುತ್ತದೆ ಆದರೆ ಮೂರಕ್ಕರದ ಪದಗಳಲ್ಲಿ ಕೇವಲ ಪದನಡುವಿನ

ಪರಿಸರದಲ್ಲಿ ಬಳಕೆಯಾಗಿರುವುದಕ್ಕೆ ಪದಗಳು ಇವೆ. ಪದಮೊದಲು ಮತ್ತು ಪದಕೊನೆಯಲ್ಲಿ ಈ ದ್ವನಿ ಬಳಕೆ ಆಗಿಲ್ಲ. ಇನ್ನುಳಿದಂತೆ ಒ ದ್ವನಿ, ಅದರೊಂದಿಗೆ ಈಗಿನ ಅದ್ಯಯನದಲ್ಲಿ ಪರಿಗಣಿಸಿರುವ ಇನ್ನೆರಡು ಗಿಡ್ಡಕ್ಕರಗಳು ಅ್ಯ ಮತ್ತು ಅ್ವ ದ್ವನಿಗಳು ಪದನಡುವಿನ ಪರಿಸರದಲ್ಲಿ ಮಾತ್ರ ಬಳಕೆಯಾಗುತ್ತವೆ. ಒ ಮತ್ತು ಅ್ವ ದ್ವನಿಗಳಿಗೆ ಎರಡಕ್ಕರದ ಮತ್ತು ಮೂರಕ್ಕರದ ಪದಗಳು ದೊರೆತರೆ ಅ್ಯ ದ್ವನಿ ಇರುವ ಎರಡಕ್ಕರದ ಪದಗಳು ಮಾತ್ರ ದೊರೆತಿವೆ. ಇನ್ನು ಅ. ದ್ವನಿ ಕೇವಲ ಪದನಡುವಿನ ಪರಿಸರದಲ್ಲಿ ಬಳಕೆಯಾಗಿರುವ ಕೆಲವು ಪದಗಳು ಇವೆ.

ಇನ್ನು ಉದ್ದಕ್ಕರಗಳ ಬಗೆಗೆ ಚರ್ಚೆಯನ್ನು ಬೆಳೆಸಬಹುದು. ಉದ್ದಕ್ಕರಗಳು ಸಾಮಾನ್ಯವಾಗಿ ಪದಕೊನೆ ಪರಿಸರದಲ್ಲಿ ಬಳಕೆ ಆಗುವುದಿಲ್ಲ. ಹೀಗಾಗಿ ಕನ್ನಡದಾಗ ಉದ್ದಕ್ಕರಗಳಿಗೆ ಪದಮೊದಲ ಮತ್ತು ಪದನಡುವಿನ ಎರಡು ಅವಕಾಶಗಳು ಮಾತ್ರ ಇವೆ. ಆ್ವ ದ್ವನಿಯ ಹೊರತಾಗಿ ಉಳಿದೆಲ್ಲ ಉದ್ದಕ್ಕರಗಳು ಎರಡಕ್ಕರದ ಪದಗಳಲ್ಲಿ ಪದಮೊದಲು ಮತ್ತು ಪದನಡುವಿನ ಪರಿಸರಗಳಲ್ಲಿ ಸಹಜವಾಗಿ ಬಳಕೆಯಾಗಿವೆ. ಆದರೆ, ಮೂರಕ್ಕರದ ಪದಗಳಲ್ಲಿ ಇವುಗಳ ಬಳಕೆ ಅನೇಕ ನಿರ್ಬಂದಗಳನ್ನು ಹೊಂದಿದೆ. ಆ ದ್ವನಿಯು ಮೂರಕ್ಕರದ ಪದಗಳಲ್ಲಿ ಕೆಲವು ಪದಗಳಲ್ಲಿ ಪದಮೊದಲ ಪರಿಸರದಲ್ಲಿ ಬಳಕೆಯಾಗಿದೆ. ಈ ದ್ವನಿಯು ಮೂರಕ್ಕರದ ಪದಗಳಲ್ಲಿ ಬಳಕೆಯಾಗಿರುವುದಕ್ಕೆ ಉದಾಹರಣೆ ಈಗಿನ ಮಾಹಿತಿಯಲ್ಲಿ ದೊರೆತಿದೆ. ಊ ದ್ವನಿಯು ಎರಡಕ್ಕರದ ಮತ್ತು ಕೆಲವು ಮೂರಕ್ಕರದ ಪದಗಳಲ್ಲಿ ಪದನಡುವೆ ಬಳಕೆಯಾಗಿದೆ. ಏ ಮತ್ತು ಓ ದ್ವನಿ ಪದಮೊದಲು ಬಳಕೆಯಾಗಿರುವ ಮೂರಕ್ಕರದ ಪದಗಳು ದೊರೆತಿವೆ. ಆದರೆ ಪದನಡುವೆ ಏ ದ್ವನಿ ಇರುವ ಪದಗಳು ದೊರೆತಿಲ್ಲ. ಆ್ಯ ದ್ವನಿಯು ಮೂರಕ್ಕರದ ಪದಗಳಲ್ಲಿ ಪದನಡುವೆ ಮಾತ್ರ ಬಳಕೆಯಾಗಿರುವುದಕ್ಕೆ ಉದಾಹರಣೆಗಳು ದೊರೆತಿವೆ. ಆ್ವ ದ್ವನಿಯ ಬಳಕೆ ಕೇವಲ ಪದನಡುವಿನ ಪರಿಸರಕ್ಕೆ ಸೀಮಿತವಾಗಿದೆ.

**ಕನ್ನಡದಾಗ ವ್ಯಂಜನದ್ವನಿಗಳ ಬಳಕೆ:**

ಕನ್ನಡದ ಪದಗಳನ್ನು ಸ್ವರಕೊನೆ ಪದಗಳು ಎಂದು ಪರಿಗಣಿಸಿರುವುದರಿಂದ ವ್ಯಂಜನಗಳು ಪದದಾಗ ಕೇವಲ ಎರಡು ಪರಿಸರಗಳಲ್ಲಿ ಮಾತ್ರ ಬರುವ ಅವಕಾಶವನ್ನು ಹೊಂದಿರುತ್ತವೆ. ಪದಮೊದಲು ಮತ್ತು ಪದನಡುವೆ. ಕನ್ನಡದ ಕೆಲವು ವ್ಯಂಜನಗಳನ್ನು ಹೊರತುಪಡಿಸಿ ಉಳಿದೆಲ್ಲ ವ್ಯಂಜನ ದ್ವನಿಗಳು ಈ ಎರಡೂ ಪರಿಸರಗಳಲ್ಲಿ ಬರುತ್ತವೆ. ಣ್ ಮತ್ತು ಳ್ ಈ ಎಠಡು ದ್ವನಿಗಳು ಪದಮೊದಲ ಪರಿಸರದಲ್ಲಿ ಕನ್ನಡದಲ್ಲಿ ಬಳಕೆ ಆಗುವುದಿಲ್ಲ. ಇನ್ನು ಯಾದಗಿರಿ ಪರಿಸರದ ಕನ್ನಡದಾಗ ಚ್ ಮತ್ತು ಜ್ ದ್ವನಿಗಳು ಪದಮೊದಲ ಪರಿಸರದಲ್ಲಿ ಮತ್ತು ಇವುಗಳಿಗೆ ಸಂವಾದಿಯಾಗಿ ಬಳಕೆಯಲ್ಲಿರುವ ಚ್ ಮತ್ತು ಜ್ ದ್ವನಿಗಳು ಪದನಡುವಿನ ಪರಿಸರದಲ್ಲಿ ಬಳಕೆಯಾಗುತ್ತವೆ.

ಇವುಗಳ ಹೊರತಾಗಿ ಪ್ರಸ್ತುತ ಪದಗಳ ಸಂಗ್ರಹದಲ್ಲಿ ಕಂಡುಬರುವ ಕೆಲವು ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಡ್, ಪ್ ಮತ್ತು ಯ್ ಧ್ವನಿಗಳು ಪದಮೊದಲ ಪರಿಸರದಲ್ಲಿ ಮೂರಕ್ಕರದ ಪದಗಳಲ್ಲಿ ದೊರಕಿಲ್ಲ. ಆದರೆ ಎರಡಕ್ಕರದ ಪದಗಳಲ್ಲಿ ದೊರಕಿವೆ. ಯ್ ಮತ್ತು ಸ್ ಧ್ವನಿಗಳು ಹೊರತಾಗಿ ಉಳಿದೆಲ್ಲ ವ್ಯಂಜನ ಧ್ವನಿಗಳು ಸಜಾತಿ ಒತ್ತಕ್ಕರದಲ್ಲಿ ಬಳಕೆ ಆಗಿವೆ.

ಈಗಿನ ಪ್ರಬಂದವು ಕನ್ನಡ ಪದಗಳ ಧ್ವನ್ಯಾತ್ಮಕ ರಚನೆಯನ್ನು ತಿಳಿದುಕೊಳ್ಳುವ ಒಂದು ಪ್ರಯತ್ನ. ಇದು ಆರಂಬಿಕ ಪ್ರಯತ್ನವಾಗಿರುವುದರಿಂದ ಅನೇಕ ಸಮಸ್ಯೆಗಳನ್ನು ನಾವಿಲ್ಲಿ ಗುರುತಿಸಬಹುದು. ಕನ್ನಡದ ಒಂದು ಬಹುದೊಡ್ಡ ಕಾರ್ಪಸ್ ಸದ್ಯಕ್ಕೆ ಲಬ್ಯವಿಲ್ಲ. ಕನ್ನಡದಾಗ ಬಳಕೆಯಲ್ಲಿರುವ ಪದಗಳನ್ನು ಕನ್ನಡ ಮತ್ತು ಬೇರೆ ಮಾತುಗಳಿಂದ ಬಂದವು ಎಂದು ಗುರುತಿಸುವ ವ್ಯವಸ್ತಿತವಾದ ಮತ್ತು ಹೆಚ್ಚು ಸ್ಪಶ್ಟತೆಯನ್ನು ಕೊಡುವ ಅದ್ಯಯನಗಳು ಇಲ್ಲದಿರುವುದು ಈ ಅದ್ಯಯನದ ದೊಡ್ಡ ಸಮಸ್ಯೆ. ಇನ್ನು, ಕನ್ನಡ ಪದಗಳ ರೂಪದ ಬಗೆಗೆ ಹೆಚ್ಚು ಅದ್ಯಯನಗಳು ಬಂದಿಲ್ಲ. ಸ್ವರಕೊನೆ, ವ್ಯಂಜನಕೊನೆ ಸಮಸ್ಯೆ, ಮೂರಕ್ಕರದ ಪದಗಳ ರೂಪ, ಒತ್ತಕ್ಕರ ಇರುವ ಪದಗಳು, ಕನ್ನಡದ ಪದಗಳಲ್ಲಿ ಕಂಡುಬರುವ ವಿಜಾತಿ ಒತ್ತಕ್ಕರಗಳ ಸಂದರ‍್ಬಗಳು ಹೀಗೆ ಹಲವು ಸಮಸ್ಯೆಗಳು ಇವೆ. ಇದಕ್ಕೆ ಪೂರಕವಾಗಿ ಒಂದು ಕನ್ನಡದ ಪದಗಳ ಒಂದು ನಿಗಂಟಿನ ಅತ್ಯವಶ್ಯಕತೆ ಇದೆ. ಇದರಿಂದ ಅನೇಕ ಬಗೆಯ ಕನ್ನಡ ಮಾತಿನ ಸಂಶೋದನೆಗಳಿಗೆ ಅನುಕೂಲವಾಗುತ್ತದೆ.

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ–ಜೂನ್, ೨೦೧೫

# ೧೦. ವಚನ ಸಾಹಿತ್ಯದ ಓದಿನ ವಿಭಿನ್ನ ನೆಲೆಗಳು: ಕೃತಿ ನೋಟ

–ಡಾ. ಜಿ.ಎನ್. ಉಪಾಧ್ಯ*

'ವಚನ ಚಳುವಳಿ' ಕರ್ನಾಟಕ ಸಂಸ್ಕೃತಿಯನ್ನು ರೂಪಿಸಿದ ಜನಮುಖಿ ಆಂದೋಲನ. ನಮ್ಮ ನಾಡಿನ ಜೀವನ ಮೌಲ್ಯಗಳನ್ನು ಜನಸಾಮಾನ್ಯರಿಗೆ ಅವರದೇ ಆದ ಭಾಷೆಯಲ್ಲಿ ತಿಳಿಹೇಳಿ ಅವರ ಮನೋವಿಕಾಸಕ್ಕೆ ಶ್ರಮಿಸಿದ ವಚನ ಸಾಹಿತ್ಯ ಏಕಕಾಲಕ್ಕೆ ಆತ್ಮಕಲ್ಯಾಣವನ್ನೂ ಲೋಕಕಲ್ಯಾಣವನ್ನೂ ಸಾಧಿಸಿದ ಅನನ್ಯ ಸಾಹಿತ್ಯ ಪ್ರಕಾರ. ಸಕಲ ಜೀವಾವಳಿಯ ಹಿತವನ್ನು ಬಯಸಿದ ಶರಣರು ಸ್ವಾತಂತ್ರ್ಯ, ಸಮಾನತೆ, ಸಹೋದರತ್ವವನ್ನು ಪ್ರತಿಷ್ಠಾಪಿಸಲು ಬಹುವಾಗಿ ಶ್ರಮಿಸಿದರು. ಎಂಟು ನೂರು ವರ್ಷಗಳ ಗಟ್ಟಿ ಇತಿಹಾಸವಿರುವ ವಚನ ವಾಙ್ಮಯ ಇಟ್ಟ ಹೆಜ್ಜೆ ತೊಟ್ಟ ರೂಪ, ಅದು ಕಾಲಕಾಲಕ್ಕೆ ಉಂಟುಮಾಡಿದ ಸಂಚಲನ ಹಾಗೂ ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿ ವಿವಿಧ ಆಯಾಮಗಳ ಓದಿಗೆ ಅವಕಾಶ ಮಾಡಿಕೊಟ್ಟ ಬಗೆಯನ್ನು ಅಧ್ಯಯನ ಮಾಡಿ ಮೌಲಿಕವಾದ ಶೋಧಕೃತಿಯನ್ನು ರಚಿಸಿದ ಶ್ರೇಯಸ್ಸು ಡಾ. ಎಸ್. ಮನೋನ್ಮನಿ ಉದಯ್‌ಕುಮಾರ ಅವರಿಗೆ ಸಲ್ಲುತ್ತದೆ. 'ವಚನ ಸಾಹಿತ್ಯದ ಓದಿನ ವಿಭಿನ್ನ ನೆಲೆಗಳು' ಎಂಬ ಮಹಾಪ್ರಬಂಧಕ್ಕೆ ಬೆಂಗಳೂರು ವಿವಿಯಿಂದ ಪಿಎಚ್.ಡಿ ಪದವಿ ಪಡೆದಿರುವ ಡಾ. ಎಸ್. ಮನೋನ್ಮನಿ ಅವರು ಅದೇ ಹೆಸರಿನಲ್ಲಿ ಈ ಮಹಾಪ್ರಬಂಧವನ್ನು ಕೃತಿ ರೂಪದಲ್ಲಿ ಹೊರತಂದಿದ್ದಾರೆ.

ಈ ಶೋಧ ಪ್ರಬಂಧವನ್ನು ಕನ್ನಡ ವಿಭಾಗ ಮುಂಬೈ ವಿಶ್ವವಿದ್ಯಾಲಯ ಪ್ರಕಟಿಸಿದೆ. ವಚನ ಸಾಹಿತ್ಯ ಜೀವನ್ಮುಖಿ ಕಾವ್ಯವೂ ಹೌದು. ಬದುಕಿನಿಂದ ಬೇರ್ಪಡದ ಈ ನೆಲದ ಚಿಂತನೆ ಅಲ್ಲಿ ಮಡುಗಟ್ಟಿದೆ. ಅದು ಕನ್ನಡ ಮನಸ್ಸುಗಳನ್ನು ನಿರ್ಮಾಣ ಮಾಡಿದ್ದು ಚಾರಿತ್ರಿಕ ಸತ್ಯ, ಜೀವನ ಧರ್ಮವನ್ನು ಸಾರುವ ಜನಭಾಷೆಯ ಸಾಹಿತ್ಯವೆನಿಸಿದ ವಚನ ವಾಙ್ಮಯ ಹುಟ್ಟಿಕೊಂಡದ್ದು ಆ ಕಾಲಮಾನದ ತುರ್ತೇ ಆಗಿತ್ತು. ಲೋಕಾನುಭವದ ಎಲ್ಲ ಸತ್ಯಗಳನ್ನು ಜನಸಾಮಾನ್ಯರ ಮುಂದೆ ಬಿಡಿಸಿಟ್ಟ ಶರಣ ಸಾಹಿತ್ಯ ಇಂದಿಗೂ

* ಡಾ. ಜಿ.ಎನ್. ಉಪಾಧ್ಯ, ಕನ್ನಡ ವಿಭಾಗದ ಮುಖ್ಯಸ್ಥರು, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ ಮೊ: ೦೨೨-೨೬೫೪೩೫೩೦

ಎಂದಿಗೂ ಪ್ರಸ್ತುತವೇ ಆಗಿದೆ. ಹನ್ನೆರಡನೆಯ ಶತಮಾನದ ವಚನಕಾರರಿಂದ ನಿರ್ಮಿತವಾದ ವಚನ ಸಾಹಿತ್ಯವನ್ನು ಕಾಲದಿಂದ ಕಾಲಕ್ಕೆ ವಿವಿಧ ಸಂವೇದನೆಗಳು ಅರ್ಥೈಸಿಕೊಂಡ ವಿಭಿನ್ನ ನೆಲೆಗಳ ವಿಶೇಷ ಅಧ್ಯಯನ ಈ ಮಹಾಪ್ರಬಂಧದ ಹೆಚ್ಚುಗಾರಿಕೆ. ಏಳು ಅಧ್ಯಾಯ ಹಾಗೂ ಅನೇಕ ಉಪ ಅಧ್ಯಾಯಗಳಲ್ಲಿ ವಚನ ಸಾಹಿತ್ಯದ ಅನನ್ಯತೆ ಹಾಗೂ ಆಯಾಮಗಳನ್ನು ಖಚಿವಾಗಿ ಗುರುತಿಸಿ ವಿಶ್ಲೇಷಿಸಿರುವುದು ಔಚಿತ್ಯಪೂರ್ಣವಾಗಿದೆ. ವಚನ ಸಾಹಿತ್ಯವು ಆಯಾ ಕಾಲದ ಅಗತ್ಯ ಸಂದರ್ಭಗಳಿಗೆ ತಕ್ಕಂತೆ ಪುನರ್ ಮೌಲ್ಯೀಕರಣಗೊಳ್ಳುತ್ತಾ ತನ್ನ ಜ್ಞಾನದ ಪರಿಧಿಯ ಹರಹನ್ನು ಹೆಚ್ಚಿಸಿಕೊಳ್ಳುತ್ತಾ ಸಾಗಿದ ಬಗೆಯನ್ನು ಸ್ವಾರಸ್ಯ ಪೂರ್ಣವಾಗಿ ನಿರೂಪಿಸಿರುವುದು ಶ್ಲಾಘನೀಯ ಸಂಗತಿ. ಎಲ್ಲ ಕಾಲಗಳಲ್ಲಿ ನಿಲ್ಲಬಲ್ಲ ಎಲ್ಲರ ಹೃದಯಕ್ಕೆ ಆಪ್ತವಾಗಬಲ್ಲ ಸಾಹಿತ್ಯಗಳಲ್ಲಿ ವಚನ ಸಾಹಿತ್ಯ ಮೊದಲಿನದು. ಅದನ್ನು 'ಸಮನ್ವಯ ಮೀಮಾಂಸಾ ಸಾಹಿತ್ಯ' ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ.

'ವಚನಗಳ ಓದಿನ ಪ್ರಭಾವ ವಚನಯುಗದಿಂದಲೇ ಪ್ರಾರಂಭಗೊಂಡರೂ ಅನಂತರದ ಕಾಲದಲ್ಲಿ ಭಿನ್ನ ಭಿನ್ನ ಸಾಹಿತ್ಯ ರೂಪಗಳಲ್ಲಿ, ಭಿನ್ನ ಭಿನ್ನ ಆದರ್ಶಗಳ ಹಿನ್ನಲೆಯಲ್ಲಿ, ಭಿನ್ನ ತತ್ತ್ವ, ಸಿದ್ಧಾಂತ, ಆಚಾರ ಸಂಹಿತೆಗಳ ಪ್ರತಿಪಾದನೆಯೊಂದಿಗೆ ಸಾಗಿ ಬಂದು ಮುಂದೆ ದಾಸ ಸಾಹಿತ್ಯದ ಮೇಲೆ ಪ್ರಭಾವ ಬೀರಿ ಅನಂತರ ಸಂಪಾದನೆ, ಸಂಕಲನ, ಟೀಕೆ, ವ್ಯಾಖ್ಯಾನ ಪರಿಷ್ಕರಣೆ, ಪ್ರಕಟಣೆ, ಸಂಶೋಧನೆ, ಪುನರ್ ಸೃಷ್ಟಿ, ಅನುವಾದ ಸಾಹಿತ್ಯ ಇವೆಲ್ಲವುಗಳೊಡನೆ ವಚನ ವಿಮರ್ಶೆಯು ಅನುಭಾವಿಕ, ಕೃತಿ ನಿಷ್ಠ, ವ್ಯಕ್ತಿಕೇಂದ್ರಿತ, ಓದುಗ ಕೇಂದ್ರಿತ, ಸಂಸ್ಕೃತಿ ನಿಷ್ಠ, ಸಂಶೋಧನಾತ್ಮಕ, ಸೈದ್ಧಾಂತಿಕ, ಪ್ರಾಯೋಗಿಕ, ಜನಪದೀಯ, ತೌಲನಿಕ, ರಾಚನಿಕ, ಮನೋವೈಜ್ಞಾನಿಕ, ಸ್ತ್ರೀವಾದಿ, ದಲಿತ, ಬಂಡಾಯವಾದಿ, ವಚನ ನಿರ್ವಚನ ಈ ಬಗೆಯ ಹಲವು ವಿಮರ್ಶೆಗಳ ನೆಲೆಯಲ್ಲಿ ಅತ್ಯಂತ ವಿಪುಲವಾದ ಸಮೃದ್ಧವಾದ ಸಾಹಿತ್ಯ ಸೃಷ್ಟಿಗೆ ಕಾರಣವಾಯಿತು' ಎಂಬುದನ್ನು ಸಶಕ್ತವಾಗಿ ವಿಶ್ಲೇಷಣೆಗೆ ಗುರಿಪಡಿಸಿರುವುದು ಈ ಕೃತಿಯ ಧನಾತ್ಮಕ ಅಂಶ. ವಚನ ವಾಙ್ಮಯದ ಹಿರಿಮೆಯನ್ನು ತೆರೆದಿಡುತ್ತಲೇ ಅದು ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿ ವಿವಿಧ ಆಯಾಮಗಳ ಓದಿಗೆ ಅವಕಾಶ ಮಾಡಿಕೊಟ್ಟಿರುವುದರ ಕಡೆಗೆ ಇಲ್ಲಿ ಗಮನಸೆಳೆಯಲಾಗಿದೆ.

ವಚನ ವಾಙ್ಮಯವನ್ನು ಶಾಸ್ತ್ರಕೃತಿ ಎಂಬ ನೆಲೆಯಿಂದ ತೊಡಗಿ ಸಾಂಸ್ಕೃತಿಕ ಪಠ್ಯವನ್ನಾಗಿ ಗ್ರಹಿಸಿ ಗುರುತಿಸುವ ಪ್ರಯತ್ನಗಳು ನಡೆದಿವೆ. ಅಂದಿನಿಂದ ಇಂದಿನವರೆಗಿನ ವಚನ ಸಾಹಿತ್ಯದ ಅಧ್ಯಯನವನ್ನು ಮುಖ್ಯವಾಗಿ ೧. ಮಧ್ಯಕಾಲೀನ ಸಾಹಿತ್ಯ ಸಂದರ್ಭ, ೨. ಜನಪದ ಸಾಹಿತ್ಯ ಸಂದರ್ಭ, ೩. ಆಧುನಿಕ ಸಾಹಿತ್ಯ ಸಂದರ್ಭ, ೪. ಸೃಜನಶೀಲ ಸಾಹಿತ್ಯ ಸಂದರ್ಭ ೫. ಸ್ತ್ರೀವಾದಿ ಅಧ್ಯಯನದ ಸಂದರ್ಭದಲ್ಲಿ ಇಟ್ಟು ತಾಳೆಹಾಕಿ ನೋಡಲಾಗಿದೆ. ವಚನ ಸಾಹಿತ್ಯದ ಅಧ್ಯಯನ ಯಾವ ಬಗೆಯ ಪ್ರೇರಣೆ ಪ್ರಭಾವಗಳನ್ನು ನೀಡಿದೆ ಎಂಬುದನ್ನು ಸಾಧಾರವಾಗಿ ನಿರೂಪಿಸಲಾಗಿದೆ. ಖ್ಯಾತ ಆಂಗ್ಲಕವಿ-ವಿಮರ್ಶಕ

ಟಿ.ಎಸ್. ಎಲಿಯಟ್ ಒಂದು ಕಡೆ 'ಕಾಲದಿಂದ ಕಾಲಕ್ಕೆ ಪ್ರತಿ ನೂರು ವರ್ಷಕ್ಕೊಮ್ಮೆಯಾದರೂ ನಮ್ಮ ಪ್ರಾಚೀನ ಸಾಹಿತ್ಯ, ಕವಿ-ಕಾವ್ಯಗಳನ್ನು ಹೊಸ 'ಆಲೋಚನಾ ಕ್ರಮದಲ್ಲಿ ಮರುಚಿಂತನೆಗೆ, ಪುನರ್ ವಿಮರ್ಶೆಗೆ ಒಳಪಡಿಸುವ ಕಾರ್ಯವನ್ನು' ವಿಮರ್ಶಕರು ಮಾಡಬೇಕೆಂದಿದ್ದಾನೆ. ವಚನ ಸಾಹಿತ್ಯ ಸೃಷ್ಟಿಯಾದಂದಿನಿಂದ ಅದನ್ನು ಮತ್ತೆ ಮತ್ತೆ ಮರುವ್ಯಾಖ್ಯಾನಕ್ಕೆ, ಪುನರ್ ಅವಲೋಕನಕ್ಕೆ ಗುರಿಪಡಿಸುವ ಕಾರ್ಯ ನಿರಂತರವಾಗಿ ಸಾಗಿ ಬಂದಿದೆ. ನಮ್ಮಲ್ಲಿ ಇತರ ಯಾವುದೇ ಸಾಹಿತ್ಯ ಪ್ರಕಾರ 'ವಚನ ಸಾಹಿತ್ಯದಷ್ಟು ದೊಡ್ಡ ಪ್ರಮಾಣದಲ್ಲಿ ಸಂಕಲನ, ಸಂಪಾದನೆ, ಪರಿಷ್ಕರಣೆ, ವಿಮರ್ಶೆ, ಸಂಶೋಧನೆಗೆ ಗುರಿಯಾಗಿಲ್ಲ'. 'ವಚನಗಳ ರೂಪ, ರಚನೆ, ಆಶಯ, ಆಯಾಮಗಳಿಂದ ಮೊದಲ್ಗೊಂಡು ವಚನಗಳ ಸಂಗ್ರಹ ಕಾರ್ಯ, ಸಂಕಲನಕಾರ್ಯ, ಸಂಪಾದನಾಕಾರ್ಯ, ಪರಿಷ್ಕರಣೆಕಾರ್ಯ, ಪ್ರಕಟಣಕಾರ್ಯ, ಅಧ್ಯಯನ, ಸಂಶೋಧನೆ, ವಿಮರ್ಶೆ ಇವುಗಳಲ್ಲದೆ ಅಂತರ ಪಠ್ಯೀಯ ನೆಲೆಯಲ್ಲಿಯೂ ಚರ್ಚಿತವಾಗಿರುವ ವಚನ ಸಾಹಿತ್ಯದ ವೈವಿಧ್ಯಪೂರ್ಣ ನೆಲೆಗಳನ್ನು ಗುರುತಿಸಿ ವಿಶ್ಲೇಷಿಸಿರುವುದು ಈ ಕೃತಿಯ ಹೆಚ್ಚುಗಾರಿಕೆ.

ನಿಜವಾಗಿಯೂ ವಚನ ವಾಙ್ಮಯ ಅಮೂಲ್ಯ ತವನಿಧಿ. ಅದು ಎಂಟು ನೂರು ವರ್ಷಗಳಷ್ಟು ಹಳೆಯದಾದರೂ ಇಂದಿಗೂ ಜನಮನದಲ್ಲಿ ಗಟ್ಟಿಯಾಗಿ ನೆಲೆಸಿದೆ. ವಚನಕಾರರ ತರುವಾಯ ಬಂದ ಹರಿಹರ, ರಾಘವಾಂಕ, ಚಾಮರಸ ಮೊದಲಾದ ಅನೇಕ ಕವಿ ಕೋವಿದರಿಗೆ ವಚನಕಾರರ ಜೀವನ ಸಾಧನೆ ಇನ್ನಿಲ್ಲದ ಪ್ರೇರಣೆ ನೀಡಿ ಶಿವಶರಣರ ಉದಾತ್ತ ಚಾರಿತ್ರ್ಯದ ಹಿನ್ನೆಲೆಯಲ್ಲಿ ಭಿನ್ನ ಬಗೆಯ ಚಾರಿತ್ರ್ಯದ ಕೃಷಿಗೈದುದು ಈಗ ಇತಿಹಾಸ. 'ವಚನಕಾರರು ದೇಸಿ ಬಂಧದಲ್ಲಿ ವಚನಗಳನ್ನು ರಚಿಸಿದರೋ ಅದೇ ಮಾದರಿಯಲ್ಲಿ ಹರಿಹರ ರಾಘವಾಂಕರು ವಚನರೂಪಕ್ಕಿಂತ ಭಿನ್ನವಾದ ದೇಸಿ ಛಂದೋರೂಪಗಳಾದ ರಗಳೆ, ಷಟ್ಪದಿಯ ಕಾವ್ಯಗಳನ್ನು ಸೃಷ್ಟಿಸಿದರು. ವಚನಕಾರರು ಮಾರ್ಗಕಾವ್ಯ ಪರಂಪರೆಗಿಂತ ಭಿನ್ನವಾಗಿ ದೀರ್ಘ ಕಥಾನಕಗಳ ಬದಲು ಬಿಡಿಬಿಡಿಯಾಗಿ ವಚನಗಳನ್ನು ಸೃಷ್ಟಿಸಿದರು. ಆದರೆ ಹರಿಹರ ಚಾಮರಸಾದಿಗಳು ಮತ್ತೆ ಕಥನ ಪರಂಪರೆಗೆ ತೊಡಗಿದರು. ವಚನಕಾರರು ದೇವಾಲಯ ನಿರಾಕರಣೆ, ಜಂಗಮ ತತ್ತ್ವಗಳ ಪ್ರತಿಪಾದನೆಯನ್ನು ಮಾಡಿದರೆ ಹರಿಹರ ಚಾಮರಸಾದಿಗಳು ಧರ್ಮದ ಸಾಂಸ್ಥಿಕ ಪುನಃಸ್ಥಾಪನೆಗೆ ಸಾಹಿತ್ಯ ಕೃಷಿಯ ಮೂಲಕ ನಡೆಸಿದ ಪ್ರಯತ್ನಗಳ ಚರ್ಚೆಯೂ ಇಲ್ಲಿ ಸ್ವಾರಸ್ಯಪೂರ್ಣವಾಗಿ ತೌಲನಿಕವಾಗಿ ವಿಶ್ಲೇಷಿಸಲ್ಪಟ್ಟಿದೆ. ವಿವಿಧ ಕಾಲ ಘಟ್ಟಗಳಲ್ಲಿ ಸಾಂಸ್ಕೃತಿಕ ಸಂದರ್ಭಗಳಿಗೆ ತಕ್ಕಂತೆ ವಚನ ವಾಙ್ಮಯವನ್ನು ಜನಮಾನಸ ತಮ್ಮ ತೆಕ್ಕೆಗೆ ತೆಗೆದುಕೊಂಡ ಪರಿಯ ಅನನ್ಯ ಚಿತ್ರಣವಿಲ್ಲಿದೆ. ಹನ್ನೆರಡನೆಯ ಶತಮಾನದ ಶರಣರ ಕ್ರಾಂತಿಯು ಅಂದಿನ ಹಾಗೂ ಮುಂದಿನ ಜನ ಜೀವನದಲ್ಲಿ ಮೂಡಿಸಿದ ಪ್ರಭಾವ ವಿಶಿಷ್ಟ ತೆರನಾದುದು. ಶರಣರ ಚಿಂತನೆ, ಜೀವನ, ಕಾರ್ಯ ವೈಖರಿಗಳು ಜನಪದರ ಮೇಲೆ ಅಚ್ಚಳಿದ ಪ್ರಭವವನ್ನು ಮಾಡಿತು. ಶರಣರು ಬೋಧಿಸಿದ ಕಾಯಕ ತತ್ತ್ವ, ದಾಸೋಹ ತತ್ತ್ವಗಳನ್ನು ಜನಸಾಮಾನ್ಯರು ಮೈಗೂಡಿಸಿಕೊಂಡರು. ಶರಣರು ಜನಸಾಮಾನ್ಯರಿಗೆ ಪವಾಡ

ಪುರುಷರಾಗಿ ತಮ್ಮ ಹತ್ತಿರದ ದೈವವಾಗಿ ಕಾಣಿಸಿಕೊಂಡರು. ಹೀಗಾಗಿ ಮೌಖಿಕ ಕಾವ್ಯ ಪರಂಪರೆಯಲ್ಲಿಯೂ ಶರಣರ ಪ್ರಭಾವ ಪ್ರೇರಣೆ ದಟ್ಟವಾಗಿ ಕಾಣಿಸಿಕೊಂಡಿತು. ತ್ರಿಪದಿಗಳಿಂದ ಹಿಡಿದು ಜನಪದ ಮಹಾಕಾವ್ಯಗಳಲ್ಲಿ ಶರಣರ ಜೀವನ ಸಂದೇಶ ಮರುಹುಟ್ಟು ಪಡೆಯಿತು.'

ವಚನಕಾರರ ಬಳಿಕದ ಸುಮಾರು ನಾಲ್ಕೈದು ಶತಮಾನಗಳ ಅನಂತರ ಕಾಣಿಸಿಕೊಂಡ (ಮಲೆ ಮಾದೇಶ್ವರ, ಮಂಟೇಸ್ವಾಮಿ) ಮಹಾತ್ಮರ ಚರಿತ್ರೆಯನ್ನು ವಚನಕಾಲದ ಶರಣರ ಚರಿತ್ರೆಯೊಡನೆ ಬೆರೆಸಿ ಹಾಡಿರುವುದು ಜನಪದರಲ್ಲಿ ಬಸವಾದಿ ಶರಣರ ಬಗೆಗೆ ಇದ್ದ ಶ್ರದ್ಧೆ, ನಿಷ್ಠೆ, ಭಕ್ತಿಗಳನ್ನು ಖಚಿತವಾಗಿ ಈ ಶೋಧ ಗ್ರಂಥದಲ್ಲಿ ದಾಖಲಿಸಲಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದ ವಚನ ಸಾಹಿತ್ಯ ಕಾಲದಿಂದ ಕಾಲಕ್ಕೆ ಒಂದು ಪರಂಪರೆಯಿಂದ ಮತ್ತೊಂದು ಪರಂಪರೆಗೆ, ಒಮ್ಮೆ ಮರೆಯಾಗಿ, ಮತ್ತೊಮ್ಮೆ ಪ್ರಕಾಶಮಾನವಾಗಿ ಕಾಣುವಂತೆ ಹರಿದು ಬಂದು ಜನಮನವನ್ನು ತಟ್ಟಿದ, ತಿದ್ದಿದ ಸಂಕಥನವಿಲ್ಲಿ ಸಶಕ್ತವಾಗಿ ಚಿತ್ರಣಗೊಂಡಿದೆ. ಹದಿನೈದನೆಯ ಶತಮಾನದ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರು, ಹದಿನಾರನೆಯ ಶತಮಾನದ ಶ್ರೀ ತೋಂಟದ ಸಿದ್ಧಲಿಂಗಯತಿ ಪರಂಪರೆಯ ಏಳು ನೂರೊಂದು ವಿರಕ್ತರು ವಚನ ವಾಙ್ಮಯವನ್ನು ಸಂಗ್ರಹಿಸಿ, ಸಂಕಲಿಸಿ ಕಾಪಿಡಲು ಬಹುವಾಗಿ ಶ್ರಮಿಸಿದರು. ಮಠಮಾನ್ಯಗಳಲ್ಲಿ ತಾಡೋಲೆ, ಕೋರಿ ಕಾಗದಗಳಲ್ಲಿ ಹುದುಗಿಕೊಂಡಿದ್ದ ವಚನಸಾಹಿತ್ಯವನ್ನು ಮೊತ್ತ ಮೊದಲು ಪ್ರಕಟಿಸುವ ಮೂಲಕ ಬೆಳಕಿಗೆ ತಂದವರು ಫ.ಗು. ಹಳಕಟ್ಟಿ. ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ವಚನ ಸಾಹಿತ್ಯವನ್ನು ಹೇಗೆ ಸಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವ ಕಾರ್ಯ ಚಳುವಳಿಯೋಪಾದಿಯಲ್ಲಿ ನಡೆಯಿತೆಂಬ ವಿವರವೂ ಇಲ್ಲಿ ಸಾಧಾರವಾಗಿ ದಾಖಲಾಗಿದೆ.

ಇಪ್ಪತ್ತನೆಯ ಶತಮಾನ ಕನ್ನಡ ಸಾಹಿತ್ಯದ ಇನ್ನೊಂದು ಸುವರ್ಣಯುಗ. ಹೊಸಗನ್ನಡ ಸಾಹಿತ್ಯದ ಮೂಲ ಪ್ರೇರಣೆ ಪ್ರಧಾನವಾಗಿ ಪಾಶ್ಚಾತ್ಯ ಸಾಹಿತ್ಯವಾದರೂ ದೇಸಿ ಸಾಹಿತ್ಯವಾದ ವಚನ ಸಾಹಿತ್ಯವನ್ನು ಹೊಸಕಾಲದಲ್ಲಿಟ್ಟು ಇಂದಿನ ಸಾಂಸ್ಕೃತಿಕ ಸನ್ನಿವೇಶಗಳೊಡನೆ ಅವಲೋಕಿಸುವ ಮೂಲಕ ಕಾವ್ಯ, ನಾಟಕ, ಕಾದಂಬರಿ, ಜೀವನ ಚರಿತ್ರೆ, ವೈಚಾರಿಕ ಸಾಹಿತ್ಯ, ಮಹಾಕಾವ್ಯಗಳಂಥ ಸೃಜನಶೀಲ ಸಾಹಿತ್ಯ ಪ್ರಕಾರಗಳಿಗೂ ಪ್ರೇರಣೆಯನ್ನು ಒದಗಿಸಿದ ಬಗೆಯನ್ನು ಈ ಕೃತಿಯಲ್ಲಿ ಸಾದ್ಯಂತವಾಗಿ ಚರ್ಚಿಸಲಾಗಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಸಾಹಿತ್ಯ ಪರಂಪರೆಗಳಲ್ಲಿ ವಚನ ಸಾಹಿತ್ಯದ ಓದಿನ ಪ್ರಭಾವವು ಭಿನ್ನ ಭಿನ್ನ ದೃಷ್ಟಿಧೋರಣೆಗಳಲ್ಲಿ ವ್ಯಕ್ತವಾಗಿರುವುದನ್ನು ಸಮಗ್ರವಾಗಿ ಅವಲೋಕಿಸಿರುವುದು ಉಲ್ಲೇಖನೀಯ ಸಂಗತಿ.'ಹೊಸಗನ್ನಡ ಸಾಹಿತ್ಯದ ಎಲ್ಲ ಪರಂಪರೆಗಳಿಗೂ ಜೀವದ್ರವ್ಯವನ್ನು ನೀಡುವ ಮೂಲಕ ವಚನಸಾಹಿತ್ಯ ಪರಂಪರೆಯು ಸಮಗ್ರ ಜೀವನಾನುಭವದ ಅಭಿವ್ಯಕ್ತಿ ಎನಿಸಿದೆ; ತನ್ನ ಪ್ರಸ್ತುತತೆಯನ್ನು ಕಾಯ್ದುಕೊಂಡು ಬಂದಿದೆ' ಎಂಬ ಮಾತು ಸ್ವೀಕಾರಾರ್ಹವಾಗಿದೆ. ವಚನ ಚಳುವಳಿಯ ಕಾಲದಲ್ಲಿ

ಮಹಿಳೆಗೆ ಎಲ್ಲ ಕ್ಷೇತ್ರಗಳಲ್ಲೂ ಸಮಾನತೆ ದೊರಕಿಸಿಕೊಡಲು ವಚನಕಾರರು ಕ್ರಿಯಾಶೀಲರಾದುದು ಇಂದಿನ ಸ್ತ್ರೀವಾದದ ತತ್ತ್ವಗಳಿಗೆ ಸಾಕಷ್ಟು ಪುಷ್ಟಿಯನ್ನು ನೀಡುವ ಅಂಶವೆನಿಸಿದೆ. ಈ ಹಿನ್ನೆಲೆಯಲ್ಲಿ ಸ್ತ್ರೀವಾದಿ ಚಿಂತನೆಯ ವಚನ ಸಾಹಿತ್ಯದ ಓದು ಒಂದು ವಿಶೇಷ ಅಧ್ಯಯನ ಕ್ಷೇತ್ರವೆನಿಸಿದೆ ಎಂಬ ಮಹತ್ವದ ಸಂಗತಿಯತ್ತ ಡಾ. ಮನೋನ್ಮನಿ ಅವರು ನಮ್ಮ ಗಮನ ಸೆಳೆದಿದ್ದಾರೆ. ಒಟ್ಟಾರೆ ವಚನ ವಾಙ್ಮಯದ ಹಿರಿಮೆ ಗರಿಮೆ, ಅನನ್ಯತೆಯನ್ನು ಶೋಧಿಸುತ್ತ ಅದರ ಬಹುಮುಖೀ ನೆಲೆಗಳ ಮೇಲೆ ಬೆಳಕು ಹಾಯಿಸಿರುವುದರಿಂದ ಇದೊಂದು ಮಹತ್ವದ ಮಾದರಿ ಶೋಧ ಪ್ರಬಂಧವಾಗಿ, ಉತ್ತಮ ಆಕರ ಗ್ರಂಥವಾಗಿ ಮೂಡಿ ಬಂದಿದೆ. 'ವ್ಯಾಪಕ ಕ್ಷೇತ್ರ ಕಾರ್ಯ, ಆಕರಗಳ ಬಳಕೆ, ಸಮಗ್ರ ಅವಲೋಕನ, ಅನೇಕ ಹೊಸ ಹೊಸ ಸಂಗತಿಗಳ ಸೇರ್ಪಡೆಗಳಿಂದ ಈ ಮಹಾಪ್ರಬಂಧ ವಚನ ಸಾಹಿತ್ಯದ ಅಧ್ಯಯನ ಲೋಕಕ್ಕೆ ವಿಶಿಷ್ಟ ಕೊಡುಗೆಯಾಗಿದೆ' ಎಂದು ಹಿರಿಯ ವಿಮರ್ಶಕ ಡಾ. ಜಿ.ಎಂ. ಹೆಗಡೆ ಅವರು ಈ ಕೃತಿಯ ಮುನ್ನುಡಿಯಲ್ಲಿ ಆಡಿರುವ ಮಾತುಗಳಲ್ಲಿ ತಥ್ಯವಿದೆ.*

---

*** ವಚನ ಸಾಹಿತ್ಯದ ಓದಿನ ವಿಭಿನ್ನ ನೆಲೆಗಳು**
ಲೇ: ಡಾ.ಎಸ್.ಮನೋನ್ಮನಿ ಉದಯಕುಮಾರ,
ಪ್ರ : ಕನ್ನಡ ಅಧ್ಯಯನ ವಿಭಾಗ,
ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಮುಂಬಯಿ – ೪೦೦೦೯೮;
ಮೊದಲ ಮುದ್ರಣ ೨೦೧೪, ಬೆಲೆ ರೂ. ೩೦೦/-
ಪುಟಗಳು XVIII+೩೨೬
ದೂರವಾಣಿ : ೦೨೨-೨೬೫೪೩೫೩೦

■

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೧೧. ಕನ್ನಡ ಸಾಹಿತ್ಯ ದಿಗ್ಗಜರು-ಒಂದು ಪಕ್ಷಿನೋಟ

-ಪ್ರೊ. ಎಸ್. ಬಿಳಿಗಿರಿ ವಾಸನ್*

ಪ್ರೊ. ಜಿ. ಅಶ್ವತ್ಥನಾರಾಯಣ ಅವರು ರಚಿಸಿರುವ 'ಕನ್ನಡ ಸಾಹಿತ್ಯ ದಿಗ್ಗಜರು' (ಆರ್.ವಿ.ಐ.ಎಂ.ನ 'ಸಿಂಚನ' ಕನ್ನಡ ವೇದಿಕೆಯ ಪ್ರಕಟಣೆ) ಎಂಬ ಕೃತಿಯು ಜೂನ್ ೭, ೨೦೧೪ರಂದು ಲೋಕಾರ್ಪಣೆಯಾಯಿತು.

'ಕನ್ನಡ ಸಾಹಿತ್ಯ ದಿಗ್ಗಜರು' ಕೃತಿಯು ಉತ್ತಮ ವಿನ್ಯಾಸದೊಂದಿಗೆ ಮೂಡಿಬಂದಿರುವ ಕೃತಿ. ೧೯ನೆಯ ಶತಮಾನದಲ್ಲಿ ಜನಿಸಿ ಅಪೂರ್ವ ಕನ್ನಡ ಸೇವೆ ಮಾಡಿದ ಹೊಸಗನ್ನಡದ ಉದಯ ಕಾಲದ ಪುಣ್ಯ ಪುರುಷರ ವ್ಯಕ್ತಿತ್ವ ಮೂಡಿಸುವ ರೇಖಾಚಿತ್ರದಂತೆ ಕೆಲವು ವಿಶಿಷ್ಟ ಮುಖಗಳ ಕಿರು ಪರಿಚಯವನ್ನು ನೀಡಿದ್ದು, ಜೀವನ ಚರಿತ್ರೆಯಾಗದೆ, ವ್ಯಕ್ತಿಚಿತ್ರದಲ್ಲೂ ಪುಟ್ಟ ವ್ಯಕ್ತಿಚಿತ್ರವಾಗಿ ೧೯೨ ಪುಟಗಳಲ್ಲಿ ವ್ಯಾಪಿಸಿಕೊಂಡಿದೆ.

ಈ ಗ್ರಂಥದಲ್ಲಿ ೧೨ ಜನ ಕನ್ನಡ ಪುಣ್ಯ ಪುರುಷರ ಪರಿಚಯವಿದೆ. ಅವರೆಂದರೆ ಮಹಾಕವಿ ಗುರು ಟಿ.ಎಸ್. ವೆಂಕಣ್ಣಯ್ಯ, ಕನ್ನಡ ದ್ರೋಣಾಚಾರ್ಯ ಎ.ಆರ್. ಕೃಷ್ಣಶಾಸ್ತ್ರಿ, ಮೊದಲ ರಾಷ್ಟ್ರಕವಿ ಎಂ. ಗೋವಿಂದ ಪೈ, ಕನ್ನಡ ಸಂರಕ್ಷಕ ಡೆಪ್ಯುಟಿ ಚೆನ್ನಬಸಪ್ಪ, ಗ್ರೀಕ್ ಪಂಡಿತ ಕ.ವೆಂ. ರಾಘವಾಚಾರ್, ಕರ್ಣಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯ, ದಿವ್ಯ ಕೀರ್ತನಕಾರ ಹುಯಿಲಗೋಳ ನಾರಾಯಣರಾಯರು, ಕನ್ನಡ ನ್ಯಾಯಾಧೀಶ ಶ್ರೀಕಂಠೇಶಗೌಡ, ಘನ ವಿದ್ವಾಂಸ ದೇವುಡು ನರಸಿಂಹಶಾಸ್ತ್ರೀ, ಶ್ರೇಷ್ಠ ಕತೆಗಾರ ಕೆರೂರು ವಾಸುದೇವಾಚಾರ್ಯ, ದೇಶಭಕ್ತ ಸಾಹಿತಿ ದ.ಕೃ. ಭಾರದ್ವಾಜ, ಕನ್ನಡ ನುಡಿ ಸೇವಕ ವಿದ್ವಾನ್ ಬಾಲಸರಸ್ವತಿ, ಈ ಎಲ್ಲರ ಪರಿಚಯವನ್ನು ಕುರಿತು ಲೇಖಕರು ವಿವರವಾಗಿ ಹೇಳಿದ್ದಾರೆ. ಆದರೆ ಲೇಖನ ಬಾಹುಳ್ಯದ ಭಯದಿಂದ ಒಂದೆರಡು ಸಂಗತಿಗಳನ್ನು ಈ ಗ್ರಂಥ ಹೇಗಿದೆ ಎಂಬುದನ್ನು ತಿಳಿಸಲು ಇಚ್ಛಿಸುತ್ತೇನೆ.

* #. ೭೮, 'ಶ್ರೀ ಶ್ವೇತಾದ್ರಿ', ಸ್ಯಾನಪ್ಪನಹಳ್ಳಿ, ಬೇಗೂರು ಹೋಬಳಿ, ಬೆಂಗಳೂರು-೫೬೦೦೬೮.
ಮೊ: ೯೦೩೬೬೧೨೪೮೮೪

'ಮಹಾಕವಿಯ ಗುರು ಟಿ.ಎಸ್. ವೆಂಕಣ್ಣಯ್ಯ' ಎಂಬ ಲೇಖನದಲ್ಲಿ ರಾಷ್ಟ್ರಕವಿ ಕುವೆಂಪು ಅವರ ಪ್ರಿಯ ಗುರುಗಳಾಗಿದ್ದ ವೆಂಕಣ್ಣಯ್ಯನವರೇ ಹೇಳಿರುವಂತೆ 'ಕನ್ನಡ ಸಾಹಿತ್ಯ ನಂದನವನದಲ್ಲಿ ಕವಿಗಳನ್ನು ಬೆಳೆಸುವ ಕನ್ನಡ ತೋಟದ ಮಾಲಿ ನಾನು ಅಷ್ಟೇ, ನಾನೇ ಮಹಾವೃಕ್ಷವಲ್ಲ' ಎಂದಿರುವ ಅವರು ಸಾಹಿತ್ಯ ನಿರ್ಮಾಣ ಮಾಡಿದ್ದಕ್ಕಿಂತ ಸಾಹಿತಿಗಳ ನಿರ್ಮಾಣ ಮಾಡಿದ್ದೇ ಹೆಚ್ಚು. ಅವರು ಬರೆದುದು ಕಡಿಮೆಯಾದರೂ ಗಾತ್ರದಲ್ಲಿ, ಸತ್ವದಲ್ಲಿ ಹಿರಿದು, ಸ್ಫೂರ್ತಿದಾಯಕವಾದದ್ದು.

ವೆಂಕಣ್ಣಯ್ಯನವರು ಗುಪ್ತದಾನಿಗಳು, ಕೀರ್ತಿ ಕಾಮನೆಯಿಲ್ಲದವರು, ಪಾಂಡಿತ್ಯದಲ್ಲಿ, ಶಿಕ್ಷಕ ವೃತ್ತಿಯಲ್ಲಿ, ವಿದ್ಯಾರ್ಥಿ ಜನಪ್ರಿಯತೆಯಲ್ಲಿ, ಅವರ ಸರಿಸಮಾನರು ಸಿಗಬಹುದು. ಆದರೆ ಕನ್ನಡ ಸಾಹಿತಿಗಳನ್ನು ಬೆಳೆಸುವಲ್ಲಿ, ಮಾನವೀಯ ಗುಣಗಳನ್ನು ಮೆರೆಸುವಲ್ಲಿ ಅವರಂತೆ ಯಾರೂ ಇಲ್ಲ. ಅವರು ವಿಶೇಷ ವಾಗ್ಮಿಗಳು. ವಿ.ಸೀ.ಯವರು ಹೇಳಿದಂತೆ ಅವರದು ಒಂದು ಮನುಷ್ಯ ದೇಹವಲ್ಲ, ಒಂದು ಉಸಿರು, ಒಂದು ಜೀವಗುಣ, ಒಂದು ಬೆಳಕು, ಒಂದು ಪರಿಮಳ, ದೇವತಾ ಮನುಷ್ಯರು ಎಂಬ ಅಂಶವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಕುವೆಂಪು ಅವರ ಇನ್ನೊಬ್ಬ ಗುರುಗಳಾದ 'ಕನ್ನಡ ದ್ರೋಣಾಚಾರ್ಯ ಎ.ಆರ್. ಕೃಷ್ಣಶಾಸ್ತ್ರಿ' ಎಂಬ ಲೇಖನದಲ್ಲಿ ಎ.ಆರ್.ಕೃ. ಅವರನ್ನು ಕುರಿತು ಹೇಳುತ್ತಾ ಗುಂಡಿನೇಟಿನಂತಹ ಕನ್ನಡದ ಸಿಡಿಲು ನುಡಿಗಳು, ಸಿಂಹ ಘರ್ಜನೆ, ರಣಘೋಷ, ನಿರ್ಭೀತರಾಗಿ ಎನ್ನ ನುಡಿ ಟಾಠಾಡಾಢಾಣ ಎಂಬ ಭೀಮವಾಕ್ಕು, ವೀರಯೋಧನ ವಾಣಿ, ಗಂಡುಗಲಿ ಕನ್ನಡಿಗನ ದಿಟ್ಟಗಟ್ಟಿ ನುಡಿಗಳು. ಒಂದಲ್ಲ, ಎರಡಲ್ಲ ನೂರಾರು. 'ಮಾತೃಭಾಷೆಯಲ್ಲಿ ಕಲಿತದ್ದೇ ಮೈಹತ್ತುವುದು, ಬರೆದದ್ದೇ ನಿಲ್ಲುವುದು. ಪರಭಾಷೆಯಲ್ಲಿ ಯಾರು ಎಷ್ಟೇ ಪಂಡಿತರಾಗಿ ಏನೇ ಬರೆಯಲಿ ಅದು ವ್ಯರ್ಥ' ಎಂದು ಸಾರಿದ್ದಾರೆ. ಹೀಗೆ ಅವರ ಗಂಡುವಾಣಿಯನ್ನು ತಿಳಿಸಿದ್ದಾರೆ.

ಅನಂತರ 'ಕನ್ನಡದ ಮೊದಲ ರಾಷ್ಟ್ರಕವಿ ಗೋವಿಂದ ಪೈ' ಎಂಬಲ್ಲಿ ಗೋವಿಂದ ಪೈಗಳನ್ನು ವರ್ಣಿಸುತ್ತಾ 'ಭಾರಿ ಪೊದೆ ಮೀಸೆಯ, ಗಂಡು ಮುಖದ, ಹೊಳಪುಗಣ್ಣುಗಳ, ಕೆದರಿದ ತಲೆಯ, ಸಿಂಹಮುಖದ ವ್ಯಕ್ತಿಚಿತ್ರವನ್ನು ಕಟ್ಟಿಕೊಟ್ಟಿದ್ದಾರೆ. ಇಪ್ಪತ್ತೆರಡಕ್ಕೂ ಹೆಚ್ಚು ಭಾಷೆಗಳನ್ನು ಅರಿತಿರುವುದಷ್ಟೇ ಅಲ್ಲದೆ ಓದು, ಬರಹ, ಮಾತು ಬಲ್ಲವರಾಗಿದ್ದರು.

ಸಂಶೋಧಕರೂ, ಬಹುಭಾಷಾ ತಜ್ಞ, ಇತಿಹಾಸಜ್ಞ, ಕವಿ, ನಾಟಕಕಾರ, ಸಜ್ಜನ ಶಿರೋಮಣಿ, ಜೈನ, ಬೌದ್ಧ ಸಾಹಿತ್ಯ ವಿಶಾರದ, ಜಪಾನಿ, ಪಾಲಿ, ಬಂಗಾಲಿ ಕೃತಿಗಳ ಅನುವಾದಕರಾಗಿ ನಾಡಿನ ಜನತೆಯ ಹೃದಯಾಂಗಣದಲ್ಲಿ ಸದಾ ಬೆಳಗುತ್ತಿರುವ ನಂದದ ಆನಂದದ ನಂದಾದೀಪ 'ಬೆಳ್ಳಿ ಮೀಸೆಯ ಮಗು'ವನ್ನು ವರ್ಣಿಸುತ್ತಾ ಕಣ್ಮುಂದೆ ತಂದು ನಿಲ್ಲಿಸಿದ್ದಾರೆ.

ಐತಿಹಾಸಿಕ ಮಹತ್ವದ ಚಿತ್ರಣವೆಂದರೆ ಈ ಗ್ರಂಥದಲ್ಲಿ 'ಕನ್ನಡ ಸಂರಕ್ಷಕ ಡೆಪ್ಯುಟಿ ಚೆನ್ನಬಸಪ್ಪ ಅವರದು. ಒಂದು ಕಾಲದಲ್ಲಿ ಕನ್ನಡ ಶಿಕ್ಷಣಕ್ಕಾಗಿ, ಕನ್ನಡ ಸಾಹಿತ್ಯ, ಕನ್ನಡ ಭಾಷೆಗೆ, ಶುದ್ಧ ಕನ್ನಡ ಆಡಳಿತಕ್ಕೆ ತನು ಮನ ಧನ ಮೀಸಲಿಟ್ಟು ಕನ್ನಡದ ಹುಲಿಯೆನಿಸಿದವರು ಕನ್ನಡ ಡೆಪ್ಯುಟಿ ಚೆನ್ನಬಸಪ್ಪನವರು. ಒಳ್ಳೆಯ ವಾಗ್ಮಿಗಳಾಗಿದ್ದರು, ಉಚ್ಚ ಧ್ವನಿಯ ಎತ್ತರವಾದ ಬಲವಾದ ಮೈಕಟ್ಟಿನ ತೇಜಃಪುಂಜವಾದ ಮುಖಮುದ್ರೆಯಿಂದ ಮಾರ್ಮಿಕವಾಗಿ ಮಾತನಾಡುತ್ತಿದ್ದ ಕಂಚಿನ ನಾದದ ಅವರ ನುಡಿಗಳು ಜನರನ್ನು ಸ್ತಬ್ಧಗೊಳಿಸುತ್ತಿದ್ದವು. ಕೇಳಿದವರು ಮಂತ್ರಮುಗ್ಧರಾಗುತ್ತಿದ್ದರು.

ಚೆನ್ನಬಸಪ್ಪನವರು ಸಾಹಿತಿಗಳನ್ನು ರೂಪುಗೊಳಿಸಿದ್ದಲ್ಲದೆ ತಾವೇ ಸ್ವತಃ ಸಾಹಿತಿಗಳಾಗಿದ್ದರು. ಕನ್ನಡದಲ್ಲಿ ಷೇಕ್ಸ್‌ಪಿಯರನ್ನು ತಂದ ಮೊದಲಿಗರು. ಶಿಕ್ಷಣ ರಂಗದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ನಾಡಿನ ಸೇವೆ ಸಲ್ಲಿಸಿ ಕನ್ನಡ ಸಂರಕ್ಷಕರಾದ ಡೆಪ್ಯುಟಿ ಚೆನ್ನಬಸಪ್ಪನವರು ಉತ್ತರ ಕರ್ನಾಟಕದಲ್ಲಿ ಕನ್ನಡವನ್ನು ಉಳಿಸಿ ಬೆಳೆಸಿದ ಪುಣ್ಯಪುರುಷರು, ನಿತ್ಯಸ್ಮರಣೀಯರು.

'ಗ್ರೀಕ್ ಪಂಡಿತ ಕ.ವೆಂ. ರಾಘವಾಚಾರ್ ಅವರ ಬಗೆಗಿನ ಲೇಖನದಲ್ಲಿ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀಗಳು ಹೇಳಿರುವಂತೆ "ಶುದ್ಧ ಖಾದಿಯ ಒರಟು ಉಡುಗೆ, ಎಲ್ಲರನ್ನೂ ಮೀರಿಸುವ ಚುರುಕು ನಡಿಗೆ ಎದುರುಗೊಂಡವರನ್ನೂ ಎದುರು ಬಿದ್ದವರನ್ನೂ ಸಮಭಾವದಿಂದ ಸ್ವಾಗತಿಸುವ ರೇಗುಚಹರೆ, ತೀಕ್ಷ್ಣ ನೋಟ, ಕೊಂಚ ಹೊತ್ತಿನಲ್ಲಿ ಕರುಳು ಚುರುಕೆನ್ನುವ ಕೋಮಲಾಂತಃಕರಣ, ಭಾಷಾತಜ್ಞತೆ, ಹಳಗನ್ನಡ ಪ್ರಯೋಗಪಟುತ್ವ, ಪೂರ್ವ ಪಶ್ಚಿಮ ಸಾಹಿತ್ಯ ಪ್ರೇಮ, ಗ್ರೀಕ್ ಭಾಷಾ ಸಾಹಿತ್ಯ ಅವಗಾಹಿತ್ವ, ನಿಘಂಟು ನಿರ್ಮಾಣ ಕ್ಷಮತ್ವ–ಹೀಗೆ ಪಾಂಡಿತ್ಯ ಪರಿಷ್ಕಾರಗಳು, ಹಬ್ಬ ಹುಣ್ಣಿಮೆಯಂದು ಆಪ್ತೇಷ್ಟರಿಗೆ ಆಮಂತ್ರಣ, ಅಗ್ರದೆಲೆಯ ಭೂರಿ ಭೋಜನ, ಸ್ನೇಹ ಸಜ್ಜನಿಕೆಗಳ ಹಿತಮಿತ ಸಲ್ಲಾಪ–ಸಿಡಿದಲ್ಲಿ ಖಂಡತುಂಡಾದ ವಾಗ್ವಾದ ಭುಜವೊಡ್ಡಿ ಸೈಯೆಂದು ಸೆಡ್ಡು ಹೊಡೆದರೆ ತಿಕ್ಕಿ ತೀಡುವ ಜಗಳಗಂಟಿತನದ ಜಾಗರ ಇಲ್ಲವೇ ತೆಪ್ಪಗೆ ತನ್ನಲ್ಲೇ ಆತ್ಮಾರಾಮವಾಗಿರುವ ಒಂಟಿಗತನದ ಅಜಗರ, ಸ್ನೇಹ ವ್ಯವಹಾರ ಎರಡರಲ್ಲೂ ನಾರಿಕೇಳಪಾಕ, ಪರಿಸ್ಥಿತಿ ಬಿಗಡಾಯಿಸಿದಾಗ ಅಷ್ಟಿಷ್ಟು ಹೊಂದಿಕೊಳ್ಳೋಣವೆಂಬ ಭಾವ. ಒಟ್ಟಿನಲ್ಲಿ ಅವರದು "ಸಿಡಿಲನ್ನಂ ಸಿಂಗದನ್ನಂ ವ್ಯಕ್ತಿತ್ವ' ಎಂಬ ವರ್ಣನೆ ಬರುತ್ತದೆ. ಭಾರತದ ಭಾಷೆಗಳಲ್ಲೇ ಮೊದಲ ಬಾರಿಗೆ ಕನ್ನಡಕ್ಕೆ ನೇರವಾಗಿ ಗ್ರೀಕ್ ನಾಟಕ ಸಾಹಿತ್ಯವನ್ನು ಗ್ರೀಕಿನಿಂದ ನೇರವಾಗಿ ಕನ್ನಡಕ್ಕೆ ತಂದವರು; ಗೋವಿಂದ ಪೈ ನಂತರದ ಮಹಾಪುರುಷರು.

'ಕರ್ನಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯನವರು ನಮ್ಮ ಜನ ಮರೆತ ಘನವಿದ್ವಾಂಸ ಸಾಹಿತಿಗಳಲ್ಲಿ ಒಬ್ಬರು. ಕಾರಂತರಂತೆ ನಾಟಕ, ಕಥೆ, ಕಾದಂಬರಿ, ವೇದಾಂತ, ಅನುವಾದ ಟೀಕೆ, ಜೀವನಚರಿತ್ರೆ, ಕೀರ್ತನೆ, ಹರಿಕಥೆ, ವಿಮರ್ಶೆ, ಕಾವ್ಯ, ಕವನ, ಶಿಕ್ಷಣ, ಪ್ರಬಂಧ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ೮೦ಕ್ಕೂ ಹೆಚ್ಚು ಗ್ರಂಥಗಳನ್ನೂ, ನೂರಾರು ಲೇಖನಗಳನ್ನು ರಚಿಸಿ ಪ್ರಕಟಿಸಿದ ಸಾಹಿತ್ಯ ಸವ್ಯಸಾಚಿಗಳು. ಕನ್ನಡದಲ್ಲಿ

ಸಾಹಿತ್ಯ ಗ್ರಂಥಗಳನ್ನು ಅಧಿಕವಾಗಿ ಬರೆದವರಲ್ಲಿ ಮೊದಲನೆಯವರು. ಚಿದಂಬರಯ್ಯನವರ ಸಾಹಿತ್ಯ ಸೇವೆಯನ್ನು ಪರಿಗಣಿಸಿ ಮೆಚ್ಚಿ ಧಾರವಾಡದ ವಿದ್ವತ್ ಸಭೆಯಲ್ಲಿ ಇವರಿಗೆ 'ಕರ್ಣಾಟಕ ಕವಿರತ್ನ' ಎಂಬ ಬಿರುದನ್ನಿತ್ತು ಗೌರವಿಸಿದರು. ಅಂತಹ ಅಪೂರ್ವ ಸಾಹಿತಿಗಳನ್ನು ಪರಿಚಯಿಸಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠ ಗ್ರಂಥಗಳನ್ನು ರಚಿಸಿ, ಹೊಸಗನ್ನಡ ಗದ್ಯಕ್ಕೆ ವಿಶೇಷ ಕೊಡುಗೆಗಳನ್ನಿತ್ತು, ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ವಿದ್ವಾಂಸರೊಡನೆ ಸೈ ಎನಿಸಿಕೊಂಡು ಸಾತ್ವಿಕ ಜೀವನ ನಡೆಸಿದ ಪ್ರೈಮರಿ ಶಾಲಾ ಮಾಸ್ತರು, ಅದ್ವಿತೀಯ ವಿದ್ವಾಂಸ, ಸಾಹಿತಿ, ಕರ್ಣಾಟಕ ಕವಿರತ್ನ ಹೊಸಕೆರೆ ಚಿದಂಬರಯ್ಯನವರು ತಮ್ಮ ಸಾಹಿತ್ಯ ಸೇವೆಯಿಂದ ಇಂದಿಗೂ ಸ್ಫೂರ್ತಿ ಮೂರ್ತಿಗಳಾಗಿದ್ದಾರೆ.

ವರಕವಿ ಡಾ॥ ದ.ರಾ. ಬೇಂದ್ರೆಯವರ ಗುರುಗಳೂ, ಗದುಗಿನ ವೀರ ನಾರಾಯಣನ ಪರಮಭಕ್ತರೂ, ಕುಮಾರವ್ಯಾಸನಲ್ಲಿರುವ ಅಪಾರ ಭಕ್ತಿಯಿಂದ ಕುಮಾರವ್ಯಾಸ ಭಾರತವನ್ನು ಕಂಠಗತ, ಹೃದ್ಗತ ಮಾಡಿಕೊಂಡಿದ್ದವರೂ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ನಾಡಗೀತೆಯನ್ನು ರಚಿಸಿದವರೂ ಸುಮಧುರವಾದ ಈ ನಾಡಗೀತೆಯನ್ನು ಕೇಳಿದ ಮಹಾತ್ಮಾಗಾಂಧಿಯವರಿಂದ ಅಭಿನಂದಿಸಲ್ಪಟ್ಟವರೂ ಸಾಹಿತಿಗಳೂ ದೇಶಪ್ರೇಮಿಗಳೂ ನಾಟಕಕಾರರೂ ನಾಟಕ ಗೀತಕಾರರೂ ಆಗಿದ್ದ ದಿವ್ಯಕೀರ್ತನಕಾರ ಹುಯಿಲಗೋಳ ನಾರಾಯಣರಾಯರ ಅಪೂರ್ವ ಚಿತ್ರಣ ಇಲ್ಲಿ ಸೊಗಸಾಗಿ ಬಂದಿದೆ.

ಹಾಸ್ಯ ಸಾಹಿತಿ, ಪ್ರಸಿದ್ಧ ನಾಟಕಕಾರರಾಗಿ, ಕಾದಂಬರಿಕಾರರಾಗಿ, ವಕೀಲರೂ, ನ್ಯಾಯಾಧೀಶರೂ ಆಗಿದ್ದು, ಸಂಸ್ಕೃತ, ಕನ್ನಡ, ಇಂಗ್ಲಿಷ್ ಭಾಷೆಗಳಲ್ಲಿ ಪ್ರಾವೀಣ್ಯತೆಯನ್ನು ಹೊಂದಿದ್ದು, ೨೦ನೆಯ ಶತಮಾನದ ಪ್ರಾರಂಭದಲ್ಲಿ ಆಡಳಿತದಲ್ಲಿ ಕನ್ನಡವನ್ನು ಜಾರಿಗೆ ತಂದ ಅಧಿಕಾರಿಗಳಾಗಿ, ಅಗ್ರಗಣ್ಯರಾಗಿದ್ದ ಶ್ರೀಕಂಠೇಗೌಡರು ರಾರಾಜಿಸಿದ್ದಾರೆ.

ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ ಅವರ ಪ್ರಿಯ ಶಿಷ್ಯರೂ ಕನ್ನಡ ಸಾಹಿತಿಗಳಾದ ಡಾ॥ ವಿ.ಸೀ. ಅವರ ಸಹಪಾಠಿಗಳೂ ಸಾಹಿತ್ಯ ವೇದಾಂತಗಳಲ್ಲಿ, ಕನ್ನಡ, ತೆಲುಗು, ಇಂಗ್ಲಿಷ್, ಸಂಸ್ಕೃತಗಳಲ್ಲಿ ಪಂಡಿತರೂ ಶಿಕ್ಷಣ ತಜ್ಞರೂ ಮಕ್ಕಳ ಪ್ರೇಮಿಗಳೂ ಆದರ್ಶ ಅಧ್ಯಾಪಕರೂ ತುಂಬು ಸಂಸಾರದ ಸದ್ಗೃಹಸ್ಥರೂ ಸರ್ವ ಸೋದರಭಾವ, ಹೃದಯ ವೈಶಾಲ್ಯ, ಮನುಜಕುಲ ಒಂದೇ ಕುಲವೆಂಬ ದೇಶಾಚಾರ, ಕುಲಾಚಾರಗಳನ್ನು ಮೀರಿದ ಮಾನವೀಯ ಸ್ವಭಾವದವರಾಗಿದ್ದು, ಒಂದು ರೀತಿಯಲ್ಲಿ ವಿಶ್ವಮಾನವರು, ಘನವಿದ್ವಾಂಸ ದೇವುಡು ನರಸಿಂಹಶಾಸ್ತ್ರೀಗಳು ವಿರಾಜಿಸಿದ್ದಾರೆ.

ಸಾರಸ್ವತ ಲೋಕದಲ್ಲಿ, ಸಾಹಿತ್ಯ ಲೋಕದಲ್ಲಿ ಶ್ರೀನಿವಾಸಸುತ, ಬಾಗಿಲುಕೋಟೆಯ ಆಚಾರ್ಯರು ಕಾವ್ಯನಾಮಗಳಿಂದ ಸಾಹಿತ್ಯ ಸೇವೆಯನ್ನು ಪ್ರಾರಂಭಿಸಿದವರೂ ಸ್ನೇಹಿತರ ವಲಯದಲ್ಲಿ "ಬಾಗಿಲುಕೋಟೆಯ ಶಾಲಿಗ್ರಾಮ;" ಎಂದು ವಿನೋದಕ್ಕೆ ಪಕ್ಕಾಗಿದ್ದವರು,

"ಕನ್ನಡದ ವಾಲ್ಟರ್ ಸ್ಕಾಟ್" ಎಂಬ ಕೀರ್ತಿಭಾಜನರೂ ಪ್ರಸಿದ್ಧ ವಕೀಲರೂ ಸಾಹಿತ್ಯ ಪ್ರೇಮಿಗಳೂ ಆಗಿದ್ದ ಶ್ರೇಷ್ಠ ಕತೆಗಾರ ಕೆರೂರು ವಾಸುದೇವಾಚಾರ್ಯರ ವೃತ್ತಾಂತವಿದೆ.

ದ.ಕೃ. ಭಾರದ್ವಾಜರು ಎಂದೊಡನೆ ನೆನಪಾಗುವುದು ಅವರ ಇಂಗ್ಲಿಷ್ ಕನ್ನಡ ನಿಘಂಟು. ನಮ್ಮ ತಾತನವರ ಕಾಲದಿಂದ ನಮ್ಮವರಗೆ ಎಲ್ಲರೂ ಬಳಸಿದ ನಿಘಂಟು ಅದು. ಅವರದು ಬಹುಮುಖ ಪ್ರತಿಭೆ. ಆಯುರ್ವೇದ ಪ್ರವೀಣರು; ಮಕ್ಕಳ ಪುಸ್ತಕ, ಪತ್ರಿಕೆ ಸಂಪಾದಕರು, ರಂಗಭೂಮಿ ಪತ್ರಿಕೆ ಪ್ರಾರಂಭಿಸಿದವರು, ಹಿಂದೀ ಪ್ರಚಾರಕರು, ಗಾಂಧಿ ಭಕ್ತರು, ಗಾಂಧೀ ಸಾಹಿತ್ಯ ರಚನಕಾರರು, ಹಾಸ್ಯಗಾರರು, ಪುಸ್ತಕ ಸಂಗ್ರಹಕಾರರು, ಸಮಾಜ ಸುಧಾರಕರು; ಮೊದಲ ಬಾರಿಗೆ ದಾಂಪತ್ಯ ವಿಜ್ಞಾನ, ಆಹಾರ ವಿಜ್ಞಾನ, ಸಂತಾನ ವಿಜ್ಞಾನ ಮುಂತಾದ ಕೃತಿಗಳನ್ನು ಕನ್ನಡಕ್ಕೆ ತಂದವರು. ಬಹುಭಾಷಾ ವಿಶಾರದರು, ಬಹುಮುಖ ಪ್ರತಿಭೆಯ ಸಾಹಿತಿ, ವಿದ್ವಾಂಸರು, ಕಲಾವಿದರು, ದೇಶಭಕ್ತ ಸಾಹಿತಿ ದ.ಕೃ. ಭಾರದ್ವಾಜ ಅವರನ್ನು ಮೊದಲ ಬಾರಿಗೆ ವಿಶಿಷ್ಟ ರೀತಿಯಲ್ಲಿ ಪರಿಚಯಿಸಿದ್ದಾರೆ.

ಈ ಗ್ರಂಥದಲ್ಲಿ ಕೊನೆಯ ಲೇಖನವಾದರೂ ಮಹತ್ವಪೂರ್ಣ ಅಪರೂಪದ ಲೇಖನ ಬಾಲ ಸರಸ್ವತಿಯವರನ್ನು ಕುರಿತದ್ದು. ಬಾಲಸರಸ್ವತಿಯವರು ಅಸಾಧ್ಯರಲ್ಲಿ ಅಸಾಧ್ಯ ಪುರುಷರು. ಡಿ.ವಿ.ಜಿ.ಯವರು ವರ್ಣಿಸಿರುವಂತೆ "ಆಳು ಗಿಡ್ಡೆಂದೇ ಹೇಳಬೇಕು. ದಪ್ಪವೂ ಅಲ್ಲ, ಬಣ್ಣ ಎಣ್ಣೆಗೆಂಪು, ಸೊಗಸಾಗಿ ಬಾಚಿ ಪೋದಿ ಮಾಡಿದ ಗಡ್ಡ, ತಲೆ ತುಂಬಾ ಕೂದಲು, ಬೈತಲೆ ತೀಡಿ ಹಾಕಿದ ಎಣ್ಣೆಗಂಟು, ಹಣೆಯಲ್ಲಿ ದಮಡಿ ಅಗಲದ ಕುಂಕುಮದ ಬೊಟ್ಟು" ಇರುವ 'ವಿದ್ವಾನ್ ಬಾಲ ಸರಸ್ವತಿ' ಕಾವ್ಯನಾಮದ ನರಹರಿ ಆಚಾರ್ಯರು. ಬೆಂಗಳೂರಿನ ಆಚಾರ್ಯ ಪಾಠಶಾಲೆಯನ್ನು ಸ್ಥಾಪಿಸಿದವರು, ನರ್ಸರಿ ಶಿಕ್ಷಣ ಶಾಲೆಯನ್ನು ಮೊದಲು ನಡೆಸಿದವರು, ಸಂಸ್ಕೃತದಲ್ಲಿ ಬೈಬಲ್ ಬರೆದವರು. ಬಂಗಾಳಕ್ಕೆ ಹೋಗಿ ಬಂಗಾಳಿ ಭಾಷೆಯನ್ನು ಕಲಿತವರು, ಡಿ.ವಿ.ಜಿ.ಯವರಿಗೆ ಸಂಸ್ಕೃತ ಹೇಳಿಕೊಟ್ಟವರು.

ಸ್ವತಂತ್ರ ವೃತ್ತಿಯ ಸಾಹಿತಿ, ಮ್ಕಕಳ ಶಿಕ್ಷಕ, ಅನುವಾದಕ, ವಾಗ್ವಿಶಾರದ, ಸಂಸ್ಕೃತ ಪಂಡಿತವರೇಣ್ಯ, ೪೦ಕ್ಕೂ ಹೆಚ್ಚು ಪತ್ತೇದಾರಿ ಕಾದಂಬರಿಗಳನ್ನು ರಚಿಸಿದ ಮಹಾನ್ ಸಾಹಿತಿ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪತ್ತೇದಾರಿ ಕಾದಂಬರಿಗಳ ಇತಿಹಾಸ ಸೃಷ್ಟಿಸಿ, ಬಂಗಾಳಿಯಿಂದ ಅನುವಾದ ಮಾಡಿ, ಕನ್ನಡ ಸಿರಿ ಹೆಚ್ಚಿಸಿ, ಸಂಸ್ಕೃತ ಸೌರಭವನ್ನು ಎಲ್ಲೆಡೆ ಬೀರಿ, ಕನ್ನಡದ ಓದುಗರಿಗೆ ತಮ್ಮ ಕೃತಿಗಳಿಂದ ಅಜರಾಮರರಾಗಿ ವಿದ್ವಾಂಸ ಬಾಲ ಸರಸ್ವತಿಯವರು ಇಂದಿಗೂ ಮರೆಯಲಾಗದ, ಮರೆಯಬಾರದ ಸಾಹಿತಿ ವಿದ್ವಾಂಸರಾಗಿದ್ದಾರೆ.

ಹೀಗೆ ಅಪೂರ್ವ ವ್ಯಕ್ತಿಗಳ ಅಸಾಧ್ಯ ಸಾಧನೆಗಳನ್ನು ಅನಾಜಿಯವರು ಈ ಗ್ರಂಥದಲ್ಲಿ ನಿರೂಪಿಸಿದ್ದಾರೆ. ಒಂದು ಕಾಲದಲ್ಲಿ ಕನ್ನಡದ ಅಧ್ವರ್ಯರಾಗಿ ಕಾಯಾ ವಾಚಾ ಮನಸಾ ಕನ್ನಡವನ್ನು ಉಳಿಸಿ ಬೆಳೆಸಿದಂತಹ ಕನ್ನಡದ ದಿಗ್ಗಜರು, ಇಂದಿನ ಕನ್ನಡಿಗರಿಗೆ ಅಪರೂಪವಾಗಿ, ಅಶರೀರಗಳಾಗಿ, ಅದೃಶ್ಯರಾಗಿ, ಅಪರಿಚಿತರಾಗಿರುವವರನ್ನು

ಇಂದಿನ ಕನ್ನಡಿಗರಿಗೆ ಪರಿಚಯಿಸುವಂತಹ ಅಮೋಘವಾದ ಕಾರ್ಯವು ಈ ಕೃತಿಯಿಂದಾಗಿದೆ. ಗ್ರಂಥಕರ್ತರಾದ ಪ್ರೊ॥ ಜಿ. ಅಶ್ವತ್ಥನಾರಾಯಣ ಅವರ ಶೈಲಿ ಅತ್ಯಂತ ಹೃದ್ಯವಾಗಿದ್ದು, ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಸದ್ದುಗದ್ದಲವಿಲ್ಲದೆ ಕೀರ್ತಿ ಕಾಮಿಗಳಾಗದೆ, ವನಸುಮವು ಸೌರಭವನ್ನು ಸೂಸುವಂತೆ ಕನ್ನಡದ ಸೌರಭವನ್ನು ಸೂಸುತ್ತಾ ಕನ್ನಡ ಸಾಹಿತ್ಯದ ಪರಿಚಾರಕರಾಗಿ ಕೈಂಕರ್ಯವನ್ನು ಸಲ್ಲಿಸುತ್ತಿದ್ದಾರೆ. ಅವರಿಂದ ಇನ್ನೂ ಉತ್ತಮ ಕೃತಿಗಳು ಕನ್ನಡದ ಸಹೃದಯರಿಗೆ ದೊರೆಯುವಂತಾಗಲೆಂದು ಆಶಿಸುತ್ತೇನೆ. ಈ ಗ್ರಂಥವನ್ನು ಓದಿದವರು ಭಾಗ್ಯಶಾಲಿಗಳು, ಪುಣ್ಯಮೂರ್ತಿಗಳು, ಆನಂದಪುರುಷರು, ಓದದವರ ಬಗ್ಗೆ ನಾನೇನೂ ಹೇಳುವುದಿಲ್ಲ.



ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೧೨. ಬೆಂಗಳೂರಿನ ಅಗರ ಗ್ರಾಮದ ವೆಂಕಟೇಶ್ವರ ದೇವಾಲಯದ ಅಪ್ರಕಟಿತ ಶಿಲಾಶಾಸನಗಳು

-ಶಿಲ್ಪ. ಎಸ್.*

ಬೆಂಗಳೂರು ನಗರದ ಅಗರ ಪ್ರದೇಶದಲ್ಲಿರುವ ವೆಂಕಟೇಶ್ವರ ದೇವಾಲಯದಲ್ಲಿ ೧೮ನೇ ಶತಮಾನದ ಎರಡು ಶಾಸನಗಳು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪತ್ತೆಯಾದವು. ಇತ್ತೀಚೆಗೆ ಜೀರ್ಣೋದ್ಧಾರದ ಸಂದರ್ಭದಲ್ಲಿ ದೇವಾಲಯದ ಭಿತ್ತಿಯಲ್ಲಿದ್ದ ಈ ಶಿಲಾಶಾಸನಗಳನ್ನು ರಾಯಗೋಪುರದ ಬಾಗಿಲಿನ ಇಕ್ಕೆಲದ ಹೊರಭಿತ್ತಿಯ ಕೆಳಭಾಗದಲ್ಲಿ ಜೋಡಿಸಿದ್ದಾರೆ. ಇಲ್ಲಿನ ಮೊದಲನೇ ಶಾಸನವು ಸುಮಾರು ಒಂದುವರೆ ಅಡಿ ಎತ್ತರ ಹಾಗೂ ೫ ಅಡಿ ಅಗಲವಾದ ಕಣಶಿಲೆಯ ಮೇಲೆ ಕೊರೆಯಲಾಗಿದೆ. ಈ ಶಾಸನವು ಕನ್ನಡಲಿಪಿ ಮತ್ತು ಸಂಸ್ಕೃತ ಭಾಷೆಯಲ್ಲಿ ರಚನೆಯಾಗಿದೆ. ಲಿಪಿಯ ದೃಷ್ಟಿಯಿಂದ ಈ ಶಾಸನವನ್ನು ಕ್ರಿ.ಶ. ೧೮ನೇ ಶತಮಾನದ್ದೆಂದು ಗುರುತಿಸಬಹುದು.

**ಮೊದಲನೇ ಶಾಸನ:**

**೧. ಶ್ರೀ ಧರ್ಮೋವಿಜಯತಾಃ**

**೨. ಸಮಸ್ತದೋಷಗರಳಂ ಪಾಶ್ಚಾ ಸದ್ಗುಣ ಶಾಲಿನಃಯುದಕ್ಷ ಸರ್ವೇ ಸಂಕೃಸ್ಮಾದ್ರಾಮೋಯಮ**

**೩. ಗರಾಭಿದಃ॥ ಅಕ್ರೃಧಕೆ ಗುಣ್ಯೈಃ ಪೂರ್ಣೋನಂಜರಡ್ಯಾತ್ಮ ಜೋಧನೀ॥ ನಂದ್ಯಾಂಬಾ ಗರ್ಭ ಸಂ**

**೪. ಭೂತ(ಸ್ಟ) ರಾಮರಡ್ಯಾಭಿ ಧಾನಾಮ್ ಪೂರ್ಣ॥ ಶಾಲೀವಾಹ ಶಕೇ ಸಪ್ತ ನೇತ್ರಾ**

---

* ಸಂಶೋಧನಾ ವಿದ್ಯಾರ್ಥಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು. ದೂ.೯೯೦೨೪೬೧೬೦೨

(ಪ) ಕ್ಷಿತಿನಂ ಮಿತೆವರ್ತಮಾನೇ ಕ್ರೋಧಿ ವರ್ಷಸಃ

೫. ವೈಶಾಖ ಶುಕ್ಲ ಪಕ್ಷೇ॥ ದ್ವಾದಶಾ ೧೦ ಬುಧವಾರೇಶು ಮಂದಿರೇ ನೂತನೇನಪಾರಃ ಶ್ರೀನಿವಾಸ ಪತಿ ಪಾಂನಸಮಃ॥ ಗಯದಾಧರಾತ್॥

**ಶಾಸನದ ವಿಶ್ಲೇಷಣೆ:**

ಈ ಶಾಸನವು ನಂಜರೆಡ್ಡಿ ಮತ್ತು ನಂದ್ಯಾಂಭರ ಪುತ್ರನಾದ ರಾಮರೆಡ್ಡಿ ಎಂಬುವನು ಅಗರದಲ್ಲಿ ನೂತನವಾಗಿ ಶ್ರೀನಿವಾಸ ದೇವಾಲಯವನ್ನು ನಿರ್ಮಿಸಿರುವ ವಿಷಯವನ್ನು ದಾಖಲಿಸಿದೆ. ಶಾಸನದಲ್ಲಿ ಉಕ್ತವಾದ ಕಾಲ ಶಾಲೀವಾಹನ ಶಕ ಕ್ರೋಧಿ ಸಂವತ್ಸರ ವೈಶಾಖ ಶುಕ್ಲ ಪಕ್ಷ ದ್ವಾದಶಾ ೧೦ ಬುಧವಾರ. ಇದು ಕ್ರಿ.ಶ.೧೭೨೪ ಏಪ್ರಿಲ್ ೨೨ ಬುಧವಾರ ಅಥವಾ ಕ್ರಿ.ಶ. ೧೭೮೪ ಏಪ್ರಿಲ್ ೨೮ ಬುಧವಾರಕ್ಕೆ ಸರಿಹೊಂದುತ್ತದೆ. ಶಕವರ್ಷವನ್ನು ಸಪ್ತ, ನೇತ್ರಾ, ಕ್ಷಿತಿನಂಗಳಲ್ಲಿ ಸಂಕೇತವಾಗಿ ಬಳಸಿರುವುದು ವಿಶೇಷ. ಈ ಶಾಸನದ ಲಿಪಿಯು ೧೮ನೇ ಶತಮಾನಕ್ಕೆ ಸೇರಿದ್ದಾಗಿದ್ದು, ಶಾಸನದಲ್ಲಿ ಉಲ್ಲೇಖದಂತೆ ಈ ಎರಡೂ ಕಾಲಕ್ಕೂ ಸರಿಹೊಂದುತ್ತದೆ.

**ಎರಡನೇ ಶಾಸನ:**

೧. ಗರ್ಭ
೨. ಗೃಹಃ
೩. ಸುಖ
೪. ನಾಶಿ
೫. ಅಂತ
೬ ರಾಳಂ
೭ ನವರಂ
೮. ಗಂ
೯. ಮುಖ
೧೦. ಮಂಟಪಃ
೧೧. ಮಹಾದ್ವಾರಂ ಪೂರ್ವ ಪಶ್ಚಿಮ
೧೨. ನುಂಚಿವೆನಕ ೩೫॥
೧೩. ಗೂಡವರಕು ವುತ್ತರದ
೧೪. ೩೫॥ ಹ ಪಣಂ ೧೬।
೧೫. .ಕಂಬಕೆ .ಯಂದಕು
೧೬. .ದಂ ೫೯೫
೧೭. ಧನಂ ೮ ಯಂತ್ರ ೪
೧೮. .ಣಂ ೧
೧೯. ಹಾಸ ಕಂಬ
೨೦. ಆಯ ೩
೨೧. .ರಾಯಂ ಪಮಾ.
೨೨. ಮಂದ್ರ ದಿತ್ವ
೨೩. ಆಯುಸ್ಸು ಶಿಂಹಾಯ
೨೪. ೮೪೫ ನಿಕಿ
೨೫. ಪುಷ್ಕರ ರಾ
೨೬. ಜಾಂಶೆ
೨೭. ಪರಮ ಮೈತ್ರಿ
೨೮. ತಾರಾ ಬಲವಾಗಿ
೨೯. ರು ಶ್ರೀ
೩೦. ಮಹದಾ(ನಂ)

**ಶಾಸನದ ವಿಶ್ಲೇಷಣೆ:**

ಈ ಶಾಸನವು ೩೦ ಸಾಲುಗಳಿಂದ ಕೂಡಿದ್ದು, ದೇವಾಲಯದ ವಾಸ್ತುರಚನೆಗೆ ಸಂಬಂಧಿಸಿದಂತೆ ರಚನೆಯಾದ ಅಪರೂಪದ ಶಾಸನವಾಗಿದೆ. ಶಾಸನಗಳಲ್ಲಿ ಸಾಮಾನ್ಯವಾಗಿ ದೇವಾಲಯ ನಿರ್ಮಾಣ, ದಾನದತ್ತಿಗೆ ಸಂಬಂಧಿಸಿದ ವಿಷಯಗಳು ಇರುತ್ತವೆ. ಆದರೆ ಈ ಶಾಸನದಲ್ಲಿ ದೇವಾಲಯದ ವಾಸ್ತುರಚನೆಯ ಭಾಗಗಳಾದ ಗರ್ಭಗುಡಿ, ಸುಖನಾಸಿ, ಅಂತರಾಳ, ನವರಂಗ, ಮುಖಮಂಟಪ, ಮಹಾದ್ವಾರಗಳನ್ನು ದೇವಾಲಂಯು ರಚನೆಗೊಂಡಿರುವಂತೆ ಚೌಕಾಕಾರದ ಪಟ್ಟಿ(Box)ಗಳಲ್ಲಿ ಗುರುತಿಸಿರುವುದನ್ನು ಕಾಣಬಹುದು. ಈ ದೇವಾಲಯ ಹೊಂದಿರಬಹುದಾದ ವಿಸ್ತೀರ್ಣದ ಅಳತೆಯನ್ನು ಪೂರ್ವಪಶ್ಚಿಮ ೩೫(ಅಡಿ?), ಗೂಡ(ಗರ್ಭಗೃಹ?) ಉತ್ತರ ೩೫ ಎಂದು ಸೂಚಿಸುತ್ತದೆ. ದೇವಾಲಯ ಕಟ್ಟಲು ಖರ್ಚಾದ ವೆಚ್ಚದ ಬಗ್ಗೆ ವಿವರಣೆ ಇದೆ.

ಈ ಶಾಸನದ ಕೊನೆಯಲ್ಲಿ ಶ್ರೀಮಹಾದಾನ ಎಂಬ ಪದ ಪ್ರಯೋಗ ಬರುವುದರಿಂದ ದೇವಾಲಯಕ್ಕೆ ಹಣವನ್ನು ದಾನವಾಗಿ ನೀಡಿರುವುದು ಸ್ಪಷ್ಟವಾಗುತ್ತದೆ. ಈ ಶಾಸನದಲ್ಲಿ ದೇವಾಲಯ ನಿರ್ಮಿಸಿದವರ ಹಾಗೂ ದಾನನೀಡಿದವರ ವಿವರಗಳಿಲ್ಲ. ಆದ್ದರಿಂದ ಈ ಎರಡು ಶಾಸನಗಳನ್ನು ಒಂದೇ ಕಾಲದಲ್ಲಿ ಹಾಕಿಸಿರುವ ಸಾಧ್ಯತೆಗಳಿವೆ. ಏಕೆಂದರೆ ಒಂದನೇ ಶಾಸನದಲ್ಲಿ ದೇವಾಲಯ ನಿರ್ಮಾಣದ ವಿಷಯವನ್ನು ತಿಳಿಸಿ, ಎರಡನೇ ಶಾಸನದಲ್ಲಿ ದೇವಾಲಯ ನಿರ್ಮಾಣ ಮಾಡಿರುವ ವಾಸ್ತು ರಚನೆಯನ್ನು ಹಾಗೂ ಖರ್ಚಿನ ವಿಚಾರವನ್ನು ತಿಳಿಸಲಾಗಿದೆ.

ಪ್ರಸ್ತುತ ಈ ದೇವಾಲಯವು ಮೈಸೂರು ಒಡೆಯರ ಕಾಲದಲ್ಲಿ ನಿರ್ಮಾಣವಾಗಿದ್ದು, ಗರ್ಭಗೃಹ, ಅಂತರಾಳ, ನವರಂಗ, ಮುಖಮಂಟಪ ಮತ್ತು ರಾಯಗೋಪುರಗಳನ್ನು ಹೊಂದಿದೆ. ಈ ದೇವಾಲಯದ ಗರ್ಭಗುಡಿಯಲ್ಲಿ ವೆಂಕಟೇಶ್ವರನ ವಿಗ್ರಹವಿದೆ. ನವರಂಗದಲ್ಲಿ ಚನ್ನಕೇಶವ, ವಿಷ್ವಕ್ಸೇನ, ಆಳ್ವರ ವಿಗ್ರಹವಿದೆ. ಬಾಗಿಲುವಾಡದ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಬಾಗಿಲಿನ ಇಕ್ಕೆಲಗಳಲ್ಲಿ ಜಯ ವಿಜಯರ ಶಿಲ್ಪಗಳಿವೆ. ಬಾಗಿಲನ್ನು ಲತಾಬಳ್ಳಿಗಳಿಂದ ಅಲಂಕರಿಸಲಾಗಿದೆ. ದೇವಾಲಯದ ಆವರಣದಲ್ಲಿ ೪ ಅಡಿ ಎತ್ತರದ ಬಲಿಪೀಠವಿದೆ. ಈ ಬಲಿಪೀಠದ ಕೆಳಭಾಗದಲ್ಲಿ ಎಂಟು ದಿಕ್ಕುಗಳಲ್ಲಿಯೂ ಆನೆಯ ಶಿಲ್ಪವಿದ್ದು, ಪೀಠವನ್ನು ಹೊತ್ತಿರುವಂತೆ ಕೆತ್ತಲಾಗಿದೆ. ಮೇಲ್ಭಾಗದಲ್ಲಿ ವಿಷ್ಣುವಿನ ಶಿಲ್ಪಗಳಿಂದ ವಿಶೇಷವಾಗಿ ರಚನೆಯಾಗಿದೆ.

(ಈ ಶಾಸನವನ್ನು ಓದಲು ಸಹಾಯ ಮಾಡಿದ ಡಾ.ಎಂ.ಜಿ.ಮಂಜುನಾಥ, ಸೀತಾರಾಮ ಜಾಗೀರ್‌ದಾರ್, ಎಂ.ಕೆ. ಮಂಜುನಾಥ ಅವರಿಗೆ ಹಾಗೂ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಹಕರಿಸಿದ ಪೂಜ್ಯ ತಂದೆ ಹೆಚ್.ಡಿ. ಶಿವಮಾದಯ್ಯನವರಿಗೆ ಕೃತಜ್ಞತೆಗಳು).

ಕರ್ನಾಟಕ ಲೋಚನ
ಸಂಪುಟ ೨೯, ಸಂಚಿಕೆ ೧
ಜನವರಿ-ಜೂನ್, ೨೦೧೫

# ೧೩. ವಚನ ವಾಙ್ಮಯವಿಹಾರ

-ಪ್ರೊ. ಆರ್. ವಸಂತಕುಮಾರ್*

ಕರ್ನಾಟಕದ ಮಟ್ಟಿಗೆ ಹನ್ನೆರಡನೆಯ ಶತಮಾನ ಕ್ರಾಂತಿಕಾರಿ ಕಾಲಘಟ್ಟ. ಸಾಹಿತ್ಯ ದೃಷ್ಟಿಯಿಂದ, ಭಾಷಾ ದೃಷ್ಟಿಯಿಂದ ಹೊಸ ಮನ್ವಂತರದ ಕಾಲಘಟ್ಟ. ಇದಕ್ಕೆ ಕಾರಣ ಶರಣ ಚಳವಳಿ ಹಾಗೂ ಅದರ ಉಪಉತ್ಪತ್ತಿಯಾದ ವಚನಸಾಹಿತ್ಯ.

"ಆನು ಒಲಿದಂತೆ ಹಾಡುವೆ" ಎಂಬ ಬಸವಣ್ಣನವರ ಆಚಾರ್ಯ ನುಡಿಯೇ ವಚನ ಸಾಹಿತ್ಯದ ಮೂಲಬೇರು. ಇಂತಹ ವಚನ ವಾಙ್ಮಯಕ್ಕೆ ಸಂಬಂಧಿಸಿದ ವಚನಗಳ ವಿಶ್ಲೇಷಣೆ, ವಿವಿಧ ವಚನಕಾರರ ವ್ಯಕ್ತಿತ್ವ ವಿಶಿಷ್ಟತೆಯ ವಿಷಯಗಳೊಂದಿಗೆ ವಚನ ವಾಙ್ಮಯದ ಮುಂಗೋಳಿ ಎನಿಸಿದ ಕೊಂಡಗುಳಿ ಕೇಶಿರಾಜನನ್ನು ಕುರಿತ ಬಹು ಮುಖ್ಯ ಮಾಹಿತಿಗಳು ಹಾಗೂ ಬಸವೇಶ್ವರ ಮತ್ತು ಪೈಗಂಬರರವಿಶಿಷ್ಟ ವ್ಯಕ್ತಿತ್ವ ಮತ್ತು ವೈಚಾರಿಕ ಪ್ರಖರತೆಯನ್ನು ಒಟ್ಟಿಗೆ ತುಲನೆ ಮಾಡುವ ಪ್ರಯತ್ನದ ಫಲವೇ ಪ್ರೊ. ಜಿ. ಅಬ್ದುಲ್ ಬಷೀರ್ ಅವರ 'ವಚನ ವಾಙ್ಮಯ ವಿಹಾರ' ಎಂಬ ಕೃತಿಯ ಬಹುಮುಖ್ಯ ಆಶಯವಾಗಿದೆ.

ಮೂಲತಃ ಕನ್ನಡ ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿರುವ ಲೇಖಕರು ಬೇರೆ ಬೇರೆ ಸಂದರ್ಭಗಳಲ್ಲಿ ಮಾಡಿದ ಉಪನ್ಯಾಸಗಳು, ಮಂಡಿಸಿದ ಪ್ರಬಂಧಗಳನ್ನು ಒಟ್ಟಿಗೆ ಸೇರಿಸಿ ಪ್ರಕಟಿಸಿದ್ದಾರೆ. ಒಟ್ಟು ಈ ಕೃತಿಯಲ್ಲಿ ಹದಿಮೂರು ಲೇಖನಗಳಿವೆ. 'ವಚನ ವಾಙ್ಮಯದ ಮುಂಗೋಳಿ ಕೊಂಡಗುಳಿ ಕೇಶಿರಾಜ' ಎಂಬ ಮೊದಲ ಲೇಖನವು ಆತನ ಕಾಲ, ವಚನ ಸಾಹಿತ್ಯಕ್ಕೆ ಆತ ನೀಡಿರುವ ಕೊಡುಗೆ, ವಚನಕಾರರಲ್ಲಿ ಆತನಿಗಿರುವ ಸ್ಥಾನ ಇತ್ಯಾದಿ ವಿಚಾರಗಳನ್ನು ಇಲ್ಲಿ ಪ್ರಮುಖವಾಗಿ ಪ್ರಸ್ತಾಪಿಸಿದ್ದಾರೆ. ವೀರಶೈವ ಧರ್ಮದ ಉಗಮದ ವಿಚಾರವನ್ನು ಚರ್ಚಿಸುವಾಗ ಈತನನ್ನು, ಈತನ ಕೃತಿಗಳನ್ನು

* ಕನ್ನಡ ಪ್ರಾಧ್ಯಾಪಕರು, ನಂ.೧೨೩೬/ 'ಬಿ', "ಅಂಜನಾದ್ರಿ', ೧೦ನೇ ಮುಖ್ಯರಸ್ತೆ, ಪ್ರಕಾಶನಗರ, ಬೆಂಗಳೂರು- ೫೬೦೦೨೧. ಮೊ: ೯೯೬೪೦೫೫೭೮೦

ಮುಖ್ಯ ಆಕರವನ್ನಾಗಿಯೂ, ಆಧಾರವನ್ನಾಗಿಯೂ ಪರಿಗಣಿಸಬೇಕಾಗುತ್ತದೆ ಎಂಬ ಲೇಖಕರ ಅಭಿಪ್ರಾಯ ಸ್ವಾಗತಾರ್ಹವಾದುದಾಗಿದೆ.

ವಚನಸಾಹಿತ್ಯ ಚಳವಳಿಯ ಉದ್ದೇಶ ಆತ್ಮೋದ್ಧಾರ ಹಾಗೂ ಸಮಾಜೋದ್ಧಾರ. ಈ ದೃಷ್ಟಿಯಿಂದ ಆದ್ಯ ವಚನಕಾರ ಎಂಬ ಕೀರ್ತಿಗೆ ಪಾತ್ರನಾಗಿರುವ ಜೇಡರ ದಾಸಿಮಯ್ಯನ ಬಹುಮುಖ್ಯವಾದ ಒಂದೇ ವಚನದ ಪರಿಪೂರ್ಣ ವಿಶ್ಲೇಷಣೆಯೇ ಈ ಕೃತಿಯ ಎರಡನೆಯ ಲೇಖನ. ಮನುಷ್ಯ ಕೀರ್ತಿಶನಿಯ ದೃಷ್ಟಿಯಿಂದ ಮಾಡುವ ಅನೇಕ ದಾನಗಳನ್ನು ಪ್ರಸ್ತಾಪಿಸುತ್ತಲೇ ಅವುಗಳ ಅಲ್ಪಮಿತಿಗಳನ್ನು ಹೇಳುತ್ತಾರೆ. ಆದರೆ ದೈವದಾನಗಳು ಶಾಶ್ವತವಾಗಿರುವಂಥವು, ಸಕಲ ಜೀವರಾಶಿಗೆ ತೃಪ್ತಿ ನೀಡುವಂತಹವು ಎಂದಿದ್ದಾರೆ.

“ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಬೀಸುವ ವಾಯು ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ”

ಎಂಬ ದಾಸಿಮಯ್ಯನ ಈ ವಚನವನ್ನು ಇಟ್ಟುಕೊಂಡು ಪ್ರತಿ ಪದದ ಅರ್ಥ ವಿಶ್ಲೇಷಣೆಯ ಜೊತೆಜೊತೆಗೆ ಅದರ ಛಂದಸ್ಸಿನ ರೂಪವನ್ನು ಗುರುತಿಸಿರುವುದು ಅಧ್ಯಯನದ ದೃಷ್ಟಿಯಿಂದ ಮಹತ್ವದ್ದಾಗಿದೆ.

‘ವಿಶ್ವಮಾನವ ಬಂಧು’ ಎಂಬ ಬಸವಣ್ಣನವರ ಕುರಿತ ಮೂರನೆಯ ಲೇಖನದಲ್ಲಿ ಅವರನ್ನು ಮನುಕುಲದ ಉದ್ಧಾರಕ ಎಂದೇ ಸ್ಪಷ್ಟವಾಗಿ ಗುರುತಿಸಿದ್ದಾರೆ. ಬಸವಣ್ಣನವರ ಮನೋವೈಶಾಲ್ಯತೆ ಹಾಗೂ ಅಪ್ರತಿಮ ಧೈರ್ಯವನ್ನು ಸಮರ್ಥಿಸುವ ಹಲವಾರು ವಚನಗಳನ್ನು ಉದಾಹರಣೆಯಾಗಿ ಉಲ್ಲೇಖಿಸಿದ್ದಾರೆ. ಭಾವೈಕ್ಯತೆ, ಸಹಬಾಳ್ವೆ ಹಾಗೂ ವಿಶ್ವಬಾಂಧವ್ಯಗಳು ಅಗತ್ಯವಿರುವ ಈ ಕಾಲದಲ್ಲಿ ಬಸವಣ್ಣನವರ ಸಂದೇಶವು ಸ್ಫೂರ್ತಿಯ ಸೆಲೆಯಾಗಿದೆ ಎಂದು ಪ್ರೊ. ಬಷೀರ್ ಅವರು ಪ್ರತಿಪಾದಿಸಿದ್ದಾರೆ.

ಮುಹಮ್ಮದ್ ಪೈಗಂಬರ್ ಹಾಗೂ ಬಸವೇಶ್ವರರು ತಮ್ಮ ಅನುಚರರಿಗೆ ನೀಡಿದ ಸಂದೇಶವನ್ನು ಉಲ್ಲೇಖಿಸುವ ಪ್ರಯತ್ನವೇ ನಾಲ್ಕನೆಯ ಲೇಖನ. ಕೃತಿಯ ದೃಷ್ಟಿಯಿಂದ ಬಹುವಿಸ್ತಾರವಾದ ಲೇಖನ. ಈ ಇಬ್ಬರೂ ಮಹಾನ್ ವ್ಯಕ್ತಿಗಳ ಸಂದೇಶವನ್ನು ತೌಲನಿಕವಾಗಿ ಪ್ರಸ್ತಾಪಿಸುತ್ತ, ಇರ್ವರಿಂದ ಸ್ಥಾಪಿತವಾದ ಇಸ್ಲಾಂ ಮತ್ತು ವೀರಶೈವ ಧರ್ಮಗಳ ಕಥೆ, ತ್ಯಾಗ–ಬಲಿದಾನಗಳ ಕಥೆಯಾಗಿದೆ ಎಂಬ ಸದಭಿಪ್ರಾಯ ವ್ಯಕ್ತಪಡಿಸಿದ್ದಾರೆ.

‘ಘಟ್ಟಿವಾಳಯ್ಯನ ವ್ಯಕ್ತಿತ್ವ ಮತ್ತು ವಚನಗಳು’ ಎಂಬ ಐದನೆಯ ಲೇಖನದಲ್ಲಿ ಆತನಿಗೆ ಸಂಬಂಧಿಸಿದ ಪರಿಚಯಾತ್ಮಕವಾದ ವಿಚಾರ ಉಲ್ಲೇಖಿಸಿದ್ದಾರೆ. ಇತರೆ ವಚನಕಾರರು ಆತನ ಬಗ್ಗೆ ಎಂತಹ ಅಭಿಪ್ರಾಯ ಹೊಂದಿದ್ದರು ಎಂಬುದನ್ನು ಇಲ್ಲಿ

ಪ್ರಸ್ತಾಪಿಸಿದ್ದಾರೆ. ಧರ್ಮ, ಕಾವ್ಯಧರ್ಮಗಳೆರೆಡರ ತಾದಾತ್ಮ್ಯವೇ ವಚನ ಸಾಹಿತ್ಯ ಎಂದಿರುವ ಲೇಖಕರು ಘಟ್ಟಿವಾಳಯ್ಯನ ವಚನಗಳಿಗೂ ಈ ಮಾತು ಹೇಗೆ ಅನ್ವಯಿಸುತ್ತದೆಂಬುದನ್ನು ಪರಾಮರ್ಶಿಸಿ ತೋರಿಸಿದ್ದಾರೆ. ಉಳಿದಂತೆ ಮೋಳಿಗೆ ಮಹಾದೇವಿಯ ವಚನ ವಿಶ್ಲೇಷಣೆ, ಶಿವಶರಣರು ಮತ್ತು ಸೂಫಿಗಳು, ಶಿವಶರಣರ ಸಾಹಿತ್ಯಕ ಚಿಂತನ ಎಂಬ ಇತರ ಲೇಖನಗಳು ಓದುಗರಿಗೆ ಅಗತ್ಯವಾದ ಮಾಹಿತಿ ಹಾಗೂ ವೈಚಾರಿಕತೆಯನ್ನು ಮೂಡಿಸುವಲ್ಲಿ ಯಶಸ್ವಿಯಾಗುತ್ತವೆ. ಉಳಿದಂತೆ ಕೊಟ್ಟಣದ ಸೋಮವ್ವೆ, ಚಂದಿಮರಸ, ದಸರಯ್ಯ ಎಂಬ ಲೇಖನಗಳು ಅವರುಗಳ ವ್ಯಕ್ತಿತ್ವಗಳನ್ನು ಪರಿಚಯಿಸುತ್ತಲೇ, ವಚನ ಸಾಹಿತ್ಯಕ್ಕೆ ಅವರುಗಳ ಕೊಡುಗೆಗಳೇನು ಎಂಬುದನ್ನು ಸಾಬೀತುಪಡಿಸಿದ್ದಾರೆ. ಒಟ್ಟಿನಲ್ಲಿ ಈ ಗ್ರಂಥದ ಎಲ್ಲ ಲೇಖನಗಳನ್ನು ಅವಲೋಕಿಸಿದರೆ 'ವಚನ ಸಾಹಿತ್ಯ'ದ ಬಗ್ಗೆ ಒಂದು ಒಟ್ಟು ನೋಟ ಲಭಿಸುತ್ತದೆ ಎನ್ನಬಹುದು. ವಚನಸಾಹಿತ್ಯ ಪ್ರೇಮಿಗಳೂ ಸಾಹಿತ್ಯಾಸಕ್ತರೂ ಗಮನಿಸಲೇಬೇಕಾದ ಮಹತ್ವದ ಕೃತಿ ಇದಾಗಿದೆ.

ಇಂಥ ಮಹತ್ವದ ಕೃತಿಯನ್ನು ಹೊರತಂದ ಪ್ರೊ. ಜಿ. ಅಬ್ದುಲ್ ಬಷೀರ್ ಅವರು ಅಭಿನಂದನಾರ್ಹರು.*

---

*** ಕೃತಿ: ವಚನವಾಙ್ಮಯ ವಿಹಾರ**
ಲೇಖಕರು : ಪ್ರೊ. ಜಿ. ಅಬ್ದುಲ್ ಬಷೀರ್
ಪುಟ : ೧೭೬
ಬೆಲೆ : ರೂ. ೨೦೦.
ಪ್ರಕಾಶಕರು : ಅಖಿಲಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು.

■

'ಕರ್ನಾಟಕ ಲೋಚನ' ಒಂದು ವಿದ್ವತ್ ಪತ್ರಿಕೆ. ಮುಖ್ಯವಾಗಿ ಸಂಶೋಧನೆ, ಪ್ರಾಚೀನ ಕನ್ನಡ ಸಾಹಿತ್ಯ, ಸಂಸ್ಕೃತಿ ವಿವೇಚನೆಗೆ ಮೀಸಲಾಗಿದೆ. ಕನ್ನಡ ನಾಡಿನ ಹಿರಿಯ-ಕಿರಿಯ ಸಾಹಿತ್ಯ ಚಿಂತಕರ ಮೂಲ ಆಶಯಕ್ಕೆ ಧಕ್ಕೆ ಬಾರದ ಹಾಗೆ ಉಪಯುಕ್ತ ಲೇಖನಗಳನ್ನು ಬರೆದುಕೊಡುವುದರ ಮೂಲಕ ಪತ್ರಿಕೆ ನಡೆಯುತ್ತಿದೆ. ಸಮಗ್ರ ಕನ್ನಡ ಸಾಹಿತ್ಯದ ಸಂವರ್ಧನೆಗೆ ಸಹಾಯಕವಾದ 'ಲೋಚನ' ಸಂಶೋಧನೆ, ಸಂಸ್ಕೃತಿ ಆಸಕ್ತರಿಗೆ ಉಪಯುಕ್ತವಾಗಿದೆ. ಇದರ ಉಪಯೋಗವನ್ನು ಕನ್ನಡ ಸಹೃದಯರು ಬಳಸಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಡಾ॥ ಪಿ.ವಿ. ನಾರಾಯಣ
ಅಧ್ಯಕ್ಷರು
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ